ಶ್ರೀ ಶೇಷಾಚಲ ಗ್ರಂಥಮಾಲೆ, ಆನಂದವನ

# ಅವಿವಾಹಿತರ ಸಮಸ್ಯೆ

(ಅತ್ಯುಪಯುಕ್ತ ಸಾಮಾಜಿಕ ಪ್ರಬಂಧ)




ಲೇಖಕ:

ರಾಜರತ್ನ ನಾ. ವಿ. ಜೋಶಿ,

ಬಿ. ಎ., ಎಲ್. ಎಲ್. ಬಿ.

ಹಾಯ್‌ಕೋರ್ಟ ಪ್ಲೀಡರ, ಬಡೋದೆ





ಅನುವಾದಕ ಮತ್ತು ಪ್ರಕಾಶಕ:

ಭಿ. ಪ. ಕಾಳೆ,

ಶ್ರೀ ಶೇಷಾಚಲ ಪ್ರೆಸ್ಸ,

ಆನಂದವನ-ಆಗಡಿ


—:o:—




ಜುಲೈ 1941

೧ ರೂ.

# ಪ್ರಕಾಶಕರ ಎರಡು ಮಾತುಗಳು.

ಈ ಪುಸ್ತಕವನ್ನು ಶ್ರೀಮಾನ್ ರಾಜರತ್ನ ನಾ. ವಿ. ಜೋಶಿ, ಹಾಯ್ಕೋರ್ಟ ವಕೀಲ, ಬಡೋದೆ, ಇವರು ಮರಾಠಿಯಲ್ಲಿ ಬರೆದು ಪ್ರಸಿದ್ಧಿಸಿ ಕೆಲವೇ ದಿನಗಳಾದವು. ಇದರೊಳಗಿನ ವಿಷಯಗಳು ಅತ್ಯಂತ ಉಪಯುಕ್ತ ಹಾಗು ಅನುಕರಣೀಯಗಳಾದ್ದರಿಂದ ನಾನು ಅವರ ಒಪ್ಪಿಗೆ ಪಡೆದು, ಕನ್ನಡಿಸಿ, ಇದನ್ನು ನಮ್ಮ ಕನ್ನಡ ವಾಚಕರ ಮುಂದಿರಿಸುತ್ತೇನೆ.

ಈ ಪುಸ್ತಕದ ಹೆಸರು 'ಅವಿವಾಹಿತರ ಸಮಸ್ಯೆ' ಎಂದಿದ್ದರೂ ಇದರಲ್ಲಿಯ ವಿಷಯಗಳು ಅವಿವಾಹಿತ ಹಾಗು ವಿವಾಹಿತ ಎಲ್ಲ ಸ್ತ್ರೀ-ಪುರುಷರೂ ಓದಿ ಮನನ ಮಾಡಬಹುದಾಗಿವೆ.

ಕಾಗದದ ಮಹರ್ಘತೆ ಮತ್ತು ತುಟಾಗ್ರತೆಯ ಮೂಲಕ ಈ ಅತ್ಯುತ್ತಮ ಪುಸ್ತಕದ ಪ್ರತಿಗಳನ್ನು ಅತ್ಯಲ್ಪ ತೆಗೆಯಬೇಕಾಯಿತು. ಕಾರಣ ವಾಚಕರು ಇದನ್ನು ತರಿಸಿಕೊಂಡು ಓದಲಿಕ್ಕೆ ತ್ವರೆಮಾಡಬೇಕು; ಹಿಂದಿನಿಂದ ಪ್ರತಿಗಳಿಲ್ಲವೆಂದು ಬರೆಯುವ ಪ್ರಸಂಗವುಂಟಾದೀತು.

ಆನಂದವನ
ತಾ|| ೨೮—೭—೪೧

—ಪ್ರಕಾಶಕ



## — ಪರಿವಿಡಿ —

# ಅವಿವಾಹಿತರ ಸಮಸ್ಯೆ

## ಅವಿವಾಹಿತರ ಶಾಪ :: ೧

ಯಾವುದೊಂದು ಆವಶ್ಯಕ ಸಂಗತಿಯನ್ನು ಮುಂದೂಡುವ ಚಾಳಿ ಹತ್ತಿತೆಂದರೆ, ಬರಬರುತ್ತ ಅದರ ಆವಶ್ಯಕತೆಯೇ ಇಲ್ಲದಂತಾಗುತ್ತದೆ. ಇದೇ ಸ್ಥಿತಿಯು ಲಗ್ನಸಂಸ್ಥೆಯದಾಗಿರುತ್ತದೆ. ಸಮಾಜಸಂಧಾರಣೆಗೆ ಲಗ್ನಸಂಸ್ಥೆಯು ಆವಶ್ಯಕವಾಗಿದೆಯೆಂದು ಧರ್ಮಶಾಸ್ತ್ರಗಳು ಇದುವರೆಗೆ ಪ್ರತಿಪಾದಿಸುತ್ತ ಬಂದವು. ವ್ಯಕ್ತಿಯ ಸ್ವಾಸ್ಥ್ಯಕ್ಕೆ ಲಗ್ನವಾಗುವದು ಅತ್ಯಂತ ಆವಶ್ಯಕವಾಗಿರುತ್ತದೆಂದು ಪರಂಪರೆಯೂ ಸಾಂಸಾರಿಕ ತೊಡರುಗಳೂ ತಮ್ಮ ತಮ್ಮ ಪರಿಯಿಂದ ಹೇಳುತ್ತ ಬಂದಿವೆ. ವಿಷಯ ಸುಖದ ಲಾಲಸೆಯು ಸ್ವಂತದ ತೃಪ್ತಿಗಾಗಿ ಕೇವಲ ಲಗ್ನಸಂಸ್ಥೆಯ ಕಡೆಗೇ ಚಾತಕದ ಆತುರತೆಯಿಂದ ನೋಡುತ್ತ ಬಂದಿರುತ್ತದೆ; ಮತ್ತು ಇವೆಲ್ಲವುಗಳೂ ಸೇರಿ ಲಗ್ನಸಂಸ್ಕಾರವೆಂಬುದು ಪ್ರತಿಯೊಬ್ಬ ವ್ಯಕ್ತಿಗೆ ಅತ್ಯವಶ್ಯವೆಂದು ನಿರ್ಧರಿಸಿ ಲಗ್ನ ಸಂಸ್ಥೆಯನ್ನು ಬಲಪಡಿಸಿದವು. ಅನಂತ ಆವಶ್ಯಕಗಳನ್ನು ಮುಂಗಡ ಸಿದ್ಧಗೊಳಿಸುವ ಅತ್ಯವಸರದಲ್ಲಿ ಈ ಸಂಸ್ಕಾರವನ್ನು ತೀರ ಬಾಲ್ಯಕಾಲದಲ್ಲೂ ಮುಗಿಸಿಕೊಳ್ಳುವ ಬಗ್ಗೆ ಸಮಾಜವು ಯಾವ ಸಂಕುತನವನ್ನು ತೋರಿಸಿತೋ, ಅದರ ಪ್ರತಿಕ್ರಿಯೆಯು ಪ್ರೌಢ, ಅತಿ ಪ್ರೌಢ ವಿವಾಹಗಳ ಉತ್ತರೋತ್ತರ ಮೆಟ್ಟಿಲುಗಳನ್ನೇರುತ್ತ, 'ಲಗ್ನವೇ ಬೇಡ' ಎಂಬೀ ಕೊನೆಯ ಮೆಟ್ಟಿಲ ಕಡೆಗೆ ಧಾವಿಸುತ್ತ ನಡೆದಿದೆ.

ಬಾಲವಿವಾಹದ ಜೊತೆಗೆ ಪುನರ್ವಿವಾಹದ ರಾಜಮಾನ್ಯ ರೂಢಿಯೂ ಘಟಸ್ಫೋಟದ ನಿರಾತಂಕ ರಿಯಾಯತಿಯೂ ಪ್ರಚಲಿತಗಳಾಗಿದ್ದರೆ, ಬಾಲವಿವಾಹದ ವಿರುದ್ಧ ಇಷ್ಟು ಲೋಕಮತವು ಸಿದ್ಧವಾಗುತ್ತಿರಲಿಲ್ಲ; ದೃಢವಾಗುತ್ತಿರಲಿಲ್ಲ. ಇಂದಿಗೂ ಸದೃಢ ಸಶಕ್ತವಾಗಿ ಕಾಣುವ ಮಧ್ಯಮ ವರ್ಗದ

ಪೀಳಿಗೆಯು ಬಾಲವಿವಾಹದ ಮೇಲೆ ಪ್ರಜಾಹ್ರಾಸದ ಆರೋಪವಿರುವುದನ್ನು ಸಟಿಗೊಳಿಸುತ್ತಿದೆ. ಏನೇ ಆದರೂ ದಿನದಿನಕ್ಕೆ ತರುಣ ಪೀಳಿಗೆಯು ಹೆಚ್ಚೆಚ್ಚು ಅವಿವಾಹಿತವಾಗಿರಹತ್ತಿದೆ; ಮತ್ತು ಲಗ್ನವೇ ಬೇಡ ಎಂದೆನ್ನುವ ನಿರ್ಧಾರಕ್ಕೆ ತಲುಪುವವರ ಸಂಖ್ಯೆಯು ದಿನಮೇಕರೀತಿಯಿಂದ ಹೆಚ್ಚುತ್ತಲಿದೆ. ಈ ಬಗೆಯು ವ್ಯಕ್ತಿಯ ಹಾಗು ಸಮಾಜದ ದೃಷ್ಟಿಯಿಂದ ಅನಿವಾರ್ಯವಾಗಿದೆಯೋ ಹೇಗೆ? ಮತ್ತು ಅದು ಸ್ತ್ರೀ-ಪುರುಷರ ದೃಷ್ಟಿಯಿಂದ ಇಷ್ಟವೋ-ಅನಿಷ್ಟವೋ? ಎಂಬದರ ವಿವೇಚನವನ್ನು ನಾವು ಇಲ್ಲಿ ಮಾಡಬೇಕೆಂದಿರುತ್ತೇವೆ.

ಆರ್ಥಿಕ ತೊಂದರೆಯು ನಮ್ಮಗಳ ಯಾವ ಸಾತ್ವಿಕ ಮತ್ತು ಅತ್ಯಾವಶ್ಯಕ ಆನಂದವನ್ನು ತುಟ್ಟಿ ಮಾಡಿದೆಯೋ, ಅವುಗಳಲ್ಲೇ ಕುಟುಂಬ ಸೌಖ್ಯವೂ ಒಂದಾಗಿದೆ. ಇಂದಿನ ಪ್ರೌಢ ವಿವಾಹಕ್ಕೇ ಏಕೆ, ಲಗ್ನಮಾಡಿಕೊಳ್ಳದ ನಿರ್ಧಾರಕ್ಕೂ ದುಡ್ಡಿನ ಅಡಚಣಿಯೇ ವಿಶೇಷ ಹೊಣೆಯಾಗಿದೆ. ಸ್ತ್ರೀ-ಪುರುಷರಿಗೆ ಒಬ್ಬರಿಗೊಬ್ಬರ ಸಹವಾಸ ಸುಖದ, ವಿಷಯ ಸುಖದ, ಮೈತ್ರಿಯ, ಸಹಾಯದ ಇಚ್ಛೆಯೂ ಆತುರತೆಯೂ ಅನಿಸುತ್ತಿರುವದಿಲ್ಲೆಂತಿಲ್ಲ. ಜೀವನಕಲಹದ ಗೊಂದಲದಲ್ಲಿ ತರುಣನು ಅತ್ಯಂತ ಗಾಸಿಯಾಗಿ ಹೋಗುವದರಿಂದ, ಆತನಿಗೆ ತನ್ನ ಆ ನೈಸರ್ಗಿಕ ಲಾಲಸೆಗಳನ್ನು ಮನಸ್ಸಿನಲ್ಲೇ ಹತ್ತಿಕ್ಕುತ್ತಿಕೊಳ್ಳಬೇಕಾಗುತ್ತದೆ. ಇಷ್ಟೇ ಅಲ್ಲ, ಈ ಕಾಳಗದಲ್ಲಿ ಬೇರೆ ಆದಾರಿಗೂ ಕಾಟವುಂಟಾಗಬಾರದೆಂದು ಆತನು ಹೊಸ ಆಪ್ತೇಷ್ಟ ಸಂಬಂಧಿಕರ ನೆವದಿಂದ ತನ್ನೊಡನೆ ಮತ್ತಾರನ್ನೂ ಆ ಸಂಕಟದಲ್ಲೆಳೆಯಲಿಚ್ಛಿಸುವದಿಲ್ಲ. ತಾಯಿ-ತಂದೆಗಳ ಜೀವದ ಮೇಲೆ ಬದುಕುವ ನಾಚಿಕೆಗೇಡಿ ಹುಡುಗನ ಹೆಂಡತಿಗೆ ಅವರಿಂದಾಗುವ ಕಾಟವೇ ನೆರೆಹೊರೆಯ ಕಲಿತ ಹುಡುಗರಿಗೆ 'ಸ್ವಂತ ಸಂಪಾದಿಸಲು ಪ್ರಾರಂಭಿಸಿದ ಹೊರತು ಲಗ್ನಮಾಡಿಕೊಳ್ಳಲಿಕ್ಕಿಲ್ಲ.' ಎಂಬ ನಿಶ್ಚಯದ ಭಂಡಾರವನ್ನು ಮೊಟ್ಟಮೊದಲು ಬಡಕೊಳ್ಳಹಚ್ಚಿತು. ಉಚ್ಚ ಶಿಕ್ಷಣದ ಹೆಚ್ಚಿನ ಖರ್ಚನ್ನು ಪೂರೈಸುವಾಗ ಹಿರಿಯರು ಅತ್ಯಂತ ತಾಪಕ್ಕೊಳಗಾಗಹತ್ತಿದ್ದರಿಂದ ಎಷ್ಟೋ ಪ್ರಸಂಗಗಳಲ್ಲಿ ಅವರು ಸ್ವಂತದ ಹೊಟ್ಟೆಗೆ ಕೂಡ ಕೇರು ಹಾಕಿಕೊಳ್ಳುವ ಪ್ರಸಂಗ ಬರಹತ್ತಿತು. ಇಂಥ ಸ್ಥಿತಿಯಲ್ಲಿ ಲಗ್ನದ ನೆವದಿಂದ ಮನೆಯೊಳಗೆ ಬರುವ ಹೊಸ ಸೊಸೆಯ ಪೋಷಣದ ಖರ್ಚು ಅವರಿಗೆ ನೀಗದಾಯಿತು. ಹೀಗೆ ಅವರ ಕರ್ತವ್ಯಕ್ಕೂ ಹುಮ್ಮಸ್ಸಿಗೂ ಒಮ್ಮೆಲೆ ತಡೆಯುಂಟಾಯಿತು.

ಹುಡುಗೆಯರಿಗುಂಟಾಗುವ ವೈಧವ್ಯ, ತದನಂತರ ಅವರಿಗಾಗುವ ಅನ್ನಾನ್ನ ದೆಸೆ ಇವುಗಳನ್ನು ನಿವಾರಿಸಲಿಕ್ಕೆ ಪೂರ್ವಸಿದ್ಧತೆಯೆಂದು ಉಪ ಜೀವಿಕೆಯ ಸಾಧನ ದೊರಕಿಸಲು ಶಕ್ಯವಾಗುವಷ್ಟು ಶಿಕ್ಷಣ ಕೊಡಿಸುವ ವ್ಯವಸ್ಥೆಗಾಗಿ ಪ್ರತಿಯೊಬ್ಬ ಹುಡುಗೆಯ ತಂದೆಯು ಹೆಣಗುತ್ತಿರುತ್ತಾನೆ. ಸ್ವಂತ ಮಗನೇ ಇಂದಿಗೆ ಸುಶಿಕ್ಷಿತ ಬೇಕಾರನಾಗಿ ತನ್ನ ತಂದೆಯ ಪಶ್ಚಾತ್ತಾಪದ ಹಾಗು ಬಹು ಜನ ಸಮಾಜದ ತಿರಸ್ಕಾರದ ವಿಷಯುವಾಗಿರುತ್ತಾನೆ. ಆತನು ತನ್ನೊಬ್ಬನ ಹೊಟ್ಟೆಯನ್ನೇ ಹೊರಲಿಕ್ಕೆ ಅಸಮರ್ಥನಾಗಿದ್ದಾನೆ. ಇಂಥ ಸ್ಥಿತಿಯಲ್ಲಿ ಲಗ್ನವಾಗಿ ಒಂದಕ್ಕೆ ಬದಲು ಎರಡು ಹೊಟ್ಟೆಗಳನ್ನು ಮಾಡಿ, ಆ ಅರೆಹೊಟ್ಟೆಯ ಜೀವನದಲ್ಲಿ ಭರ್ತಿ ಹಾಕಲಿಕ್ಕೆ ಆತನು ಹೇಗೆ ಸಿದ್ಧನಾದಾನು? ಹುಡುಗರು ಲಗ್ನವಾಗುವದಿಲ್ಲೆಂದ ಬಳಿಕ ಹುಡುಗೆಯರೂ ಅವಿವಾಹಿತ ರಾಗುಳಿಯುವವರೇ. ಯಾವ ಹುಡುಗೆಯರು ಉಪಜೀವಿಕೆಯ ವಿದ್ಯೆಯನ್ನು ಕರಗತ ಮಾಡಿಕೊಂಡಿರುವರೋ ಅಂಥ ಹುಡುಗೆಯರು ತಾವಾಗಿ ಲಗ್ನದ ನೆವದಿಂದ ಸ್ವಂತದ ಸ್ವಾತಂತ್ರ್ಯವನ್ನು ಕಳೆದುಕೊಳ್ಳಲಿಕ್ಕೆ ಸಿದ್ಧರಾಗುವ ದಿಲ್ಲ. ಗಳಿಸಹತ್ತಿರುವ ಕುಮಾರಿಕೆಯ ತಂದೆ-ತಾಯಿಗಳೂ ಆಪ್ತೇಷ್ಟರೂ ಅವಳಿಂದಾಗುವ ಆರ್ಥಿಕ ಸಹಾಯವನ್ನವಲಂಬಿಸಿರಹತ್ತುವರು. ಅವಳ ಪಾಲಕರು ಆಕೆಯ ಲಗ್ನದ ಬಗ್ಗೆ ಬರಿಯ ಉದಾಸೀನವೇ ಏಕೆ, ವಿರುದ್ಧವೂ ಆಗಿರುತ್ತಾರೆ! ಅವಳ ಶಿಕ್ಷಣಕ್ಕೆಂದು ವ್ಯಯಗೊಳಿಸಿದ ಹಣದ ಪ್ರತಿಫಲವಾಗಿ ಅವಳಿಂದ ತಮಗೆ ಆಜನ್ಮ ಆರ್ಥಿಕ ಸಹಾಯ ದೊರೆಯುತ್ತಿರಬೇಕೆಂಬ ಹಕ್ಕನ್ನು ಕೂಡ ಅವರು ಹೇಳಹತ್ತುತ್ತಾರೆ. ಯಾವ ಯುವಕನಿಗೆ ನೌಕರಿ-ಚಾಕರಿ ಸಿಗುವುದೋ, ಉದ್ಯೋಗ-ಧಂದೆಗಳು ದೊರಕುವವೋ ಅವನ ಆ ಪ್ರಾಪ್ತಿಯಾದರೂ ಆತನ ಖರ್ಚಿನ ಮಾನದಿಂದ ಅತ್ಯಲ್ಪವಾಗಿರುವದರಿಂದ, ಲಗ್ನವಾಗುವ ವಿಚಾರ ಮಾಡಲಿಕ್ಕೂ ಕೂಡ ಆತನು ಮನಸ್ಸು ಧೈರ್ಯ ಪಡುವದಿಲ್ಲ. ಬಾಲವಿವಾಹದಿಂದ ಪ್ರೌಢವಿವಾಹಕ್ಕೂ ಪ್ರೌಢವಿವಾಹದಿಂದ ಆಜನ್ಮ ಕೌಮಾರ್ಯದ ವರೆಗೂ ಸುಶಿಕ್ಷಿತ ಸಮಾಜವು ಒಂದೇಸವನೆ ಜಾರುತ್ತ ನಡೆದಿದೆ. ಇದಕ್ಕೆ ಆರ್ಥಿಕಹೀನ ದೆಸೆಯೊಂದೇ ಮುಖ್ಯ ಕಾರಣ ವಾಗಿರುತ್ತದೆ.

ಧಾರ್ಮಿಕ ಭೋಳೇ ತಿಳುವಳಿಕೆಯ ಉಚ್ಚಾಟನದೊಡನೆ ಸಂಸ್ಕಾರದ ಅಧಿಷ್ಠಾನವೂ ಮಹತ್ವವೂ ಇಲ್ಲದಂತಾಗಿದೆ ಷೋಡಶ ಸಂಸ್ಕಾರಗಳು ಪ್ರತಿ

ಯೊಬ್ಬ ವ್ಯಕ್ತಿಮಾತ್ರರ ಜೀವಿತದಲ್ಲಿ ಆಗಲೇಬೇಕೆಂಬ ತಿಳುವಳಿಕೆಯಿಂದ ಹಳೇ ಜನರು ಕುಂಟರು, ಮೂಕರು, ಕುರುಡರು, ರೋಗಿಷ್ಠರು ಮುಂತಾದ ಎಲ್ಲರ ಕಲ್ಯಾಣ-ಲಗ್ನ-ಕಾರ್ಯವನ್ನು ಸಾವಿರ ಸುಳ್ಳು ಹೇಳಿಯಾದರೂ ಮಾಡಿ ಬಿಡುತ್ತಿದ್ದರು. ಆ ಧಾರ್ಮಿಕ ಭಾವನೆಯು ಲೋಪವಾದುದರಿಂದ, ಸಂಸ್ಕಾರ ವೆಂದು ಅವಶ್ಯವಾಗಿ ಆಗುವ ಲಗ್ನಗಳ ಸಂಖ್ಯೆಯು ಒಮ್ಮೆಲೆ ಇಲ್ಲದಂತಾ ಯಿತು. ಮನುಷ್ಯಮಾತ್ರರ ಚಹ-ಕಾಫಿಗಳ, ಊಟ ಪಾಟಗಳ ಹಾಗು ನಿವಾಸದ ವ್ಯವಸ್ಥೆಯು ಉಪಾಹಾರದ ಅಂಗಡಿಗಳಲ್ಲಿ ಹಾಗು ಹೊಟೆಲ್ಲು ಗಳಲ್ಲಿ ಆಗಹತ್ತಿದಾಗಿನಿಂದ ಮನೆಮಾಡಿಕೊಂಡಿರುವ ಮಹತ್ವವೂ ಆವಶ್ಯ ಕತೆಯೂ ಒಮ್ಮೆಲೆ ಲೋಪವಾಯಿತು; ಮತ್ತು ಆ ಮನೆಮಾಡಿಕೊಂಡಿರುವು ದೆಂದರೆ ಲಗ್ನವಾಗೋಣ ಎಂಬ ಯಾವುದೊಂದು ಕಾರ್ಯಕಾರಣ ಘಟನೆಯು ಲಗ್ನಸಂಸ್ಥೆಗೆ ಇದುವರೆಗೆ ಬೆಂಗಾವಲಾಗಿದ್ದಿತೋ ಅದೂ ಇಲ್ಲದಂತಾಯಿತು. ತಿನ್ನುಣ್ಣುವ ತೊಂದರೆಯನ್ನು ನೀಗಿಸುವದಕ್ಕೆಂದೇ ಲಗ್ನವಾಗುವ ಅತ್ಯ ವಶ್ಯವದ ಉದಾಹರಣಗಳೂ ಇಲ್ಲದಂತಾಗಹತ್ತಿದವು.

ಆರ್ಥಿಕ ಕೊರತೆಯ ಮೂಲಕ ಕುಟುಂಬಗಳು ಫಟ್ ಫಟ್ಟೆಂದು ಒಡೆದು ವಿಭಕ್ತವಾಗಹತ್ತಿದವು. ಪ್ರತಿಯೊಬ್ಬ ವ್ಯಕ್ತಿಯು ತನ್ನ ಹೊಟ್ಟೆಯ ಚಿಂತೆಯನ್ನಷ್ಟೇ ಮಾಡಬೇಕೆಂಬ ಬಗೆಯು ಹೆಚ್ಚಾದಾಗಲು ಆ ಕೂಡಲೆ ಕೌಟುಂಬಿಕ ಪರಿಸ್ಥಿತಿಯುವೇ ಏಕೆ, ಕೌಟುಂಬಿಕ ಸುಖೀ ಜೀವನದ ಗುರ್ತು ಕೂಡ ಜನರಿಗಾಗದಾಯಿತು. ಕುಟುಂಬ ಸಂಸ್ಥೆ ಮತ್ತು ಕೌಟುಂಬಿಕ ಪರಂ ಪರೆಗಳನ್ನು ಸಾಗಿಸುವದಕ್ಕಾಗಿ ಲಗ್ನದ ಮಹತ್ವವು ಅನಿಸದಾಯಿತು. ಓದು ವುದಕ್ಕಾಗಿ ಹಾಗು ನೌಕರಿ-ಚಾಕರಿಗಳಿಗಾಗಿ ಹೆಚ್ಚು ಕಾಲದವರೆಗೆ ಒಬ್ಬೊಂ ಟಿಗರಾಗಿರುವವರು ಹಾಗು ಒಬ್ಬೊಂಟಿಗರಾಗಿರಲಿಕ್ಕೆ ಮನಮೆಚ್ಚಿದವರಾದಂಥ ಸ್ತ್ರೀ ಪುರುಷರು ವೈವಾಹಿಕ ಜೀವನಕ್ಕೆ ಹೆಚ್ಚಾಗಿ ಅಂಜಹತ್ತುತ್ತಾರೆ ಅತಿ ಪ್ರೌಢಾವಸ್ಥೆಯುವರೆಗೆ ಅವಿವಾಹಿತವಾಗಿರುವದರಿಂದ ವೈಷಯಿಕ ಪ್ರವೃತ್ತಿಗಳು ಅಲ್ಪಾವಧಿಯಲ್ಲೇ ಕುಂದಿಬಿಡುತ್ತವೆ; ಹಾಗು ಯಾವ ಸ್ತ್ರೀ-ಪುರುಷರು ಗಟ್ಟಿಮನಸ್ಸಿನವರು ಅಥವಾ ನೀತಿವಂತರು ಆಗಿರುವುದಿಲ್ಲವೋ ಅಂಥ ವರಿಗೆ ಲಗ್ನದ ಮಹತ್ವವೇನೆನಿಸಬೇಕು? ಮತ್ತು ಅವರಿಗೆ ವೈವಾಹಿಕ ಪವಿತ್ರ ಸುಖದ ಕಲ್ಪನೆಯಾದರೂ ಎಂಥದಿರಬೇಕು?

ಅವಿವಾಹಿತರಾಗಿರುವ ಜನರು ಹಾಗೆ ನೋಡಿದರೆ ಒಂದು ದೃಷ್ಟಿಯಿಂದ

ಸಂಪೂರ್ಣ ಸ್ವಾರ್ಥಿಗಳೇ ಸರಿ! ಹೆಚ್ಚಾದ ಜನರು ಕೇವಲ ತಮ್ಮೊಬ್ಬರ ದುಂದುಗಾರಿಕೆಗೆ ಕೊರತೆಯುಂಟಾದೀತೆಂಬ ನೆವದಿಂದ ಲಗ್ನವಾಗುವ ವಿಚಾರ ವನ್ನೇ ಮಾಡುವದಿಲ್ಲ. ಅಪ್ಸರೆಯರನ್ನು ಬೆಂಬತ್ತಿರುವ ಯುವಕರೂ, ಆಯ್. ಸಿ ಎಸ್. ರ ಸಲುವಾಗಿ ಧಾವಿಸುತ್ತಿರುವ ತರುಣಿಯರೂ ಕಾಲಾಂತರ ದಲ್ಲಿ ಲಗ್ನದ ಸಂತೆಯೊಳಗೆ ನಿರುಪಯುಕ್ತರೆಂದು ನಿರ್ಧರಿಸಿ, ಕೆಲಸಕ್ಕೆ ಬಾರದ ಜೀನಸುಗಳಂತಾಗಬೇಕಾಗುತ್ತವೆ; ಮತ್ತು ಮುಂದೆ ಮುಂದೆ ಅವರನ್ನು ವರಿ ಸಲು ಆದರೂ ಬಾರದಾಗುವರು. ಅವರು ತಮ್ಮ ತುದಿ-ಮೊದಲಿಲ್ಲದ ಮಹತ್ವಾ ಕಾಂಕ್ಷೆಗಳನ್ನು ಸಂಪೂರ್ಣವಾಗಿ ತೊರೆದರೂ ಕೂಡ ಅವರ ಕಡೆಗೆ ಅದಾರೂ ಹೊರಳಿ ನೋಡಲಿಕ್ಕೆ ಕೂಡ ಸಿದ್ಧರಾಗುವದಿಲ್ಲ. ಪದವಿಧಾರಿ ಹಾಗು ಗಳಿ ಸುವ ಕುಮಾರಿಕೆಯರನ್ನು ಲಗ್ನದ ಸಂತೆಯೊಳಗಿಂದ ನಿರಂತರ ಹೊರದೂಡಿರು ವರೋ ಏನೋ ಎನ್ನುವಂತೆ ಅವರ ಕಡೆಗೆ ಮತ್ತೆ ಅದಾರೂ ನೋಡದಾಗು ತ್ತಾರೆ. ಒಟ್ಟಿನಲ್ಲಿ ಅನೇಕ ಕಾರಣಗಳ ಮೂಲಕ ಲಗ್ನ ಸಂಸ್ಥೆಯು ಮೇಲಿನ ಜನರ ಆಧಾರ ಹಾಗು ನಂಬಿಗೆಗಳು ತಮ್ಮಷ್ಟಕ್ಕೆ ತಾವೇ ಹಾರಹತ್ತಿವೆ. ಲಗ್ನ ಕೂಡಿ ಬರುವದು, ಲಗ್ನವಾಗುವದು ಹಾಗು ಮುಂದೆ ಇಬ್ಬರೂ ಸರಿಯಾಗಿ ಬಾಳುವೆ ಮಾಡುವದು ಈ ಎಲ್ಲ ಸಂಗತಿಗಳು ತೀರ ತೊಂದರೆಯ ಹಾಗು ಅಯಶಸ್ವೀ ಪರಿಣಾಮದವಾಗಹತ್ತಿರುತ್ತವೆ. ಆದರಿಂದ ಲಗ್ನದ ಕಡೆಗೆ ದೂರಿನಿಂದ ನೋಡುವವರಿಗೂ ಬೆದರಿಕೆ ಎನಿಸಹತ್ತಿದೆ.

ಈ ಬಗೆಯಾಗಿ ಲಗ್ನವಾಗದಿರುವ ಚಟುವಟಿಕೆಗೆ ಅನುಕೂಲವಾದಂಥ ಪರಿಸ್ಥಿತಿಯೇ ಎಲ್ಲ ಕಡೆಯಿಂದ ನಿರ್ಮಾಣವಾಗಹತ್ತಿದಂತೆ ಕಾಣುತ್ತದೆ. ಆದರೂ ಲಗ್ನದ ಹೊರತು ಇರುವದು ಸ್ವತ ವ್ಯಕ್ತಿಮಾತ್ರಕ್ಕೂ ಸಮಾಜ ಕ್ಕೂ ಎಷ್ಟರಮಟ್ಟಿಗೆ ಹಿತಕರವಾದೀತೆಂಬದನ್ನು ನಾವು ಯೋಚಿಸಿ ನೋಡ ಬೇಕಾಗಿದೆ.

ಸ್ತ್ರೀ-ಪುರುಷ ಆಕರ್ಷಣವು ತೀರ ಗುರುತ್ವಾಕರ್ಷಣದ ನಿಯಮದಷ್ಟು ನಿಸರ್ಗಸಿದ್ಧವಾಗಿದ್ದು, ಅನಿವಾರ್ಯವೂ ಆಗಿದೆ. ತೀರ ಚಿಕ್ಕಂದಿನಿಂದ ಸಮ ವಯಸ್ಕ ವಿಜಾತೀಯರದೇ ಒಬ್ಬರೊಬ್ಬರ ಕಡೆಗೆ ಹೆಚ್ಚಾಗಿ ಎಳೆತವಿರುತ್ತದೆ. ಪರಸ್ಪರರ ಸ್ನೇಹ ಸಂಪಾದನೆಗಾಗಿ ಇಬ್ಬರಿಗೂ ಸಮನಾದ ಉತ್ಸುಕತೆಯೇ ಇರುತ್ತದೆ. ಈ ವಿಜಾತೀಯರೊಳಗಿನ ಆಕರ್ಷಣ ಶಕ್ತಿಯು ವಯೋಮಾನ ದಂತೆ ಒಂದೇಸವನೆ ಹೆಚ್ಚುತ್ತಿರುತ್ತದೆ. ವಿಶೇಷವಾಗಿ ಶರೀರ ರಚನೆಯಲ್ಲಿ

ಬಿತ್ತಿಟ್ಟ ವೈಷಯಿಕ ಆಕಾಂಕ್ಷೆಯ ಬೀಜವು ಹೇಗೆ ಹೇಗೆ ಬೇರುಗಟ್ಟುವದೋ, ಅದರಿಂದ ಪ್ರಾಣಿಮಾತ್ರರ ಸ್ವಂತದ ಒಬ್ಬೊಂಟಿಗ ಜೀವನವು ಅಪೂರ್ಣವೂ ಅರಿವಾಸಿಯೂ ಎಂದೆನಿಸಹತ್ತುತ್ತನೆ. ವ್ಯಕ್ತಿಮಾತ್ರದ ಬೆಳವಣಿಗೆಗಾಗಿ ಸಜಾತೀಯ ಸಖ-ಗೆಳತಿಯರಿಗಿಂತ, ವಿಜಾತೀಯ ಸಖಿ ಮಿತ್ರರದೇ ಪ್ರತಿಯೊಬ್ಬರಿಗೆ ಆವಶ್ಯಕವೆಂದೆನಿಸತೊಡಗುತ್ತದೆ. ಇಂಥವೇ ಆ ಮುಸುಗುಟ್ಟುವ ಯೌವನಾವಸ್ಥೆಯಲ್ಲಿ ಯುವಕನು ಹರೆಯದ ಜೀವಶ್ಚ ಕಂಠಶ್ಚ ಗೆಳೆಯರನ್ನು ಬಿಟ್ಟು ಗೆಳತಿಯರನ್ನು ಹುಡುಕಹತ್ತುತ್ತಾನೆ. ಜೀವಕ್ಕೆ ಜೀವ ಕೊಡುವ ಸಖಿಯರ ಕಣ್ಣು ತಪ್ಪಿಸಿ ತರುಣಿಯು ಯಾವನೊಬ್ಬ ಗೆಳೆಯನ ಆರಾಧನೆಗೆ ತೊಡಗುತ್ತಾಳೆ. ವೈಷಯಿಕ ಆಕರ್ಷಣವು ಹಲವು ತರದ್ದಾಗಿರುತ್ತದೆ; ಮತ್ತು ಅದನ್ನು ಬಗೆಬಗೆಯಿಂದ ಸಾಧಿಸುವದಿರುತ್ತದೆ. ಪಂಚೇಂದ್ರಿಯಗಳಲ್ಲುಂಟಾಗುವ ಬೇರೆ ಬೇರೆ ಸಂವೇದನೆಗಳು ಹಾಗು ಪಂಚೇಂದ್ರಿಯಗಳಲ್ಲುದ್ಭವಿಸುವ ಆಕಾಂಕ್ಷೆಗಳು ಇವುಗಳ ಪರಿಪೂರ್ತಿಯನ್ನಂತೂ ಸಾಧಿಸುವದಿದ್ದೇ ಇರುತ್ತದೆ; ಅಲ್ಲದೆ ಕಲ್ಪನೆ. ಭಾವನೆ, ಬುದ್ಧಿ, ಜ್ಞಾನೇಂದ್ರಿಯಾತ್ಮಕಗಳಾದ ಎಲ್ಲ ಮಾನಸಿಕ ವ್ಯಾಪಾರಗಳ ಮೂಲಕ ಉಂಟಾಗುವ ಆಕಾಂಕ್ಷೆ ಹಾಗು ಬೌದ್ಧಿಕ ಸಮಾಧಾನ ಇವೆಲ್ಲವುಗಳನ್ನೂ ಸಾಧಿಸುವದಿರುತ್ತದೆ.

ಈ ವೈಷಯಿಕ ಭಾವನೆಗಳು ಒಮ್ಮೊಮ್ಮೆ ಅತ್ಯಂತ ವಿರುದ್ಧ ಹಾಗು ಅವುಗಳ ವಿಷಯಗಳಾದರೂ ಅಷ್ಟೇ ಪವಿತ್ರಗಳಾಗಿ ಕಂಡುಬರುತ್ತವೆ. ಅಲ್ಪವಯಸ್ಕ ತರುಣನ ಮನಸ್ಸಿನಲ್ಲಿ ಯಾವಳೊಬ್ಬ ಪ್ರೌಢ ಸ್ತ್ರೀಯ ವಿಷಯವಾಗಿ ನಿರ್ವ್ಯಾಜ ಪ್ರೇಮವುಂಟಾಗುವುದು, ಅವಳ ಬಳಿಯಲ್ಲಿ ತನ್ನ ಮನೋಗತವನ್ನು ಒಡನುಡಿದು ತೋರಿಸುವ ಇಚ್ಛೆ ಅವನಿಗಾಗುವುದು; ಮತ್ತು ಅವಳೇ ಆ ವಿಷಯದಲ್ಲಿ ತನಗೆ ಸಲಹೆಕೊಡಬೇಕೆಂದು ಆತನು ಅಪೇಕ್ಷಿಸುವದು ಇದಾದರೂ ವೈಷಯಿಕ ಆಕರ್ಷಣದ್ದೇ ಮತ್ತು ಪರಿಪೂರ್ತಿಯದೇ ಉಚ್ಚಕೋಟಿಯೊಳಗಿನ ಬಗೆಯಾಗಿರುವದಿಷ್ಟೇ ಆ ಪ್ರೌಢಸ್ತ್ರೀಯಳೂ ಸಹ ತನಗೆ ಮಗನಂತೆ ಒಪ್ಪುವ ಆ ಯುವಕನೊಡನೆ ಆಸ್ಥಾಪೂರ್ವಕ ಪ್ರೇಮಲತನದಿಂದ ನಡೆದರೆ, ಆತನ ವಿಶ್ವಾಸಕ್ಕೆ ನೆಲೆಯಾಗುವ ಮಹತ್ವಾಕಾಂಕ್ಷೆ ಧರಿಸಿದರೆ, ಆತನ ತ್ಯಾಜ್ಯ ವಿಚಾರಗಳ ಹಾಗು ಹುಮ್ಮಸಯುಕ್ತವಾದ ಶರೀರದ ಕೌತುಕ ಮಾಡಿದರೆ, ಹೆಚ್ಚೇನು, ಆದರೆ ಆತನ ಭಾವೀ ಭಾರ್ಯೆಯ ಇಡಿ ಚಿತ್ರವನ್ನು ಬೇರೆ ಬೇರೆ ವರ್ಣಗಳಿಂದ ಆದರ್ಶವಾದ ರೀತಿಯಿಂದ ಪರಿಪೂರ್ಣವಾಗಿ ಚಿತ್ರಿಸಿ

ದರೆ ಅವಾದರೂ ವೈಷಯಿಕ ಪ್ರೇಮದ ಬಗೆಯೇ ಸರಿ. ಆ ಪ್ರೇಮವು ವೈಷಯಿಕವೇ ಎಂನೇಕೆ ತಿಳಿಯಬೇಕೆಂಬ ಬಗ್ಗೆ ಒಂದು ಗಮಕವಿದೆ ಹುಡುಗನು ತಾಯಿಯೊಡನೆ ಇಲ್ಲವೆ ಭಗಿನಿಯೊಡನೆ, ಹುಡುಗೆಯು ಬಂಧುವಿನೊಡನೆ ಇಲ್ಲವೆ ತಂದೆಯೊಡನೆ ಒಮ್ಮೆಲೆ ಮನಬಿಚ್ಚಿ ಮಾತನಾಡುವುದು ಕಟ್ಟಾಗುತ್ತದೆ. ವೈವಾಹಿಕ ಅಂದರೆ ದೂರಾನ್ವಯದಿಂದ ವೈಷಯಿಕ ಸಂಬಂಧದ ಚರ್ಚೆಯನ್ನು ಆ ವ್ಯಕ್ತಿಯು ತನಗೆ ಸಮೀಪವಲ್ಲದ, ಆಪ್ತೇಷ್ಟ ಸಂಬಂಧವಿಲ್ಲದಂಥ ಬೇರೆ ವ್ಯಕ್ತಿಯೊಡನೆಯೇ ಮಾಡುತ್ತದೆ ಅವೆಲ್ಲ ವೈಷಯಿಕ ಆಕಾಂಕ್ಷೆಗಳದಷ್ಟೇ ಅಲ್ಲ, ಆದರೆ ಯಶಸ್ವೀ ಪರಿಪೂರ್ತಿಯ ಪರಮೋತ್ಕರ್ಷವು ವಿವಾಹದಲ್ಲಿ ಆಗುತ್ತದೆ. ಆ ಉತ್ಕರ್ಷಕ್ಕೆ ಆಜನ್ಮ ಶಾಶ್ವತಿಯು ವಿವಾಹಸಂಸ್ಥೆಯಿಂದಲೇ ಲಭಿಸುತದೆ.

ಆರ್ಥಿಕ ಪರಿಸ್ಥಿತಿಯಾದರೂ ವಿವಾಹ ಮಾಡಿಕೊಳ್ಳುವ ವಿಚಾರದ ಕುತ್ತಿಗೆಯನ್ನು ಒಂದೇಸವನೆ ಹಿಚುಕುತ್ತಲೇ ಇದೆ ಯಾವುದೊಂದು ಕೊನೆಯ ಮರ್ಯಾದೆಗಿಂತ ಕಡಿಮೆ ಸಂಪಾದನೆಯು ಯಾರದಿದ್ದೀತೋ ಅಂಥವರು ಲಗ್ನ ಮಾಡಿಕೊಳ್ಳದಿರುವದು ಉಚಿತವೇ ಆಗಿದೆ; ಆದರೆ ಅಂಥ ವ್ಯಕ್ತಿಗಳ ಸಂಖ್ಯೆ ಮಾತ್ರ ಯಾವಾಗಲೂ ಹೆಚ್ಚಾಗಿರುವದಿಲ್ಲ. ಸರ್ವಸಾಧಾರಣವಾಗಿ ಹೇಳಬಹುದೇನಂದರೆ, ಲಗ್ನವೆಂಬುದು ಎಲ್ಲರ ಸ್ವಾಧೀನದಲ್ಲೂ ಇರುತ್ತದೆ ಆರ್ಥಿಕ ತೊಂದರೆಯ ಭೀತಿಯು ನಮಗೆಷ್ಟು ಅನಿಸುವುದೋ, ಅಷ್ಟು ಅದು ಪ್ರತ್ಯಕ್ಷ ತಾಪದಾಯಕವಿಲ್ಲ, ತದ್ವಿರುದ್ಧವಾಗಿ ಆರ್ಥಿಕ ದೃಷ್ಟಿಯಿಂದ ವೈವಾಹಿಕ ಆಯುಷ್ಯವು ಬಹು ಬಗೆಯಿಂದ ಅಲ್ಪಖರ್ಚಿನದು ಮತ್ತು ಹೆಚ್ಚು ಸುಖಕರವಾದದ್ದು ಎಂದು ನಿರ್ಧರವಾಗುತ್ತದೆ ತಿಂಗಳಿಗೆ ಇಪ್ಪತ್ತು-ಇಪ್ಪತ್ತೈದು ರೂಪಾಯಿ ಸಂಪಾದಿಸುವವನಿಗೂ ಸ್ವತಂತ್ರ ಬಾಡಿಗೆಯ ಮನೆ ಹಿಡಿಯಲೇ ಬೇಕಾಗುತ್ತದೆ. ಅಂಗಡಿಯೊಳಗಿನ ಚಹ ಮತ್ತು ಹೊಟಲಿನೊಳಗಿನ ಊಟ ಉಣಲೇಬೇಕಾಗುತ್ತದೆ; ಆದರೆ ಅಷ್ಟೇ ಖರ್ಚಿನಲ್ಲಿ ಗಂಡ ಹೆಂಡಿರ ಬಡತನದ ಬಾಳುವೆಯು ಸಹಜವಾಗಿ ಆದೀತು; ಹಾಗು ಆತನಿಗೆ ಮನೆಗೆಲಸಕ್ಕೆ ಬೇರೆ ಆಳು-ಹೋಳುಗಳನ್ನಿಡುವ ಅವಶ್ಯಕತೆಯುಂಟಾಗಲಿಕ್ಕೆಂಬ ಲಾಭವೊಂದು ವಿಶೇಷವೇ ಆದೀತು.

ಆರ್ಥಿಕ ತೊಂದರೆಯ ಮೂಲಕ ಲಗ್ನವಾಗದಿರುವ ವಿಚಾರಗಳು ಗಂಡಸಿನ ಹುಮ್ಮಸನ್ನು ಚ್ಯುತಿಗೊಳಿಸುತ್ತಿರುತ್ತವೆ. ಸಂಸಾರದ ಆರ್ಥಿಕ

ಹೊಣೆಗಾರಿಕೆಯು ಗಂಡಸಿನದೇ; ಮತ್ತು ಅಂತೆಯೇ ಇಲ್ಲಿ ಗಂಡಸಿನ ಉದಾಹರಣೆ ತಕ್ಕೊಂಡಿದೆ. ಹೆಂಡತಿಯು ಬಹು ತುಟ್ಟಿಯದಾದಾಳೆಂದು ಗಂಡಸು ಸುಮ್ಮ ಸುಮ್ಮನೆ ತನ್ನ ಕಲ್ಪನೆ ಮಾಡಿಕೊಂಡಿರುತ್ತಾನೆ ಮದುವೆಯಾದರೂ ಒಟ್ಟಾಗಿದ್ದೇ ಸಂಸಾರ ಸಾಗಿಸುವದಿರುತ್ತದೆ. ಆದರಿಂದ ಆವಳಾದರೂ ಶಕ್ಯವಾದಷ್ಟು ಕೈ ಬಿಗಿಹಿಡಿದೇ ಖರ್ಚು ಮಾಡುವವಳಿರುತ್ತಾಳೆ; ಆದರೆ ಸ್ತ್ರೀಯ ಸ್ವಾರ್ಥತ್ಯಾಗದ, ಮನೋವೃತ್ತಿಯ, ಸಹನಶೀಲತೆಯ, ಕಷ್ಟಸಹಿಷ್ಣುತಾ ಪ್ರವೃತ್ತಿಯ ಪರಿಚಯ ಕೂಡ ಗಂಡಸರಿಗಿರುವದಿಲ್ಲೆಂಬುದೇ ನಿಜ! ಇನ್ನು ಒಬ್ಬನದೇ ಎಷ್ಟು ಚಲ್ಲಾಟ ನಡೆದೀತೋ, ಅಷ್ಟು ಇಬ್ಬರದೂ ಕೂಡಿ ನಡೆಯುದೆಂಬದು ನಿಜ; ಆದರೆ ಸಿನೇಮಾ, ಹೋಟಲ್ಲು, ಸಿಗಾರೇಟ್ಸು, ಡ್ರಿಂಕ್ಸ ಮುಂತಾದ ಒಣ ಐಷ-ಆರಾಮುಗಳ ಮಾನದಿಂದ ವಿವಾಹಿತ ಸ್ತ್ರೀ-ಪುರುಷರಿಗೆ ಮನಸೋಕ್ತವಾಗಿ ಲಭಿಸುವ ಹಲವು ಬಗೆಯ ಸುಖಗಳು ಎಷ್ಟೋ ಪಟ್ಟು ಹೆಚ್ಚು ಆನಂದದಾಯಕಗಳೂ ಬೆಲೆಯುಳ್ಳವುಗಳೂ ಆಗಿರುತ್ತವೆ. ಇಡಿ ಜಗತ್ತೇ ಆರ್ಥಿಕ ತೊಂದರೆಯ ಉಸುಬಿನ ಬೈಲಿನಲ್ಲಿ ಸಿಲುಕಿದೆ ವ್ಯಕ್ತಿ ಮಾತ್ರರಿಗೇ ಏಕೆ ದೊಡ್ಡ ದೊಡ್ಡ ರಾಷ್ಟ್ರಗಳಿಗೂ ಕೂಡ ಆರ್ಥಿಕ ಅಡಚಣೆಯ ಝುಳವು ತಾಕಿ ಅವು ಒಂದರ ಹಿಂದೊಂದರಂತೆ ಮೂರ್ಛೆಗೊಳ್ಳುತ್ತಲಿವೆ. ಯಾಂತ್ರಿಕ ಯುಗವು ಮಾನವನ ಆವಶ್ಯಕತೆಗಳನ್ನು ಹೆಚ್ಚಿಸಿ, ಅವುಗಳನ್ನು ಪೂರೈಸುವ ಸಾಧನಗಳನ್ನು ಮಿತಿಯಿಲ್ಲದಂತೆ ಬೆಳೆಸಿರುವುದೇನೋ ನಿಜ; ಆದರೆ ಆ ಸುಖಸಾಧನಗಳಿಗಾಗಿ ಪ್ರತಿಯೊಬ್ಬ ವ್ಯಕ್ತಿಮಾತ್ರರು ಪ್ರತ್ಯಕ್ಷ ಅಥವಾ ಪರೋಕ್ಷ ರೀತಿಯಿಂದ ಮಿತಿಮೀರಿ ಬೆಲೆ ಕೊಡಬೇಕಾಗುತ್ತಿರುವುದರಿಂದ, ನಿಜವಾದ ಸಮಾಧಾನಕ್ಕೆ ನಾವು ಹೆಚ್ಚಿಚ್ಚು ದೂರವಾಗುತ್ತ ನಡೆದಿರುತ್ತೇವೆ.

ಈ ಸ್ಥಿತಿಯು ಹೆಚ್ಚುತ್ತಲೇ ಹೋಗುವಂತಹದು ಆದರಿಂದ ಆರ್ಥಿಕ ತೊಂದರೆಯು ನಿವಾರಣವಾದ ಬಳಿಕ ಸಾವಕಾಶ ಲಗ್ನವಾಗೋಣವಂತೆ, ಎಂಬುವ ವಿಚಾರವನ್ನು ಯಾವನಾದರೂ ಮಾಡಿದರೆ, ಆತನಿಗೆ ಬೇಕಾದ ಅನುಕೂಲ ಸ್ಥಿತಿಯು ಅದೆಂದಿಗೂ ಪ್ರಾಪ್ತವಾಗಲಿಕ್ಕಿಲ್ಲ ಸಂತತಿನಿಯಮನದ ಯಶಸ್ವೀ ಉಪಾಯಗಳಿಂದ ಹುಡುಗರು-ಹುಪ್ಪಡಿಗಳ ಹೆಚ್ಚಳವನ್ನು ನಿಯಂತ್ರಣಗೊಳಿಸಲಿಕ್ಕೆ ಬರುತ್ತದೆ ಆದರಿಂದ ಒಂದು ದೃಷ್ಟಿಯಿಂದ ಲಗ್ನವಾಗಿ ಸಂಸಾರ ಮಾಡುವದು ಹೆಚ್ಚಾಗಿ ಅನುಕೂಲತೆಯುದೂ ನಿಯಂತ್ರಿತ ಹಾಗು

ಅಂದಾಜಪತ್ರಿಕೆಗೆ ಶಕ್ಯವಾದುದೂ ಆಗಿರುತ್ತದೆ. ಆರ್ಥಿಕ ಅಡಚಣೆಗಳು ಮುನ್ನಿನ ಜನರಿಗೆನೂ ಇದ್ದಿಲ್ಲವೆಂತಲ್ಲ ಪತಿ-ಪತ್ನಿಯರ ಮೊದಲಿನ ಕೆಲ ವರ್ಷಗಳು ದುಡ್ಡಿನ ತೊಂದರೆಯಲ್ಲಿ ಹಾಗು ವಿಪತ್ತಿನಲ್ಲಿ ಕಳೆಯುವವು. ತಾರುಣ್ಯದಲ್ಲಿ ಮನುಷ್ಯನ ಮನಸ್ಸು ಪೇಲ್ಲದ ಸುಖಲೋಲುಪತೆಗಿಂತ ನಿಜವಾದ ಶಾರೀರಿಕ ಸುಖೋಪಭೋಗದ ಕಡೆಗೇ ಹೆಚ್ಚಾಗಿ ಒಲಿದಿರುತ್ತದೆ; ಮತ್ತು ಅದು ಯಥೇಚ್ಛ ದೊರಕುತ್ತಿರುವವರೆಗೆ ಅವನಿಗೆ ಬೇರೆ ಕುಂದು-ಕೊರತೆಗಳ ಬಗ್ಗೆ ವಿಶೇಷವೆನಿಸುವದಿಲ್ಲ. ಮುಂಚಿನ ಕಾಲದಲ್ಲಿ ಹೊಸದಾಗಿ ಲಗ್ನವಾದ ಹುಡುಗರ ಪಾಲನ-ಪೋಷಣಗಳನ್ನು ಅವರ ಹಿರಿಯರೇ ಮಾಡುತ್ತಿದ್ದರು. ಇಷ್ಟೇ ಅಲ್ಲ, ಬೇರೆ ಕಡೆಗೆ ವಾಸಿಸುತ್ತಿದ್ದ ಹುಡುಗನಿಗೆ ಅವರು ಆರ್ಥಿಕ ಸಹಾಯ ಕೂಡ ಮಾಡುತ್ತಿದ್ದರು. ಮಿತವ್ಯಯದಿಂದ ಸಂಸಾರ ಸಾಗಿಸುವ ವಿದ್ಯೆಯನ್ನು ಯಾವನು ಅರಿತಿರುವನೋ, ಅವನಿಗೆ ಆ ಆರ್ಥಿಕ ತೊಂದರೆಯು ಅಂಜಿಕೆಯು ಅನಿಸಲಾರದು. ಗಂಡ-ಹೆಂಡಿರಿಬ್ಬರೂ ಸಂಸಾರದ ಕೆಲಸಗಳನ್ನು ವ್ಯೈ ಉಳಿಸಿಕೊಳ್ಳದಂತೆ ಮಾಡುವುದೆಂದು ನಿರ್ಧರಿಸಿಕೊಂಡರೆ, ವೈವಾಹಿಕ ಜೀವನವೇ ಕೊನೆಗೆ ಅಲ್ಪ ಖರ್ಚಿನದೂ ಹೆಚ್ಚು ಸುಖದ್ದೂ ಆದೀತು.

ವೈಷಯಿಕ ಇಚ್ಛೆಯುಂಟಾಗೋಣ, ಅದನ್ನು ತೃಪ್ತಿಪಡಿಸಿಕೊಳ್ಳುವ ಚತುರತೆಯುಂಟಾಗೋಣ, ಅದರ ತೃಪ್ತಿಯಾದೊಡನೆಯೇ ಸಮಾಧಾನವಾಗೋಣ ಈ ಸಂಗತಿಗಳು ಪ್ರತಿಯೊಬ್ಬ ಪ್ರಾಣಿಮಾತ್ರರಿಗೆ ಆವಶ್ಯಕ ಹಾಗು ಅನಿವಾರ್ಯಗಳೆಂದು ನಿಸರ್ಗವು ಅಂಟಿಸಿಬಿಟ್ಟಿರುತ್ತದೆ. ಅದನ್ನು ಪರಿಪೂರ್ತಿಗೊಳಿಸುವದು ಯಾವ ಬಗೆಯಿಂದಲೂ ಜಗತ್ಕರ್ತೃ ಪರಮೇಶ್ವರನ ಸಂಕೇತಕ್ಕೆ ವಿರುದ್ಧವಾಗಿಲ್ಲ. ಮಾನವನಿಗೆ ಕೋಡು, ದೊಡ್ಡ ದೊಡ್ಡ ಉಗುರು ಇವು ಅವಶ್ಯಕವಿರದ್ದರಿಂದ ದೇವನು ಅವುಗಳನ್ನು ಮನುಷ್ಯ ಪ್ರಾಣಿಯಿಂದ ಕಸಿದುಕೊಂಡಿರುತ್ತಾನೆ. ಅನಾವಶ್ಯಕ ಇಲ್ಲವೆ ಘಾತುಕಗಳಾದಂಥ ಸಂಗತಿಗಳನ್ನು ನಿಸರ್ಗವು ಯಾವಾಗಲೂ ಪ್ರಾಣಿಮಾತ್ರರ ಗುಂಪಿನೊಳಗಿಂದ ಆರಿಸಿ ತೆಗೆದು ಹೊರ ಚೆಲ್ಲುತ್ತಿರುತ್ತದೆ. ವೈಷಯಿಕ ಭಾವನೆಯನ್ನು ಆ ನಿಸರ್ಗವೇ ಉಂಟು ಮಾಡಿದೆ. ಅದು ನಿಂದ್ಯವಾಗಲಿ ಘಾತುಕವಾಗಲಿ ಆಗಿದ್ದರೆ, ಅದರ ಉಚ್ಚಾಟನವು ತನ್ನಷ್ಟಕ್ಕೆ ತಾನೇ ಆಗಿ ಹೋಗುತ್ತಿತ್ತು. ಅದರಿಂದ ವೈಷಯಿಕ ಜೀವನವು ಮಾನುಷ್ಯತ್ವದ ಒಂದು ಅನಿವಾರ್ಯ ಪ್ರಕೃತಿವಿಶೇಷವಾಗಿದೆ

ವಿಷಯದ ತೃಪ್ತಿಯು ಲಗ್ನದಿಂದಲೇ ಸಾಧಿಸುತ್ತದೆ; ಸಿದ್ಧಿ ಹೊಂದು

ತ್ತದೆ. ವಿವಾಹವಾಗದೆ ಪ್ರೇಮಸಂಬಂಧದಿಂದ ಅಥವಾ ಕ್ಷಣಿಕ ವೇಗ-
ಜನ ಹುಮ್ಮಸದಿಂದ ಒಟ್ಟುಗೂಡಿದ್ದ ಸ್ತ್ರೀ ಪುರುಷರು ವಿಷಯವನ್ನು ಸೇವಿ
ಸಿದರೂ, ಅವರಿಗೆ ವೈವಾಹಿಕ ಜೀವನದ ಸ್ಥಿರಾಸ್ತತೆಯು ಎಂದಿಗೂ ಲಭಿಸ
ಲಾರದು. ವಿವಾಹಕ್ಕೆ ಹೊರತಾದ ಎಲ್ಲ ಪ್ರೇಮಪ್ರಕಾರಗಳು ನೋಡುವವ-
ರ ಕಣ್ಣಿಗೆ ತ್ಯಾಜ್ಯಗಳೆನಿಸುವವು. ಪ್ರೇಮದಿಂದ ಮುಕ್ತರಾದ ಪ್ರಣಯಿ ಗೆಳತಿ-ಗೆಳೆ
ಯರು ಲೋಕಮತಕ್ಕೆ ಕಟ್ಟಕಡೆಗಾದರೂ ಅಂಜಿ ನಡೆಯಬೇಕಾಗುತ್ತದೆ.
ಸ್ವಂತಕ್ಕೆ ಪಾಪಿ ಎಂದು ತಿಳಿಯುವ ಮನುಷ್ಯನಂತೆ ಲೋಕಮತದ ಕಡೆಗೆ
ಕೆರಳಿದ ಕಣ್ಣಿನಿಂದ ಹಗಲಿರುಳೂ ನೋಡುತ್ತಿರುತ್ತಾನೆ. ಉಪಭೋಗಕ್ಕಾಗಿ
ಸ್ಥಿರಾಸ್ತತೆ, ಸುದೀರ್ಘ ಸಹವಾಸ ಮತ್ತು ಅಷ್ಟೇ ದೀರ್ಘ ವಿಶ್ರಾಂತವಾದ ಇಷ್ಟ
ಗಳು ಬೇಕಾಗುತ್ತಿರುತ್ತವೆ. ಕೇವಲ ಮಾನಸಿಕ ಕೊಡ-ಕೊಳ್ಳುವ ಮಟ್ಟಿಗೆ
ಯಲ್ಲಿ ಶಾರೀರಿಕ ಸುಖದ ಸಲುವಾಗಿಯೂ ಸಂಪೂರ್ಣ ಸ್ಥಿರಾಸ್ತತೆ ಇದ್ದರೇನೇ
ಅವರ ವ್ಯವಹಾರಗಳು ಎಡಬಿಡವೆ ಹಾಗು ಸುಖ ಪರಿಣಾಮಗಳಾದಾವು.
ಗಳಿವಿನಿಂದಾದ ಭೆಟ್ಟಿ-ಕೂಡಿಕೆಗಳು ತೃಪ್ತಿಯ ಸುಖವನ್ನು ವ್ಯಕ್ತಿಮಾತ್ರರ
ಸೆರಗಿನಲ್ಲಿ ಎಂದೂ ಕೆಡವಗೊಡುವದಿಲ್ಲ. ಅತೃಪ್ತಿಯಿಂದ ಆತುರತೆಯು ಒಂದೇ
ಸವನೆ ಹೆಚ್ಚುತ್ತದೆ; ಮತ್ತು ಅಂಥವರಿಗೆ ತೃಪ್ತಿ ಹೇಗಾದೀತೆಂಬ ವ್ಯಗ್ರತೆಯದೇ
ದೊಡ್ಡ ವ್ಯವಸಾಯವಾಗಿ ಬಿಡುತ್ತದೆ.

ಲಗ್ನಸಂಸ್ಥೆಯು ಕಾಯಿದೆಯ ಪಕ್ಷಗಳಲ್ಲಿ ಒಳ್ಳೇ ಚಾಟಿಗೆ ಕುಳಿತಿರು
ತ್ತವೆ. ಪತಿ ಪತ್ನಿಯರ ಪರಸ್ಪರರ ಸಂಬಂಧದಲ್ಲಿ ಸುಮ್ಮಸುಮ್ಮನೆ ಕೈನೀಡುವ
ತ್ರಯಸ್ಥನಿಗೆ ಕಾಯಿದೆಯಿಂದ ಕಠಿಣ ಶಾಸನವಾಗುತ್ತದೆ. ಇಷ್ಟೇ ಅಲ್ಲ,
ಅದರ ಕರ್ತವ್ಯವನ್ನು ಮರೆತು ಒಬ್ಬರಿಂದೊಬ್ಬರು ದೂರ ಹೋಗುವ ಪತಿ-
ಪತ್ನಿಯರನ್ನು ಒಟ್ಟಾಗಿರಲು ಭಾಗವಡಿಸಲಿಕ್ಕೆ ಕಾಯಿದೆಯ ಯೋಜನೆ ಇರು
ತ್ತದೆ. ಬರಿಯ ಪ್ರೇಮಸಂಬಂಧದಲ್ಲಿ ಹೀಗೆ ಸ್ಥೈರ್ಯ, ಇಂಥ ಚಾಟು
ಮತ್ತು ಈ ಬಗೆಯ ಶಾಶ್ವತೆಯು ಎಂದಿಗೂ ಇರುವದಿಲ್ಲ. ಯಾರೊಬ್ಬರ
ಬುದ್ಧಿಯು ಬದಲಾದೀತೇನೆಂದು ಪರಸ್ಪರರು ಚಿಂತಿಸಬೇಕು; ಮತ್ತೆ ಮತ್ತೆ
ಆಣೆ-ಚೂರಿಗಳ ಉಜಳಣಿಯಾಗಬೇಕು; ಒಬ್ಬನ ಬುದ್ಧಿಯು ಬದಲಿಸಿದು
ಕಂಡೊಡನೆಯೇ ಇನ್ನೊಬ್ಬನು ಕಸವಿಸಿಪಡಬೇಕು; ಮತ್ತು ತನ್ನನ್ನು ಬಿಟ್ಟು
ಮೂರನೆಯವನೊಡನೆ ಹೋದ ಕೂಡಲೆ ಈತನಿತ್ತ ನಿರಾಶನಾಗಿ, ಕೈಯು
ಜ್ಜುತ್ತ ಕೂಡ್ರಬೇಕು. ಈ ಬಗೆಯ ಈ 'ಸ್ಥೈರ್ಯವು' ಬರಿಯ ಪ್ರೇಮ

ಸಂಬಂಧದ ಪಾಲಿಗೆ ಒದಗುತ್ತದೆ. ಇಂಥ ಸಂಬಂಧದಿಂದುಂಟಾದ ಪ್ರಜಾ ಪ್ರೇಮಸಂಬಂಧದ ಕಣ್ಣುಮುಚ್ಚಾಣಿಕೆಯನ್ನು ಮರೆಮಾಡುವ ಖಟಾಟೋಪ ಇವೆಲ್ಲ ಅಘೋರ ಆಪತ್ತಿಗಳ ಮೂಲಕ ಮನುಷ್ಯನು ಕೊನೆಗೆ ಪಶ್ಚಾತ್ತಾಪ ವನ್ನೇ ಹೊಂದುತ್ತಾನೆ. ಲಗ್ನಸಂಸ್ಥೆಯ ಮಹತ್ವವನ್ನು ಕೇವಲ ವ್ಯಾವಹಾರಿಕ ದೃಷ್ಟಿಯಿಂದ ನೋಡಬೇಕು. ಧರ್ಮದ ಹಾಗು ನೀತಿಯ ಆಧಾರಗಳನ್ನು ಕೊಟ್ಟರೇ ಎದ್ದು ನಿಂತೀತೆನ್ನುವಂತೆ ಅದು ವಸ್ತುತಃ ಕುಂಟ ಕುಬ್ಜವಾಗಿಲ್ಲ. ಏನೆಂತ ಲಗ್ನವ್ಯತಿರಿಕ್ತವಾದ ಪ್ರೇಮಸಂಬಂಧವು ಸುಖಕ್ಕಿಂತ ಚಿಂತೆ, ಸಮಾ ಧಾನಕ್ಕಿಂತ ವಿಷಾದ ಇವುಗಳನ್ನೇ ಹೆಚ್ಚಾಗಿ ನೆರಗಿಗೆ ಕಟ್ಟುತ್ತದೆ.

ವಯಸ್ಸು ಹೆಚ್ಚಿದಂತೆ ಮನುಷ್ಯನ ವೈಚಾರಿಕ ಜೀವಿತವೂ ಹೆಚ್ಚೆಚ್ಚು ವಿಸ್ತಾರವಾಗಹತ್ತುತ್ತದೆ. ಶರೀರ ಸುಖಕ್ಕಿಂತ ಆತನಿಗೆ ತನ್ನ ವಿಚಾರಗಳ ಹಾಗು ವಿಚಾರೀ ಸಮ್ಮತಿಯ ಮಹತ್ವವು ಹೆಚ್ಚಾಗಿ ತೋರಹತ್ತುತ್ತದೆ. ಶರೀರ ಸುಖವನ್ನು ಸಮಸಮವಾಗಿ ಉಪಭೋಗಿಸುವ ಪತಿ-ಪತ್ನಿಯರು ವಿಚಾರದಲ್ಲಿಯೂ ಕೂಡಲೆ ಒಬ್ಬರಿಗೊಬ್ಬರು ಕೂಡಿಕೊಳ್ಳುವರು. ಚಿಕ್ಕಂದಿ ನಲ್ಲಿ ಲಗ್ನವಾದ ಪತಿ ಪತ್ನಿಯರಿಗೆ ವಿಚಾರ ಮತ್ತು ಆಚಾರ ಇವೆರಡರಲ್ಲಿಯೂ ಅಷ್ಟೇ ಸಮರಸವನ್ನು ಸಹಜವಾಗಿ ನಿರ್ಮಿಸಲಿಕ್ಕೆ ಬರುತ್ತಿತ್ತು. ಪ್ರಾರಂಭದಲ್ಲಿ ಅಂಥ ಆಕಾಂಕ್ಷೆಯು ಕೇವಲ ಶರೀರ ಸುಖದವುಟ್ಟಿಗೇ ಇರುತ್ತಿತ್ತು. ಇದೀಗ ಯೌವನಾವಸ್ಥೆಯಲ್ಲಿ ಕಾಲಿಟ್ಟ ಸ್ತ್ರೀ-ಪುರುಷರಿಗೆ ಶರೀರಸೌಂದರ್ಯ, ಸಾಮರ್ಥ್ಯ, ಸೌಷ್ಟವ ಇವುಗಳ ಮಟ್ಟೇ ಹೆಚ್ಚು ಬೀಳುತ್ತದೆ ಅವುಗಳನ್ನೇ ಅವರು ಹೆಚ್ಚಾಗಿ ನಿರೀಕ್ಷಿಸುತ್ತಿರುತ್ತಾರೆ. ಸುಸಂಸ್ಕೃತಿಯುರುವದು. ಪರಸ್ಪರ ಮನಸ್ಸು ಒಂದಾಗುವದು, ಧ್ಯೇಯಗಳು ಒಂದಾಗುವದು ಮುಂತಾದ ವೈಚಾರಿಕ ಆಕಾಂಕ್ಷೆಗಳ ಬಗ್ಗೆ ನಡೆದಿರುವ ಉತ್ಕಂಠೆಯು ವೈಚಾರಿಕ ಆಕಾಂಕ್ಷೆಗಳಿಗೂ ಅಂಥವೇ ಉತ್ಕಂಠೆಯು ಕಾಲ್ಪನಿಕ ದೃಶ್ಯವನ್ನು ತೋರಿಸಿ ಅಂಜಿಸುತ್ತಿರುತ್ತದೆ ಸ್ಪಷ್ಟವಾಗಿ ಹೇಳುವದೆಂದರೆ, ಇಂದಿನ ಸ್ತ್ರೀ-ಪುರುಷರು ಲಗ್ನದ ಮಾತೆತ್ತಿದ ಕೂಡಲೆ ಭಯಗೊಳ್ಳುತ್ತಾರೆ ಎರಡನೆಯವರೊಡನೆ ತಮ್ಮದು ಕೂಡಿ ನಡೆಯುವದೋ ಇಲ್ಲವೋ ಎಂಬ ಬಗ್ಗೆಯೇ ಅವರಿಗೆ ಹೆಚ್ಚು ಅಂಜಿಕೆ ಯೆನಿಸುತ್ತದೆ; ಆದರೆ ಈ ಬೆದರಿಕೆಯು ಹಲವು ಪ್ರಸಂಗಗಳಲ್ಲಿ ಅವಾಸ್ತವ ವಾಗಿರುತ್ತದೆಂದೇ ಅನ್ನಬೇಕಾಗುತ್ತದೆ.

ಉಭಯ ಸ್ತ್ರೀ-ಪುರುಷರಿಗೆ ತಮ್ಮ ಸ್ವಭಾವಗಳು ಇನ್ನೊಬ್ಬರೊಡನೆ

ಹೊಂದುವವೋ ಇಲ್ಲವೋ ಎಂಬ ಬಗ್ಗೆ ಸಹಜವಾಗಿ ಅಂಜಿಕೆಯೆನಿಸುತ್ತಿದ್ದರೆ ಅದಕ್ಕೆ ಒಂದೇ ಒಂದು ಸುಲಭೋಪಾಯವಿದೆ. ಅದಾವುದೆಂದರೆ, ಅವರು ತಮ್ಮ ವ್ಯಕ್ತಿಮತ್ವದ ಅಥವಾ ತಮ್ಮ ಸ್ವಭಾವ ವೈಚಿತ್ರ್ಯದ ಹೆಚ್ಚಿನ ಆಡಂಬರವನ್ನು ಬೆಳಿಸಬಾರದು. ಬೇರೆಯವರ ಸ್ವಭಾವಕ್ಕೆ ಹೊಂದುವಂತೆ ಹಾಗು ಬೇರೆಯವರ ಅಭಿರುಚಿಗೆ ಸರಿಯಾಗಿ ನಡೆಯುವ ಎಚ್ಚರಿಕೆಯನ್ನು ಪ್ರತಿಯೊಬ್ಬರೂ ವಹಿಸಿದರೆ, ಆ ಮೇಲೆ ವಿತುಷ್ಟತೆಯ ಪ್ರಸಂಗಗಳೇ ಉಂಟಾಗಲಾರವು. ಉಭಯತರ ವಿಚಾರಗಳಲ್ಲಿ ಸ್ವ ಸ್ವ ಆಡಂಬರವಿರುವದು ಸಂಸಾರಕ್ಕೆ ವಿಶೇಷ ತೊಂದರೆಯುದೇನೂ ಇಲ್ಲ. ಸತ್ಯದ ವ್ಯವಹಾರದಲ್ಲಿ ಮತ್ತು ಸಾಂಸಾರಿಕ ಕೆಲಸಗಳಲ್ಲಿ ವಿಶೇಷವಾಗಿ ಸ್ತ್ರೀ ಪುರುಷರ ಕಾರ್ಯಕ್ಷೇತ್ರಗಳು ಭಿನ್ನ ಭಿನ್ನವಾಗಿರುತ್ತಿರಲು, ತೀವ್ರಮತಭೇದದ ಪ್ರಸಂಗಗಳು ಬಹುತರವಾಗಿ ಉಂಟಾಗಬಾರದು. ತೀರ ವೈಮನಸ್ಯವುಳ್ಳ ಜನರಲ್ಲಿ ಕೂಡ ಏಕತ್ರ ಸಂಸಾರವಾದದ್ದು ಕಂಡುಬರುತ್ತದೆ. ಪರಸ್ಪರರು ತಮ್ಮ ಕಾರ್ಯಕ್ಷೇತ್ರಗಳನ್ನು ತಿಳಕೊಳ್ಳಬೇಕು; ನಿರ್ಧರಿಸಿಕೊಳ್ಳಬೇಕು; ಮತ್ತು ಅವಶ್ಯರನುಟ್ಟಿಗೆ ತಮ್ಮ ಠೇಂಕಾರವನ್ನು ಬೇಕಾದರೆ ಕಾಯಮವಾಗಿಟ್ಟುಕೊಳ್ಳಬೇಕು. ಹೀಗೆ ಉಭಯತರ ಸಿದ್ಧತೆಯು ಇದ್ದರೆ ಅವರುಗಳಲ್ಲಿ ವೈಮನಸ್ಯ ಉಂಟಾಗಲಿಕ್ಕಿಲ್ಲ; ಹಾಗು ಅದರೊಳಗಿಂದ ಸಂಸಾರಾಗ್ನಿಯ ಕಿಡಿಗಳಾದರೂ ಹಾರಲಿಕ್ಕಿಲ್ಲೆಂಬದು ಖಂಡಿತವು.

ಆದುದರಿಂದ ಪ್ರತಿಯೊಬ್ಬರೂ ಲಗ್ನವಾಗಬೇಕು; ಮತ್ತು ಅದನ್ನಾದರೂ ಕೇವಲ ನಿರ್ಧಾಸ್ತತೆಯಿಂದಲೂ ಶಕ್ಯವಾದಷ್ಟು ತೀವ್ರವಾಗಿಯೂ ಮಾಡಿಕೊಳ್ಳಬೇಕು. ಹಲಕೆಲವು ತೊಂದರೆಗಳೂ ಹಲಕೆಲವು ಚಿಂತೆಗಳೂ ಕೇವಲ ಕಾಲ್ಪನಿಕವಾಗಿರುತ್ತವೆ. ಅವಿವಾಹಿತರ ಕೆಲಕೆಲವು ಅಡಚಣಿಗಳಂತೂ ಅವು ನಿವಾರಣವಾದರೆ ಲಗ್ನದಿಂದಲೇ ಆಗಬೇಕಲ್ಲದೆ, ಇಲ್ಲದಿದ್ದರೆ ಎಂದಿಗೂ ಆಗದಂಥವಿರುತ್ತವೆ. ಮಾನವೀ ಜೀವನವು ಸ್ತ್ರೀ-ಪುರುಷರ ಸಮ್ಮಿಶ್ರಣದಿಂದಲೇ ಉಂಟಾಗಿರುತ್ತದೆ. ಅವರುಗಳ ಅಭಿನ್ನವಾದಂಥ ಏಕತ್ರತನವೇ ಮಾನವೀವಂಶದ ಆಧಾರಸ್ತಂಭವು! ಮತ್ತು ಅವರುಗಳ ಅಖಂಡ ಏಕತ್ರಿತ ಜೀವನವೇ ಉತ್ಕರ್ಷದ ಧ್ರುವದರ್ಶನವು!! ಸ್ತ್ರೀ-ಪುರುಷರು ಲಗ್ನದ ನಿಮಿತ್ಯದಿಂದ ನಿರಂತರ, ನಿರ್ಧಾಸ್ತತೆಯಿಂದ ಒಟ್ಟಾಗಿರಲಿಕ್ಕೆ ಶಕ್ಯವಾಗುತ್ತದೆ. ದೈಹಿಕ ಸೌಖ್ಯ, ವಾಚಿಕ ಆನಂದ ಮತ್ತು ಮಾನಸಿಕ ಸ್ಥೈರ್ಯ ಇವುಗಳ ಪ್ರಾಪ್ತಿಯನ್ನು ಪ್ರತಿಯೊಬ್ಬರೂ ಸಂಪಾದಿಸಿಕೊಳ್ಳಲು ಸಮರ್ಥರಾಗು

ತ್ತಾರೆ. ಲಗ್ನವಾಗದಿರುವ ಅಸಂತುಷ್ಟ ಸ್ತ್ರೀ-ಪುರುಷರು ನಿಸರ್ಗಕ್ಕೆ ಶತಶಃ ಅಪರಾಧಿಗಳಾಗಿರುತ್ತಾರೆ ನೈಸರ್ಗಿಕ ಪ್ರವೃತ್ತಿಗಳನ್ನು ಕುಂದಿಸಿ ಬಿಡುವ ದೋಷದಿಂದ, ವ್ಯಕ್ತಿತ್ವದ ಪ್ರಕಟೀಕರಣದ ಕುತ್ತಿಗೆ ಹಿಚುಕಿದ್ದರಿಂದ, ಮಾನವ ವಂಶದ ಉಚ್ಛೇದನದ ಆರೋಪದಿಂದ ಸುಶಿಕ್ಷಿತ ಬಡ ಸಮಾಜ ಮೊಳಗಿಂದಲೇ ತೇಜಸ್ವಿಯಾದ ಪೀಳಿಗೆಯು ಹುಟ್ಟುತ್ತಿರುತ್ತದೆ; ಆದರೆ ಇತ್ತೀಚೆಗೆ ನೋಡಿದರೆ ಸುಶಿಕ್ಷಿತ ಸಮಾಜದೊಳಗಿನ ಯುವಕ-ಯುವತಿಯರು ಪ್ರೌಢವಿವಾಹದಿಂದ ಆಜನ್ಮ ಕೌಮಾರ್ಯದ ಕಡೆಗೆ ಒಳ್ಳೇ ವೇಗದಿಂದ ಓಡುತ್ತಿರುವದು ಕಂಗೊಳಿಸುತ್ತದೆ. ಅವರ ಈ ಕೃತಿಯು ರಾಷ್ಟ್ರೀಯ ದೃಷ್ಟಿಯಿಂದ ದೋಷಾರ್ಹವೇ ಆದೀತು ಇಂದಿಗೆ ಯಾವ ಯುವಕ ಯುವತಿಯರಿಗೆ ಅವಿವಾಹಿತರಾಗಿರಬೇಕಾಗಿದೆಯೋ ಅದು ದೈವೀ ಶಾಪದಿಂದಲ್ಲ. ತದ್ವಿರುದ್ಧವಾಗಿ ಸ್ವಂತ ಅವಿವಾಹಿತರಾಗುಳಿವ ಜನರೇ ಭಾವೀ ಕಾಲದ ತೇಜಃಪುಂಜ ಹಿಂದುಸ್ಥಾನಕ್ಕೆ ಎಡಬಿಡದೆ ಶಾಪಗಳಿಸುತ್ತಿರುತ್ತಾರೆ. ಅವಿವಾಹಿತ ಜನರು ಆ ಶಾಪದಿಂದ ಸ್ವಂತ ದಗ್ಧರಾಗಿ ಇಹಲೋಕದ ಆನಂದಕ್ಕೆ ಹೊರತಾಗುತ್ತಾರಲ್ಲದೆ, ನಾಳಿನ ಲೋಕದ ಮೇಲೆ ವಂಶಚ್ಛೇದನದ ಕೆಂಡಗಳನ್ನಿಟ್ಟು, ಕಾಯುವ ಶಾಪವನ್ನಿತ್ತು ಹೊರಟು ಹೋಗುತ್ತಾರೆ.

---

## ಸ್ವೈರಾಚಾರದ ವಿವರಣ :: ೨

ವೈಷಯಿಕ ಸ್ವೈರಾಚಾರಕ್ಕೆ ಬೆದರಿಸುವ ಪಾಪದ ಅಂಜಿಕೆಯು ಇತ್ತೀಚಿಗೆ ಇಲ್ಲದಂತಾಗಿದೆ; ಮತ್ತು ಆ ಅಂಜಿಕೆಯಾದರೂ ಸ್ವೈರಾಚಾರಕ್ಕೆ ಹೆಚ್ಚಾಗಿ ಅಡ್ಡಿಮಾಡಲಿಕ್ಕೆ ಎಂದೂ ಶಕ್ತವಾಗಿರಲೇ ಇಲ್ಲ!! ಸ್ವೈರಾಚಾರವೆಂಬುದು ವೈಯಕ್ತಿಕ ಸ್ವಾತಂತ್ರ್ಯದ ಬಾಬು ಎಂದಾದಾಗಿನಿಂದ ಅದು ಧಾರ್ಮಿಕ ವಿಧಿ-ನಿಷೇಧದ ಅಧಿಕಾರದ ಹೊರಗಿನದಾಗಿದೆಯೆಂದು ಪ್ರತಿಪಾದಿಸಹತ್ತಿದಂತಾಗಿದೆ; ಮತ್ತು ಧಾರ್ಮಿಕ ಗ್ರಂಥಗಳೆಂದರೆ ಯಾವುದರಲ್ಲಿ ಹದಿನೆಂಟು ಪುರಾಣಗಳ ಸಮಾವೇಶವು ಪ್ರಾಯಶಃ ಆಗುವದೋ ಅವುಗಳೊಳಗಿನ ದೊಡ್ಡವರ ದುರಾಚಾರಗಳು ಬುದ್ಧಿವಾದೀ ಮನುಷ್ಯನ ತಲೆಯನ್ನು ಇಂದಿಗೂ ಕೆಡಿಸದಿರವು! ನೀತಿ-ಅನೀತಿಗಳ ದೊಡ್ಡ ಪರೀಕ್ಷೆಯೆಂದರೆ ನಮ್ಮ ಧರ್ಮ! ಆದರೆ ಇಂದಿಗೆ ಆ ಧರ್ಮವೇ ಹೆಚ್ಚಾಗಿ ಫಜೀತಿಗೆ ಸಿಕ್ಕುಬಿದ್ದಿರುವದರಿಂದ, ಆ ಧರ್ಮದ ಅಭಿ

ಪ್ರಾಯವನ್ನು ಅದಾರೂ ಕೇಳವಂತಾಗಿದ್ದಾರೆ. ಸ್ವಂತ ಧರ್ಮದ ಹೆಸರಿನಲ್ಲೇ ಹೆಚ್ಚಾದ ದುರಾಚಾರಗಳು ಢಾಣಾಢಂಗು ವಾಗಿ ನಡೆದಿರುವುದರಿಂದ, ಧರ್ಮಕ್ಕೆ ನಮ್ಮಗಳ ನೀತಿಮತ್ತೆಯು ಆಕಲನಮಾಡುವ ಅಧಿಕಾರವೇನಿದೆ? ಎಂದು ಕೇಳ ಬೇಕೆಂದೆನಿಸುತ್ತದೆ ಇಂದಿನ ಅತ್ಯಂತ ಹಿರಿಯ ಧರ್ಮಶಾಸ್ತ್ರ, ಇಂದಿನ ನೀತಿ-ಸ್ಮೃತಿ ಎಂದರೆ 'ಇಂಡಿಯನ್ ಪಿನಲ್ ಕೋಡ.'

ಫೌಜದಾರೀ ಕಾಯಿದೆಯು ಹೊರಗಿನ ಪೊಳ್ಳು ನೀತಿ ತತ್ವಗಳು ಆಗಾಗ್ಗೆ ಬದಲಾಗುತ್ತಿರುವ ಸಮಾಜದ ಪ್ರವಾಹದಿಂದ ಕರಗಹತ್ತುತ್ತವೆ; ಕಾಲಾಂತರ ದಲ್ಲಿ ಅವು ಇಲ್ಲದ ತೆಯೂ ಆಗುತ್ತವೆ. ಸ್ವೈರಾಚಾರಕ್ಕೆ ಇಂದಿಗೆಲ್ಲಿಯಾದರೂ ಪ್ರತಿಬಂಧವುಂಟಾದದ್ದು ಕಂಡುಬರುತ್ತಿದ್ದರೆ ಅದು ಇಂಡಿಯನ್ ಪಿನಲ್ ಕೋಡಿನ ನಾಲ್ಕಾರು ಕಲಮುಗಳಲ್ಲೇ. ಯಾವಳ ಗಂಡನು ಜೀವಂತವಿದ್ದಾ ನೆಯೋ ಅಥವಾ ಇರುವನೆಂದು ತಿಳಿಯಲಿಕ್ಕೆ ಆಧಾರವಿದೆಯೋ ಆಕೆಯ ಗಂಡನ ಒಪ್ಪಿಗೆ ಇಲ್ಲವೆ ಅಪ್ಪಣೆಯ ಹೊರತು ಅಂಥ ಸ್ತ್ರೀಯಳೊಡನೆ ಸಂಬಂಧ ವಿರಿಸುವದು ಅಪರಾಧವಾಗುವದು. ಆದರೂ ಕೂಡ ಇಂಥ ಅಪರಾಧಗಳ ಬಗ್ಗೆ ಕೇವಲ ಆ ಸ್ತ್ರೀಯ ಗಂಡನಿಗೇ ಫಿರ್ಯಾದು ಮಾಡಲಿಕ್ಕೆ ಬಂದೀತು. ಅಲ್ಪ ವಯಸ್ಕ ಸ್ತ್ರೀಯನ್ನು ಉಪಭೋಗಿಸಿದರೆ ಅದು ದಂಡನೀಯ ಅಪರಾಧವಾಗು ತ್ತದೆ. ಯಾರೊಬ್ಬರ ಲಗ್ನದ ಹೆಂಡತಿ ಅಥವಾ ಯಾರೊಬ್ಬರ ಅಧೀನದಲ್ಲಿರುವ ಅಲ್ಪವಯಸ್ಕ ಹುಡುಗಿ ಇವರನ್ನು ಓಡಿಸಿಕೊಂಡೊಯ್ಯುವುದು ಅಪರಾಧವೇ ಆಗುತ್ತದೆ. ಇಂಥ ವಿಶಿಷ್ಟ ಬಾಬುಗಳಲ್ಲೇ ಫೌಜದಾರೀ ಕಾಯಿದೆಯು ನಮ್ಮ ಗಳ ವೈಷಯಿಕ ನೀತಿಮತ್ತೆಯನ್ನು ಆಕಲನಗೊಳಿಸುತ್ತದೆ ಆ ಕಲಮುಗಳಲ್ಲಿ ಬಾರದಂಥ ಸಂಗತಿಗಳನ್ನು ಮಾಡಲಿಕ್ಕೆ ಅದರ ನಿರಂತರದ ಸಮ್ಮತಿಯೇ ಎಂದೆನ್ನಬೇಕಾಗುವದು ಆ ದೃಷ್ಟಿಯಿಂದ ಕುಮಾರಿಕೆ ಇಲ್ಲವೆ ವಿಧವಾ ಸ್ತ್ರೀಯ ರೊಡನೆ ಯಾರಾದರೂ ಅನೈತಿಕ ಸಂಬಂಧವನ್ನಿಟ್ಟರೆ ಕಾಯಿದೆಯು ಅವರಿಗೆ ತಡೆಯನ್ನುಂಟು ಮಾಡುವುದಿಲ್ಲ. ಖುದ್ದ ಸುವಾಸಿನಿಯ ಉದಾಹರಣೆ ತಕ್ಕೊಂ ಡರೂ ಅವಳ ಗಂಡನ ಒಪ್ಪಿಗೆ ಇಲ್ಲವೆ ಅಪ್ಪಣೆ ಇದ್ದರೂ ಕೆಲಸ ಸಾಗುವದು. ಹೆಂಡತಿಯನ್ನೇ ಬಿಟ್ಟುಬಿಟ್ಟಿರುವಗಂಡನು ಆಕೆಯ ಅನೀತಿಯ ವಿಚಾರಣೆಯನ್ನ ವೇಕೆ ಮಾಡುವನು? ಹಾಗು ಅವಳೊಡನೆ ಸಂಬಂಧವಿಟ್ಟಿರುವವನ ವಿರುದ್ಧ ಫಿರ್ಯಾದಿಯ ಖಟಾಟೋಪವನ್ನ ದೇತಕ್ಕೆ ಕೈಕೊಳ್ಳುವನು? ಒಟ್ಟಿನಲ್ಲಿ ಕಾಯಿದೆ, ಧರ್ಮಶಾಸ್ತ್ರ, ನೀತಿ, ರೂಢಿ ಇವುಗಳೊಳಗಿನ ಯಾವೂ ಸ್ವೈರಾಚಾರಕ್ಕೆ ಅಡ್ಡಿ

ಯನ್ನುಂಟು ಮಾಡಲಿಕ್ಕೆ ಇಂದಿಗೆ ಸಮರ್ಥವಾಗಿಲ್ಲ. ಸ್ವೈರಾಚಾರದ ಭೂಮಿಕೆಯನ್ನು ಬುದ್ಧಿವಾದದ ಝುರಡಿಯಿಂದ ಸಾಣೆಸಬೇಕು ಮನೋವಿಶ್ಲೇಷಣ ಶಾಸ್ತ್ರದ ತತ್ವಸಿದ್ಧಾಂತದ ಮೇಲೆ ತಿಕ್ಕಿ ತಿಕ್ಕಿ ಒರೆಹಚ್ಚಿ ನೋಡಬೇಕು. ಖಾಸಗೀ ಚಾರಿತ್ರ್ಯ ಮತ್ತು ಸಾಮಾಜಿಕ ಆರೋಗ್ಯ ಇವುಗಳ ಮಾಪಿನಿಂದ ಅದನ್ನಳೆಯಬೇಕು. ವ್ಯಕ್ತಿಯ ಆಶೆಗಳು ಮತ್ತು ಮಾನವ ವಂಶದ ಆಕಾಂಕ್ಷೆಗಳು ಇವುಗಳ ತಕ್ಕಡಿಯಲ್ಲಿ ಅದನ್ನು ತೂಗಬೇಕು. ಹೀಗೆ ಬೇರೆ ಬೇರೆ ಒರೆಗಲ್ಲುಗಳ ಮೇಲಿಂದ ಅದು ಹೀನತರವೆಂದು ನಿರ್ಧಾರವಾದರೇ ಅದು ತ್ಯಾಜ್ಯವಾದೀತು.

ಸ್ವೈರಾಚಾರಕ್ಕೆ ಅವಶ್ಯವಾದ ಅವಸರದ ಪಾರ್ಶ್ವಭೂಮಿಯನ್ನು ಕಷ್ಟದಾಯಕವಾದ ಅರ್ಥಶಾಸ್ತ್ರವು ತನ್ನ ಜಗ್ಗಾಟದಿಂದ ತನ್ನಷ್ಟಕ್ಕೆ ತಾನು ಒಂದೇಸವನೆ ಸಜ್ಜುಗೊಳಿಸುತ್ತದೆ. ಪ್ರೌಢವಿವಾಹೋತ್ಸುಕ ತರುಣ ಪೀಳಿಗೆಯು ಬಲವಂತದಿಂದ ಅವಿವಾಹಿತವಾಗುಳಿಯತೊಡಗಿದೆ. ಜೀವನ ಕಲಹದ ಗೊಂದಲದಲ್ಲಿ ಸ್ತ್ರೀ-ಪುರುಷರು ಆಗಾಗ್ಗೆ ಪರಸ್ಪರರನ್ನು ಹೆಚ್ಚೆಚ್ಚು ಕೂಡಹತ್ತಿರುವರು. ಮಿತಿಮೀರಿದ ದೈನ್ಯದ ನಿರಾಶೆಯಿಂದ ಮುಂಗಾಣದೆ, ಪ್ರತಿಯೊಂದು ಬಾಕಿ ಉಳಿದಿರುವ ವೈಷಯಿಕ ಆನಂದದಲ್ಲಿ ದೊರೆತಷ್ಟು ನುಂಗಿ ನೀರು ಹಿಡಿಯುವದಕ್ಕೆ ಅವರು ಧಡಪಡಿಸಹತ್ತಿರುತ್ತಾರೆ ಒಟ್ಟಿನಲ್ಲಿ ಪರಿಸ್ಥಿತಿ, ಕಾಲ, ದೇಶಸ್ಥಿತಿ ಇವುಗಳೆಲ್ಲ ಸ್ವೈರಾಚಾರಕ್ಕೆ ಅನುಕೂಲಗಳಾಗಿವೆ; ಮತ್ತು ಅನ್ನಬೇಕೆಂದೆನಿಸುವುದೆಂದರೆ, ಸ್ವೈರಾಚಾರದ ಪಂಥವೂ ಇಂದಿನ ಕಠಿಣ ಆರ್ಥಿಕ ಪರಿಸ್ಥಿತಿಯೊಳಗಿಂದಲೇ ನಿರ್ಮಿತವಾಗಿದೆ. 'ನವಮತವಾದ' ಎಂದೆನ್ನುವ ಸಾಂಪ್ರದಾಯವಾದನೂ ಸ್ವೈರಾಚಾರವನ್ನು ಕೆಲ ಪ್ರಸಂಗಗಳಲ್ಲಿ ಪ್ರತ್ಯಕ್ಷ ಹಾಗು ಬಹುತರ ಪ್ರಸಂಗಗಳಲ್ಲಿ ಅಪ್ರತ್ಯಕ್ಷವಾಗಿ ಬೆನ್ನುಕಟ್ಟುತ್ತಿರುವದೇ ದೃಗ್ಗೋಚರವಾಗುವುದು ತರುಣ ಪೀಳಿಗೆಗೆ ಲೈಂಗಿಕ ಸ್ವಾತಂತ್ರ್ಯವೆಂದರೇನೂ ವಿಶೇಷ ಬಾಬಿಲ್ಲ ಎಂದೆನಿಸುತ್ತದೆ ಇದರಲ್ಲಿ ಮನಸ್ಸಿನ ಅಥವಾ ಶರೀರದ ಆರೋಗ್ಯವಿಷಯಕ ಘಟನೆಗಳೇನೂ ಅಂತರ್ಗತಗಳಾಗಿರುವದಿಲ್ಲ ಸ್ವೈರಾಚಾರದ ವಿರುದ್ಧದ ಎಲ್ಲ ಅಂಬೋಣವನ್ನು ಚೆನ್ನಾಗಿ ಕೇಳಿಕೊಳ್ಳದಲೆ ತರುಣರು ಅದರಲ್ಲಿ ಹಾರಿಕೊಳ್ಳುತ್ತಾರೆ. ಬಳಿಕ ಅದು ಅಷ್ಟರ ಮಟ್ಟಿಗೆ, ಒಮ್ಮೊಮ್ಮೆ ನಿರಂತರವುಳುಗುವದಕ್ಕಾಗಿ, ತಮ್ಮ ಪರಿಸ್ಥಿತಿ ಹಾಗು ದುಡ್ಡಿನ ಬಲಾಬಲದ ಮೇಲೆ, ಅನುಕೂಲ-ಪ್ರತಿಕೂಲತೆಗಳ ಮೇಲೆ ಅವ

ಲಂಬಿಸಿರತ್ತದೆ ಚೆನ್ನಾಗಿ ಯೋಚಿಸಿವರೆ ಅವರಲ್ಲಿ ಸೇರ್ಪಡೆ ಹೊಂದುವ ವ್ಯಕ್ತಿಗಳ-ವಿಶೇಷವಾಗಿ ಯುವತಿಯರ-ಮನಸ್ಸಿನ ಸ್ಥಿತಿಯಲ್ಲಿ ನಿರಂತರ ಯಾವ ಘಾತುಕ ಸ್ಥಿತ್ಯಂತರಗಳು ಆ ಸ್ವೈರಾಚಾರದಿಂದಾಗುವವೋ ಅವುಗಳು ಆ ಜನರಿಗೆ ಗೊತ್ತೇ ಇರುವದಿಲ್ಲ.

ಸ್ತ್ರೀ-ಪುರುಷರು ಮುಚ್ಚಿಂಜೆಯಲ್ಲಿ ಒಬ್ಬರಿಗೊಬ್ಬರು ತಾಕಲಾಡುತ್ತ ಉದ್ಯಾನಗಳಲ್ಲಿ ವಿಹರಿಸುವದು, ಹೊಟೆಲ್ಲಿನ ಬಾಗಿಲಿಕ್ಕಿದ ಕೋಣೆಗಳಲ್ಲಿ ತಿನ್ನುಣ್ಣುವ ನೆವದಿಂದ ಪರಸ್ಪರರು ಹೊಂದಿ ಕೂಡ್ರುವದು, ಮೇಜಿನ ಮೇಲಿನ ಆಚ್ಛಾದನದಿಂದ ಮರೆಯಾಗಿರುವ ಕಾಲಿನಿಂದ ಒಬ್ಬರಿಗೊಬ್ಬರು ತಿವಿಯುವದು, ರಾತ್ರಿಯಲ್ಲಿ ಮಾರ್ಗದ ಪಕ್ಕದಲ್ಲಿ ದೀಪನಾರಿಸಿಕೊಂಡು ನಿಂತಿದ್ದ ಮೊಟರಿನಲ್ಲಿ ಅಥವಾ ನಿವಾಸ ಸ್ಥಳದ ಹೊಟಲಿನಲ್ಲಿ ಪ್ರಣಯಿಗಳು ಪರಸ್ಪರರಿಗೆ ಭೆಟ್ಟಿಯಾಗುವದು ಈ ಎಲ್ಲ ಹೊಸ ಹೊಸ ರೂಢಿಗಳು ಹೆಚ್ಚಿನ ಪ್ರಮಾಣದಲ್ಲಿ ಕಂಡು ಬರಹತ್ತಿವೆ. ತರುಣರಿಗೆ ಲೈಂಗಿಕ ಸಂಗತಿಗಳ ಬಗ್ಗೆ ಇತ್ತೀಚೆಗೆ ಸಂಕೋಚವೆಂಬುದು ಉಳಿದೇ ಇಲ್ಲ. ಪ್ರತಿಕೂಲ ಪರಿಸ್ಥಿತಿಯಲ್ಲಿ ಅಂಡಲೆಯುತ್ತಿರುವ ಹೇಡಿ ಯುವಕರು ಮಾತ್ರ ಸ್ವಂತದ ವೈಷಯಿಕ ಬಯಕೆಗಳನ್ನು ಲಗ್ನದ ನಂತರ ತೃಪ್ತಗೊಳಿಸಿಕೊಳ್ಳುವ ಆಸೆಯಲ್ಲಿ ದಿನಗಳನ್ನು ಕಳೆಯುತ್ತಾರೆ; ಆದರೆ ಅಂಥವರಿಗೂ ಬೇರೆಯವರ ಸ್ವೈರವರ್ತನದ ಬಗ್ಗೆ ಕೆಡಕೆನಿಸುವದಿಲ್ಲ. ತದ್ವಿರುದ್ಧವಾಗಿ ಆ ಧೈರ್ಯಸ್ಥ ತರುಣರ ಬಗ್ಗೆ ಅವರು ತಮ್ಮ ಮನಸ್ಸಿನಲ್ಲಿ ಕೌತುಕ ಇಲ್ಲವೆ ಹೇವವನ್ನೇ ಪಡುತ್ತಿರುತ್ತಾರೆ. ಅವಿವಾಹಿತ ಮಾತೆಯರ ಸಂಖ್ಯೆಯು ಅಷ್ಟು ಹೆಚ್ಚು ಕಾಣಿಸದಿದ್ದರೆ ಅದರ ಶ್ರೇಯಸ್ಸನ್ನೆಲ್ಲ ಸಂತತಿ ನಿಯಮನದ ನವ-ನವೀನ ಸಾಧನಗಳಿಗೇ ಈಯಬೇಕಾದೀತು. ಆದರೂ ಕೂಡ ಅವಿವಾಹಿತ ಮಾತೆಯರ, ಗರ್ಭಿಣಿ ಕುಮಾರಿಕೆಯರ ಸಂಖ್ಯೆಯು ಹೆಚ್ಚು ಪ್ರಮಾಣದಲ್ಲಿದೆಯೆಂದೆನ್ನ ಬೇಕಾಗುತ್ತದೆ. ವ್ಯಭಿಚಾರಕ್ಕೆ ರೂಢಿಯ ರಾಜಮಾನ್ಯತೆಯು ಲಭಿಸಿರುವದಿಲ್ಲ. ಸದಾಚಾರವೇ ಇದುವರೆಗೂ ಆದರಣೀಯವಾಗಿದೆ. ಅದರಿಂದ ಸ್ವೈರಾಚಾರದ ಕಲ್ಪನೆಯು ಯಾರ ಮನಸ್ಸಿಗೆ ಮುಟ್ಟಿಯೋ ಇಲ್ಲವೋ ಅಂಥ ಎಷ್ಟೋ ಜನ ತರುಣಿಯರು ಈಗಲೂ ದೊರಕುವರು ಸಾಲೆಯೊಳಗಿನ ಓದು, ಮನೆಗೆಲಸ, ಆಟ, ಉತ್ಸಾಹದ ವ್ಯಾಸಂಗ ಮುಂತಾದ ಕಾರ್ಯಕ್ರಮಗಳಲ್ಲಿ ಅವರ ಕಾಲವು ಸುವ್ಯವಸ್ಥೆಯಿಂದ ಕ್ರಮಿಸುತ್ತದೆ ಆ ಸ್ತ್ರೀಯರಿಗೆ ವೈಷಯಿಕ ಬಾಬಿನ ಬಗ್ಗೆ ವಿಚಾರ ಮಾಡಲು ಅವಸರವೇ

ಇರುವದಿಲ್ಲ. ಮನೆಯೊಳಗಿನ ಸದಾಚಾರ, ಸಂಯಮ ಹಾಗು ಬೈಲು ವಾತಾವರಣ ಇವುಗಳು ಸ್ವೈರಾಚಾರದ ವಿಷವಾಯುವನ್ನು ಸಂದಿ ಮೂಲೆಗಳಲ್ಲಿ ಹುದುಗಿಕೊಂಡಿರಲು ಅವಕಾಶವೀಯುವದಿಲ್ಲ; ಆದರೆ ಅಂಥ ಜನರ ಕಿವಿಗೂ ನಡು ನಡುವೆ ಸ್ವೈರಾಚಾರದ ಪ್ರಚ್ಛನ್ನಪ್ರಚ್ಛವಷ್ಟೇ ಅಲ್ಲ, ವ್ಯಭಿಚಾರದ ಅನುಕೂಲ ಸಂಗತಿಗಳು ವತ್ತಿ ಮತ್ತಿ ಬೀಳುತ್ತಿರುತ್ತವೆ. ಆದರಿಂದ ಈ ವಿಷಯದ ಬಗ್ಗೆ ಯಾವ ಮುಚ್ಚುಮರೆಯನ್ನೂ ಇಡದೆ ಚರ್ಚೆಮಾಡಬೇಕು. ಈ ವಿಷಯದ ಬಗ್ಗೆ ಪ್ರಕಟ ಚರ್ಚೆಮಾಡಬಾರದೆಂದು ಹಲವು ಮಂದಿ ಸಾಲಕರೂ ಹಿರಿಯರೂ ಅನ್ನುತ್ತಿರುತ್ತಾರೆ. ಆದರೆ ನಾವು ಈ ಬಗ್ಗೆ ಬಹು ದೊಡ್ಡ ತಪ್ಪು ಮಾಡುತ್ತಿರುತ್ತೇವೆ. ಗೌಪ್ಯಗೋಪನದ ವಿಪರೀತ ಔತ್ಸುಕ್ಯವು ಒಂದೇ ಸವನೆ ಹೆಚ್ಚುತೊಡಗುತ್ತದೆ. ಅಲ್ಲದೆ ಹಿರಿಯರು ಹಾಗೆ ಗೌಪ್ಯವಾಗಿರಿಸಿದ್ದ ಲೈಂಗಿಕ ಬಾಬನ್ನು ತರುಣರು ಡಾಣಾಡಂಗುರವಾಗಿ ಚರ್ಚಿಸುತ್ತಿರುತ್ತಾರೆ. 'ಅದರಲ್ಲೇನಿವೆ?' ಎಂದು ತರುಣರು ಬೇರೆಯವರಿಗೆ ಹೇಳುತ್ತ ಅವರನ್ನು ಮಬ್ಬಿಗೆ ಕೆಡಹುತ್ತಾರೆ ಹೆಚ್ಚೇನು? ಕೆಲ ಹೊಣೆಗಾರ ಹಿರಿಯರೂ ಯುವಕರ ಲೋಭ ಸಂಪಾದನೆಗಾಗಿ ಇಲ್ಲವೆ ತಾವೂ ಮನಸ್ಸಿನಿಂದ ತರುಣರಿರುತ್ತೇವೆಂಬದನ್ನು ತೋರಿಸುವ ಸಲುವಾಗಿ 'ಅದರಲ್ಲೇನಿದೆ? ಹೀಗೆಯೇ ಸಾಗತಕ್ಕದ್ದು' ಎಂಬ ಹೊಣೆಯಿಲ್ಲದ ಉದ್ಗಾರ ಹೊರಡಿಸುತ್ತಾರೆ ಗೋಲ ಸೀರೆಯುಡೋಣ, ಇಲ್ಲವೆ ಲುಂಗಿಯನ್ನು ತೊಡೋಣ ಮುಂತಾದವುಗಳಷ್ಟು ಸ್ವೈರಾಚಾರವು ನಿರುಪದ್ರವಿಯಾದದ್ದು ಎಂದು ಏನಾದರೊಂದು ಅವರು ತಿಳಕೊಂಡಿದ್ದರೆ ಉಪಾಯವಿಲ್ಲ. ವೈದ್ಯಕೀಯ ಇಲ್ಲವೆ ಮಾನಸ ಶಾಸ್ತ್ರದ ದೃಷ್ಟಿಯಿಂದ ಲಗ್ನದ ಹೊರಗಿನ ಸ್ವೈರಾಚಾರವು ಪರಿಣಾಮದಲ್ಲಿ ಅಷ್ಟು ಕ್ಷುಲ್ಲಕವಾಗಿರುವದಿಲ್ಲ. ಆ ಎರಡೂ ಶಾಸ್ತ್ರಗಳಲ್ಲಿಯ ತಜ್ಞರ ಮತದಂತೆ ಸ್ವೈರಾಚಾರದಿಂದ ವ್ಯಕ್ತಿಯ ಮೇಲೆ ಅಥವಾ ಸಮಾಜದ ಮೇಲೆ ಯಾವ ಅನಿಷ್ಟಪರಿಣಾಮಗಳಾಗುವವೋ ಅವುಗಳ ಬಗ್ಗೆ ಜಾಹೀರ ಚರ್ಚೆಯಾಗುವದು ಅವಶ್ಯವಾಗಿದೆ.

ನಮ್ಮ ದೇಶದಲ್ಲಿ ಲೈಂಗಿಕ ವಿಷಯದ ಅಂಕಿಗಳನ್ನು ಒಟ್ಟುಗೂಡಿಸುವ ಪ್ರಚಾರವಿರುವುದಿಲ್ಲ. ವೈವಾಹಿಕ ಸಂಬಂಧದ ಕೆಲ ಮುಖ್ಯ ಮುಖ್ಯ ಕಲಮುಗಳು ಕಳೆದ ಜನಗಣತಿಯಲ್ಲಿ ಎಷ್ಟೋ ಕಡೆಗೆ ಸೇರಿಸಲಾಗಿದ್ದವು ಆದರೆ ಎಲ್ಲರೂ ಕಟ್ಟುನಿಟ್ಟಾಗಿ ಹೇಳುವುದೇನಂದರೆ, ಜನತೆಯು ನಿಜ ಸಂಗತಿ ತಿಳಿಸುವದಿಲ್ಲೆಂದು. ಖುದ್ದ ಇಂಗ್ಲಂಡದಲ್ಲಿ ಕೂಡ ಇಂಥ ಅಂಕಿಗಳನ್ನು ಪ್ರತಿವರ್ಷ

ದೊರಕಿಸುತ್ತಿರುವದಿಲ್ಲ; ಆದರೆ ಅಮೇರಿಕೆಯಲ್ಲಿ ಮಾತ್ರ ಇಂಥ ಅಂಕಿಗಳನ್ನು ಕೂಡಿಸಿ ಪ್ರಕಟಿಸುವ ರೂಢಿಯು ಪ್ರಚಲಿತವಾಗಿದೆ ಅರ್ಥಾತ್ ಅಮೇರಿಕನ್ನರ ಇರವು, ಆಚಾರ-ವಿಚಾರ, ಪರಿಸ್ಥಿತಿ ಇವುಗಳೆಲ್ಲವೂ ಹಿಂದು ನಿವಾಸಿಗಳಿಗಿಂತ ತೀರ ಭಿನ್ನವಾಗಿವೆ. ಆದರೂ ಕೂಡ ಅಮೇರಿಕೆಯಂಥ ಸಧಾರಿಸಿದ ವ್ಯಕ್ತಿಸ್ವಾತಂತ್ರ್ಯದ ತವರೂರಲ್ಲಿ ಏನೇನು ಕಂಗೊಳಿಸತ್ತಿದೆಯೆಂಬುದು ನೋಡತಕ್ಕದ್ದಾಗಿದೆ ಅಲ್ಲಿ ಸಾಧಾರಣವಾಗಿ ೧೦೦ ಕ್ಕೆ ೧೦-೧೫ ಜನರಂತೆ ಫಿರಂಗಿ ರೋಗಪೀಡಿತ ಅಮೇರಿಕನ್ನರು ದೊರೆತಾರೆಂದು ಅಮೇರಿಕನ್ ಸ್ಪೆಶಲ್ ಹಾಯಜಿನ್ ಅಸೋಸಿಯೇಶನ್ನಿನ ಅಂದಾಜಿದೆ. ಈ ಫಿರಂಗೀ ರೋಗವು ಮಾನವನಿಗೆ ೧೬ರಿಂದ೩೦ ವಯಸ್ಸಿನ ತಾರುಣ್ಯದ ಒಳ್ಳೇ ಯೌವ್ವನಾವಸ್ಥೆಯಲ್ಲೇ ದೊಡ್ಡ ಪ್ರಮಾಣದಿಂದ ಗಂಟಬೀಳುತ್ತದೆಂಬದ ಕೋಷ್ಟಕದಿಂದ ಸಿದ್ಧವಾಗಿರುತ್ತದೆ. ಫಿರಂಗೀ ರೋಗವು ಬೀಜ ಸಹಿತ ಇಲ್ಲದಂತಾದರೆ ಸ್ವೈರಾಚಾರದ ಮೇಲಿನದೊಂದು ಬಹು ದೊಡ್ಡ ಸಂಕಟವೇ ಇಲ್ಲದಂತಾದೀತೆಂಬದು ನಿಜ; ಆದರೆ ಸದ್ಯಕ್ಕಂತೂ ಅದನ್ನು ಬಚ್ಚಿಡುವದರಿಂದ, ಆ ರೋಗದ ಬೆಳವಣಿಗೆಯು ಏಕೋಪ್ರಕಾರ ಹೆಚ್ಚುತ್ತಲಿವೆ ಈ ಫಿರಂಗೀ ರೋಗ ಗಂಟು ಬೀಳುವ ಕಾಲವಾದರೂ ಸಾಧಾರಣವಾಗಿ ಮೊದಲಿನ (ಗದ್ದೇ ಪಂಚವಿಶಿ) ೨೫ ವಯಸ್ಸಿನದೇ ಇರುತ್ತದೆ. ಇದರಿಂದ ತರುಣ ಪೀಳಿಗೆಯು ನೀತಿಮತ್ತೆಯು ಕೀಳುತರಕ್ಕಿಳಿಯು ಹತ್ತಿತೆಂದೇನೂ ಅಲ್ಲ; ಆದರೆ ಲಗ್ನದ ವಯಸ್ಸು ಒಂದೇಸವನೆ ಹೆಚ್ಚುತೊಡಗಿದ್ದರಿಂದ ಸ್ವೈರಾಚಾರಕ್ಕೆ ಅನಪೇಕ್ಷಿತ ರೀತಿಯಿಂದ ಉತ್ತೇಜನ ದೊರೆಯುತ್ತಿದೆ ಎಂಬದನ್ನು ಒಪ್ಪದಿರುವದರಲ್ಲಿ ಅರ್ಥವಿಲ್ಲ. ಸ್ವೈರಾಚಾರದ ಬೀಜವು ತರುಣಿಯರ ಸಹವಾಸದಿಂದ ಇಲ್ಲವೆ ಸಹವಾಸದ ದುರ್ದಮ್ಯ ಇಚ್ಛೆಯಿಂದ ತರುಣರ ಮನಸ್ಸಿನಲ್ಲಿ ಬಿತ್ತುತ್ತಿರುವದೇನೋ ನಿಜ; ಆದರೆ ಆ ಪ್ರಖರ ಹಸಿವೆಯ ಮೊದಲಿನ ಪಾರಣೆಯು ತೀರ ಸುಲಭವಾದಂಥ ವೇಶ್ಯೆಯರ ಸಂಬಂಧದ ಹೊಟೆಲ್ಲಿನಲ್ಲಿ ಮುಗಿಸಿಕೊಳ್ಳಲಾಗುತ್ತದೆ; ಮತ್ತು ಅದರ ನಿರಂತರ ನೆನಪೆಂದು ಫಿರಂಗೀ ರೋಗವು ಅಂಟಿಕೊಳ್ಳದೆ ಬಿಡುವುದಿಲ್ಲ.

ಕೆಲ ಬಾಬಿನಲ್ಲಿ ತೀರ ಸುಳ್ಳು ಇಲ್ಲವೆ ಅಪನಂಬಿಗೆಯ ಸಂಗತಿಯು ತರುಣರ ಕಿವಿಗೆ ಬಡಿಯುತ್ತಿರುತ್ತವೆ. ಅದು ವಿಶೇಷವಾಗಿ ಸಂತತಿ ನಿಯಮನದ ಸಾಧನಗಳ ಬಗ್ಗೆ; ಹಾಗು ಅವುಗಳ ಗುಣಗಳ ಬಗ್ಗೆ. ಜಾಹೀರಾತಿನ ಯುಗದಲ್ಲಿ ಸಟೆ-ದಿಟಗಳ ಸಮ್ಮಿಶ್ರಣದಲ್ಲಿ ದಿಟವಾವುದೆಂಬದನ್ನು ಗುರ್ತಿಸಲಶಕ್ಯವಾಗಿರು

ತ್ತದೆ. ಹಾಗು ಉಪಯೋಗ ನಿರ್ದೇಧತೆಗಳು ಸುಮ್ಮಸುಮ್ಮನೆ ಪ್ರಸ್ಥಾಪಿತವಾಗಿ ರುತ್ತವೆ. ಆ ಸಾಧನಗಳ ಮೇಲೆ ಹೆಚ್ಚು ನಂಬಿಗೆಯಿಂಸುವ ಸ್ತ್ರೀಯರ ಗೋಣು ಗಳು ಚನ್ನಾಗಿ ಮುರಿಯಲ್ಪಡುತ್ತವೆ. ಸಂತತಿ ನಿಯಮನದ ಉಪಾಯಗಳು ಹೆಚ್ಚು ಕಡಿಮೆ ಮಾನದಿಂದ ಉಪಯೋಗ ಬೀಳುತ್ತವೆಂಬ ಬಗ್ಗೆ ವಾದವಿಲ್ಲ. ಆ ಉಪಾಯಗಳ ಸಂಪೂರ್ಣ ಜ್ಞಾನವಿದ್ದರೇ ಆ ಸಾಧನಗಳ ನಿಜವಾದ ಬೆಲೆಯ ನ್ನು ಕಂಡುಹಿಡಿಯಲಿಕ್ಕೆ ಬಂದೀತು; ಹಾಗು ಯೋಗ್ಯರೀತಿಯಿಂದ ಉಪಯೋ ಗಿಸಲಿಕ್ಕೆ ಬಂದೀತು. ಬರಿಯ ಪ್ರಕಟನೆಗಳನ್ನವಲಂಬಿಸುವ ಜನರು ಚನ್ನಾಗಿ ಮೋಸ ಹೊಂದುತ್ತಾರೆ; ಅಲ್ಲದೆ ಬೇರೆಯವರಿಗೂ ಪ್ರಾಮಾಣಿಕ ಧೈರ್ಯದ ಮಾತು ಹೇಳಿ ಮೋಸಗೊಳಿಸುತ್ತಾರೆ ಅದರ ಎಲ್ಲ ಝಳವು ಸ್ತ್ರೀಯರಿಗೇ ತಾಕುತ್ತದೆ ತಜ್ಞರು ಯೋಗ್ಯವೆಂದು ನಿರ್ಧರಿಸಿದ ಔಷಧಗಳು ಹೆಚ್ಚೆಂದರೆ ೦೦ಕ್ಕೆ ೫೦ ರಂತೆ ಗುಣಕಾರಿಗಳಾದವೆಂದು ತಿಳಿಯುತ್ತದೆ. ಉಪಯೋ ಗಿಸಬಹುದೆಂದು ಶಿಪಾರಸು ಮಾಡಿದ ರಬ್ಬರಿನ ಸಾಧನಗಳು ಬೇರೆ ಬೇರೆಯಾಗಿ ಹೆಚ್ಚುಕಡಿಮೆ ಮಾನದಿಂದ ಯಶಸ್ವಿಗಳಾಗುತ್ತವೆ ಸ್ತ್ರೀಯರ ಪ್ರಕೃತಿಮಾನ ದಿಂದ ಅವರಿಗೆ ಕೆಲವು ಔಷಧಗಳು ಒಗ್ಗುವುದೇ ಇಲ್ಲ. ಕೆಲವು ಉಪಾಯಗಳು ಉಪಯುಕ್ತಗಳೇ ಆಗುವುದಿಲ್ಲವೆಂದು ತಜ್ಞರೇ ಹೇಳುತ್ತಾರೆ. ಸ್ವೈರಾಚಾರವು ಹೆಚ್ಚು-ಕಡಿಮೆ ಪ್ರಮಾಣದಲ್ಲಿ ಕಳ್ಳತನದ್ದೆಂಬು ಗಡಿಬಿಡಿಯದಾಗಿರುತ್ತದೆ ನಿಯಮನದ ಸಾಧನಗಳನ್ನು ಎಷ್ಟು ಚನ್ನಾಗಿ ಉಪಯೋಗಿಸಬೇಕಾಗುವದೋ ಅಷ್ಟು ಸರಿಯಾಗಿ ಅವುಗಳ ಉಪಯೋಗ ಮಾಡಿಕೊಳ್ಳುವಷ್ಟು ಅವಕಾಶವೂ ಏಕಾಂತವೂ ಆ ಸ್ವೈರಾಚಾರದವರಿಗೆ ಹೇಗೆ ದೊರಕಬೇಕು?

ಸಂಪೂರ್ಣ ಖಾತ್ರಿಯ ಹಾಗು ನಿರ್ಧಾಸ್ತತೆಯ ಸಾಧನವೆಂದು ನಂಬಿ ಗೆಳೆಯನೊಡನೆ ವಿಹರಿಸುತ್ತಿರುವ ಗೆಳತಿಯು ಜ್ವಾಲಾಮುಖಿಯ ಶಿಖರದ ಮೇಲಿಂದಲೇ ನಡೆಯುತ್ತಿರುತ್ತಾಳೆ. ಅವಿವಾಹಿತ ಮಾತೆಯರಾದರೂ ಹೀಗೆ ಮೋಸಗೊಂಡ ಇಲ್ಲವೆ ಮೋಸಗೊಳಿಸಲ್ಪಟ್ಟವರೇ ಆಗಿರುತ್ತಾರಲ್ಲವೆ? ತೀರ ಸುಧಾರಿಸಿದ ದೇಶಗಳಲ್ಲೂ ಕೂಡ ಇಂಥ ಅವಿವಾಹಿತ ಮಾತೆಯರು ಗರ್ಭಪಾತಗೊಳಿಸುವ ಖಟಾಟೋಪವನ್ನು ಮಾಡಿ ನೋಡುತ್ತಾರೆ. ಅದ ರಲ್ಲಾದರೂ ಸಂಕಟಗಳೇನೂ ಕಡಿಮೆಯಿರುವದಿಲ್ಲ. ಡಾಕ್ಟರ ಫ್ರೆಡ್ರಿಕ್ ಡಾಸಿನ್ನನು ಆ ಬಗ್ಗೆ ಅನ್ನುವದೇನಂದರೆ:—ರೀತಿಯಂತೆ ಹೆರಿಗೆಯಾಗುವ ದಕ್ಕಿಂತ ಗರ್ಭಪಾತದ ಕೇಸು ಕೆಡುವ ಹೊಣೆಯು ಹತ್ತು ಪಾಲು ಹೆಚ್ಚಾಗಿ

ರುತ್ತದೆ. ಗರ್ಭಪಾತದಲ್ಲಿ ಹಲವು ಮಂದಿ ಹೆಂಗಸರ ಜೀವಕ್ಕೆ ಅಪಾಯ ಸಂಭವಿಸುತ್ತದೆ; ಮತ್ತು ಅದರೊಳಗಿಂದ ಯಾರು ಪಾರಾಗಿ ಉಳಿಯುವರೋ ಅವರು ನಿರಂತರ ಅಶಕ್ತರು, ಬಂಜೆಯರು ಅಥವಾ ನಿರುಪಯುಕ್ತರು ಆಗುತ್ತಾರೆ. ಶ್ರೀಮಂತರ ಕುಟುಂಬಗಳಲ್ಲಿ ಕುಮಾರಿಕೆಯರ ಹೊಟ್ಟೆಯ ವ್ಯಾಧಿಯ ಶಸ್ತ್ರಕ್ರಿಯೆಗಳೂ, ಬಡವರ ಗರ್ಭಪಾತಗಳೂ ಇವು ಸೃಷ್ಟಿ ನಿಯಮಗಳೇ ಆಗಿರುತ್ತವೆಂದು ಜಸ್ಟಿಸ್ ಮೆಕಾಡಿಯು ಅನ್ನುತ್ತಿದ್ದನು. ಅನಾಥಾಶ್ರಮಗಳೊಳಗಿನ ಅವಿವಾಹಿತ ಮಾತೆಯರ ಹೇರಿಗೆಯ ಹೆಚ್ಚಿನ ಸಂಖ್ಯೆಯು ಏನು ಹೇಳುತ್ತವೆ? ಅವರ ಶರೀರದ ಮೇಲಾಗುವ ಅನಿಷ್ಟ ಪರಿಣಾಮಗಳು ಎಷ್ಟು ಅಲ್ಲವೆಂಬಂಥ ಭಯಂಕರ ಪರಿಣಾಮಗಳು ಅವರ ಮನಸ್ಸಿನ ಮೇಲೆ ನಿರಂತರವಾಗುತ್ತವೆ! ಸ್ತ್ರೀಯರ ಮನಸ್ಸಿನಲ್ಲಿ ಅಪತ್ಯಪ್ರೇಮ ವೆಂಬದು ಅತ್ಯಂತ ಸರ್ವವ್ಯಾಪೀ ಭಾವನೆಯಾಗಿರುತ್ತದೆ. ಕತ್ತರಿಸಿ ತೆಗೆದು ಇಲ್ಲವೆ ತೆಗೆದೊಗೆದ ಅಪತ್ಯದ ಬಗ್ಗೆ ಅವರ ಮನಸ್ಸಿನಲ್ಲಿ ಆಜನ್ಮ ಹಳಹಳಿ ಎನಿಸುತ್ತಿರುತ್ತದೆ ಖುದ್ದ ಹೆರಿಗೆಯ ಪ್ರಾಣಾಂತಿಕ ವೇದನೆಗಳನ್ನು ಅವರು ಸಹಿಸುತ್ತಿರುವುದಾದರೂ ಅವರಲ್ಲಿಯ ಅಪತ್ಯಪ್ರೇಮದ ಮೂಲಕವೇ! ಅದರ ಪ್ರತಿಫಲವು ಅವರಿಗೆ ದೊರೆಯುತ್ತದೆ. ಮಕ್ಕಳ ಲಾಭ, ಗಂಡನ ಸಹಾನುಭೂತಿ, ಸಾಮಾಜಿಕ ಪ್ರತಿಷ್ಠೆ ಇವೇ ಆ ಪ್ರತಿಫಲಗಳಾಗಿರುತ್ತವೆ. ಅವಿವಾಹಿತ ಮಾತೆಯರಿಗೆ ಇವುಗಳಲ್ಲಾವ ಪ್ರತಿಫಲವೂ ಸಿಗುವದಿಲ್ಲ.

ವೈಷಯಿಕ ಹಸಿವನ್ನು ಲಗ್ನದ ಹೊರತು ನೀಗಿಸಲಿಕ್ಕೆ ಸಿಗಹತ್ತಿತೆಂದರೆ ಲಗ್ನಸಂಸ್ಥೆಯು ಮೇಲೆ ಮೆಲ್ಲಮೆಲ್ಲನೆ ತಾನಾಗಿಯೇ ಬಹಿಷ್ಕಾರ ಬೀಳಹತ್ತುತ್ತದೆ; ಮತ್ತು ಉಭಯ ಸ್ತ್ರೀ ಪುರುಷರು ಆಜನ್ಮ ಅವಿವಾಹಿತರಾಗಿರಹತ್ತುತ್ತಾರೆ. ಲಗ್ನವಾಗುವದೆಂದರೆ ಹಲವು ಹೊಣೆಗಾರಿಕೆ ಹೊರುವುದು ತನ್ನನ್ನು ನಿರಂತರ ಬಿಗಿದುಕೊಳ್ಳುವದು. ಇದೆಲ್ಲ ನಿಜ; ಆದರೆ ಆ ದಿವ್ಯದಲ್ಲಿ ಹಾರಿಕೊಳ್ಳಲಿಕ್ಕಾದರೂ ಮನುಷ್ಯರು ಸಿದ್ಧರಾಗುವದು ತಮ್ಮ ಅತೃಪ್ತ ಹಾಗು ಪ್ರಖರತರವಾದ ಕಾಮುಕ ಪ್ರವೃತ್ತಿಗಾಗಿಯೇ! ಆದರೆ ಕಾಮುಕ ವ್ಯಾಪಾರಗಳು ಲಗ್ನದ ಹೊರತೇ ಎಡೆಬಿಡದೆ ನಡೆಯುಹತ್ತಿದರೆ, ಲಗ್ನವನ್ನಾದರೂ ಆದಾರು, ಅದೇತಕ್ಕೆ ಮಾಡಿಕೊಳ್ಳುವರ? ಸಮಾಜ ಧಾರಣೆಯ ಹಾಗು ವೈಯಕ್ತಿಕ ಸುರಕ್ಷಿತತೆಯ ದೃಷ್ಟಿಯಿಂದ ಲಗ್ನಸಂಸ್ಥೆಯು ಸಾಮಾಜಿಕ ಅದ್ಯಘಟನೆಯೆಂದು ತ್ರಿಕಾಲಾಬಾಧಿತವಾಗುಳಿಯುವದು; ಉಳಿದೇ ಉಳಿಯಬೇಕು; ಹಾಗು

ಆ ಅವಶ್ಯಕ ಘಟನೆಯ ಸಂಧ್ಯದಲ್ಲಿ ಯಾವುದೊಂದು ದುಷ್ಟ ಶತ್ರುವು ಅನರ್ಥದ ಸಿಡಿಸುಧ್ದನ್ನು ಸುರುವಿರುತ್ತಿದ್ದರೆ ಅದು ಅವಿವಾಹಿತ ಮಾತೆಯರ ಸ್ವೈರಾಚಾರವೇ ಸರಿ! ಅನಿಶ್ಚಿತ ಸಂತತಿಯ ಬಗ್ಗೆ ಸಹ ಮಾತೃಹೃದಯವು ಕಠೋರತನ ತೋರಿಸುವದಿಲ್ಲ ಲಕ್ಷಾಂತರ ಆಶೆ-ಚೂರಿಗಳನ್ನು ದಿನಾಲು ಮಾಡುವ ಪ್ರಿಯಕರನು ಯೌವನ ಹಾಗು ಸೌಂದರ್ಯ ಇವುಗಳು ಸಣಿಸಿ ಹೋದ ಬಳಿಕ ಪ್ರಿಯಳನ್ನು ಬಿಟ್ಟುಬಿಡುತ್ತಿರುವದರಿಂದ ಅಂಥವಳಿಗೆ ಹೊಸ ಗೆಳೆಯನದೆಂತು ದೊರಕುವನು? ಆದರಿಂದ ಮಕ್ಕಳು--ಮರಿಗಳ ಸಂ ಕ್ಷಣಕ್ಕಾಗಿಯೂ ಸ್ವಂತದ ಹೊಟ್ಟೆಯ ಅಥವಾ ವೈಷಯಿಕ ಹಸಿವನ್ನು ಹಿಂಗಿಸಲಿಕ್ಕಾಗಿಯೂ ಕಾಯಮ ಸ್ತ್ರೀ-ಪುರುಷ ಸಂಬಂಧಗಳು ನಿರ್ಮಾಣವಾಗುವದೇ ಸ್ತ್ರೀಯರ ದೃಷ್ಟಿಯಿಂದ ಅತ್ಯಂತ ಆವಶ್ಯವಾಗಿವೆ ಲಗ್ನವೆಂದರೆ ಬಂಧನವೆಂಬುದೇನೋ ನಿಜ. ಹೆಚ್ಚು ಕಡಿಮೆ ಕಟ್ಟಿಹಾಕಿದಂತಾಗುವುದೂ ಸತ್ಯವೇ: ಆದರೆ ಬೈಲು ಹನೆಯ ಮಹತಿಯನ್ನು ಎಷ್ಟೇ ಬಣ್ಣಿಸಿದರೂ ಆಸರಕ್ಕೆಂದು ಮನೆಗಳನ್ನು ಕಟ್ಟಲೇ ಬೇಕಾಗುತ್ತದೆ. ಬದಲಿಸುತ್ತಿರುವ ಋತುಮಾನಗಳ ಪ್ರಚಂಡ ಆಘಾತಗಳೂ, ನೆರೆಹೊರೆಯವರ ಸ್ವಾರ್ಥಪರ ಆಕ್ರಮಣವೂ ಇವುಗಳಿಂದ ರಕ್ಷಣಗೊಳಿಸಲಿಕ್ಕೆಂದು ಮನೆಯ ಸುತ್ತಲೂ ಭದ್ರವಾದ ಗೋಡೆಗಳನ್ನು ಕಟ್ಟಲೇ ಬೇಕಾಗುತ್ತದೆ ಲಗ್ನಸಂಸ್ಥೆಯ ನೆರವು ಸ್ತ್ರೀಯಳಿಗೆ ಹೆಚ್ಚಾಗಿ ಆವಶ್ಯವಿರುತ್ತದೆ ಲಗ್ನ ಮಾಡಿಕೊಳ್ಳದೆ ಕೇವಲ ಸ್ವೈರಾಚಾರದ ಅರವಟ್ಟಿಗೆಯಲ್ಲಿ ತೃಷೆನೀಗಿಸಿಕೊಳ್ಳುವ ಹೆಂಗಸು ವೇಶ್ಯೆಗಿಂತಲೂ ಕೀಳುತರವವಳೆಂದು ನಿರ್ಧಾರವಾಗುವದು. ವೇಶ್ಯೆಯು ಸ್ವಂತದ ದೇಹದ ಬೆಲೆಯನ್ನಾದರೂ ಹೊಂದುತ್ತಿರುತ್ತಾಳೆ ಆ ಬೆಲೆಯೊಳಗಿಂದ ಅವಳು ತನ್ನ ವೃದ್ಧಾಪ್ಯದ ಮುಂಗಡ ವ್ಯವಸ್ಥೆಯನ್ನಾದರೂ ಮಾಡಬಲ್ಲಳು. ಶೀಲ ಸಿರಾಶ್ರಿತ ಕಂಗಾಲಾವಸ್ಥೆಯ ಝಳದಿಂದ ಅವಳು ಅಲಿಪ್ತಳಿರುತ್ತಾಳೆ. ಅಂಥ ವೇಶ್ಯೆಗಿಂತ ಕೆಳಗಿಳಿಯುವ ಅವಿವಾಹಿತ ಸ್ವೈರಿಣಿಯು ಸಮಾಜದವರಿಂದ ತುಳಿಯಲ್ಪಡುತ್ತಾಳೆ; ಮತ್ತು ಅವಳ ಭಾವನೆ, ಆಕಾಂಕ್ಷೆ, ಪ್ರತಿಷ್ಠೆ ಇವು ಳೆಲ್ಲ ನುಗ್ಗು ನುಗ್ಗಾಗಿ ಹೋಗುತ್ತವೆ!

ಅತೃಪ್ತ ವಾಸನೆಗಳು ವಿಪರೀತ ಮಾನಸಿಕ ವಿಕೃತಿಗಳನ್ನುಂಟು ಮಾಡುವವು. ಅಂತೆಯೇ ವಾಸನೆಗಳನ್ನು ಅತೃಪ್ತವಾಗಿರಿಸಬಾರದೆಂದು ಪ್ರತಿಪಾದಿಸುವ ಸಾಂಪ್ರದಾಯವು ಸ್ವೈರಾಚಾರವನ್ನು ಅಖಂಡವಾಗಿ ಸಮರ್ಥಿಸಲು

ಮುಂದರಿಯುತ್ತಿರುವದು; ಆದರೆ ಅತೃಪ್ತವಾಸನೆಗಾಗಿ ಅವುಗಳ ತೃಪ್ತಿಗೆ ಅಕ್ಷೇಪಾರ್ಹಗಳಾದ ಮಾರ್ಗಗಳನ್ನು ಪೀಡಿತರು ಹಿಡಿಯುವಷ್ಟು ದೊಡ್ಡ ಮಾನಸಿಕ ವಿಕೃತಿಗಳು ಅವರಲ್ಲುಂಟಾಗುತ್ತಿರುವವೋ ಹೇಗೆ? ಯಾವ ಬಂಧನಗಳೂ ಇರಕೂಡದೆಂದೆನ್ನುವ ಸ್ವೈರಾಚಾರಿಗಳು ವಾಸನೆಗಳ ವಿಪರೀತ ಹಂಬಲವನ್ನುಂಟು ಮಾಡಿಸುತ್ತಾರೆ; ಹಾಗು ಅವುಗಳನ್ನು ಪೂರಯಿಸುವ ಘಾತುಕ ಮಾರ್ಗಗಳ ಬಗ್ಗೆ ಅತಿರೇಕವಾಗಿ ಸಮರ್ಥಿಸಹತ್ತಿರುತ್ತಾರೆ ಅತೃಪ್ತವಾಸನೆಗಳ ಈ ಮಾನಸಶಾಸ್ತ್ರವು, ಅನುಚಿತ ತೃಪ್ತಿಯೊಳಗಿಂದುಂಟಾಗಿದೆ. ಮಾನಸಿಕ ವಿಕೃತಿಗಳನ್ನು, ವಿಪರೀತ ಪ್ರವೃತ್ತಿಗಳನ್ನು ಹಾಗು ಘಾತುಕ ಸಂಬಂಧಗಳನ್ನು ಮಾನಸ ಶಾಸ್ತ್ರವು ಬೇಕಂತಲೇ ಮೊದಲು ಕಣ್ಣಿಗೆ ಮರೆಮಾಡುತಿರುತ್ತದೆ. ಪರಂಪರೆ, ರೂಢಿ ನೈತಿಕ ಕಲ್ಪನೆ, ಸಾಮಾಜಿಕ ಪ್ರತಿಷ್ಠೆ ಮುಂತಾದ ಸಂಗತಿಗಳನ್ನು ಸಹಜವಾಗಿ ಹಾರಿಸಿಬಿಡುತ್ತೇನೆಂದೆನ್ನುವ ಜನರೂ ಅವುಗಳ ಅಂಜಿಕೆಯಿಂದ ಅಂತರಂಗದಲ್ಲಿ ವ್ಯಾಕುಲಗೊಂಡಿರುತ್ತಾರೆ; ಹಾಗು ನಿಜವಾಗಿಯೂ ಲೋಕವಿರುದ್ಧವಾಗಿ ನಡೆಯುವ ಧೈರ್ಯಸ್ಥ ಜನರ ಮನಸ್ಸು ಪಾಪಾಚರಣೆ ಮಾಡಿದ್ದಕ್ಕಾಗಿ ಹಳಹಳಿಸುತ್ತ ವ್ಯಾಕುಲಗೊಂಡಂತೆ ಕಂಡು ಬಂದೀತು. ಸ್ವೈರಚಾರವನ್ನು ಸಮಾಜವು ಎಲ್ಲಿಯವರೆಗಿನ್ನೂ ಮನ್ನಿಸಿರುವದಿಲ್ಲವೋ ಅಲ್ಲಿಯವರೆಗೆ ಅದನ್ನು ಮಾಡುವವರಿಗೆ ಬರಿಯ ಜನತೆಯದೇ ಏಕೆ, ಸ್ವಂತಮನಸ್ಸಿನಿಂದಲೂ ನಾಚಿಕೆ ಎನಿಸದಿರುವದಿಲ್ಲ ತಾವು ಏನಾದರೂ ಅಪರಾಧಮಾಡುತ್ತಿರುತ್ತೇವೆಂಬ ಭಾವನೆಯೇ ಅವರ ಆ ವಿಷಯ ಸುಖದ ಹಾಲಲ್ಲಿ ಹೆಪ್ಪು ಹಾಕುತ್ತಿರುತ್ತನೆ. ಗಂಡಸೇನು ಕೂಡಲೆ ನಿರ್ಲಜ್ಜನಾಗಬಲ್ಲನು. ಸ್ತ್ರೀಯಳಿಗೆ ಸ್ತ್ರೀತ್ವವನ್ನು ಹೇಗೆ ತೊರೆಯಲಿಕ್ಕಾಗುವದಿಲ್ಲವೋ, ಅದರಂತೆಯೇ ಅವಳಿಂದ ಲಜ್ಜೆಯನ್ನು ತ್ಯಜಿಸಲಾಗುವದಿಲ್ಲ ಅವಳು ನಾಚಿಕೆಗೇಡಿಯೂ ಚಂಡಿಯೂ ಆಗಲು ಶಕ್ಯಳಾಗದಿದ್ದರೆ ಅವಳ ಮನಸ್ಸು ಅವಳನ್ನು ಒಂದೇಸವನೆ ಚುಚ್ಚುತ್ತಿರುತ್ತನೆ. ಇಂಥ ಪಶ್ಚಾತ್ತಪ್ತ ಸ್ತ್ರೀಯಳಿಗೆ ವಿಷಯಸುಖವೆಂಬದು ಅಸುಖವಾಗಿ ತೋರುತ್ತದೆ. ವಿಷಯಸುಖವು ಪಾಪವೆಂದೆನಿಸಹತ್ತಿದ್ದರಿಂದ, ಬರಬರುತ್ತ ಅವಳಿಗದು ಬೇಡೆನಿಸಹತ್ತುತ್ತದೆ ವಾಸನೆಯನ್ನು ಹತ್ತೊತ್ತಿಕೊಳ್ಳುವ ವಿಕೃತಿಯಿಂದ ಸ್ವೈರಾಚಾರವು ಮನುಷ್ಯನನ್ನು ಕಾಯುತ್ತದೆಂದರೆ, ಖುದ್ದ ಸ್ವೈರಾಚಾರದಿಂದ ಬೇರೆ ಮನೋವಿಕೃತಿಗಳುಂಟಾಗುವವಲ್ಲ, ಅವುಗಳ ಗತಿಯೇನು? ಸ್ವೈರಾಚಾರವೆಂದರೂ ಅದಕ್ಕೆ

ಡಾಣಾಡಂಗುರವಾಗಿ ವ್ಯವಹರಿಸಲಿಕ್ಕೆ ಬರುವದಿಲ್ಲ. ಗಂಡ-ಹೆಂಡಿರ ಪ್ರತಿಷ್ಠೆಯು ಅವರಿಗೆ ಲಭಿಸದಿರುವದರಿಂದ ಪ್ರಣಯಿ ಜನರಿಗೆ ಪರಸ್ಪರರ ಆಶ್ರಯದಿಂದ, ಆಧಾರದಿಂದ, ನಿರ್ಭಾಸ್ತತೆಯಿಂದ ಹಾಗು ತಲೆಯೆತ್ತಿಕೊಂಡು ಲೋಕದಲ್ಲಿ ವ್ಯವಹರಿಸಲಿಕ್ಕೆ ಬರುವದಿಲ್ಲ.

ಸ್ತ್ರೀ ಪುರುಷ ಸಂಬಂಧವು ಎಷ್ಟು ಶಾರೀರಿಕವೋ ಅದಕ್ಕೆ ಸಾವಿರಷ್ಟು ಅದು ಮಾನಸಿಕ ಸ್ವರೂಪದ್ದಾಗಿರುತ್ತದೆ. ಸ್ವೈರಾಚಾರಿ ಮಾನವರ ಶಾರೀರಿಕ ವಾಸನೆಗಳು ಎಂತೆಂತು ತೃಪ್ತವಾಗುವವೋ ಅಂತಂತೇ ಅವರ ಮಾನಸಿಕ ಹಸಿವು ಹೆಚ್ಚುತ್ತ ಹೋಗುವದು. ಆತಂಕವಿಲ್ಲದ ಸ್ನೇಹ, ನಿರ್ಭಾಸ್ತಿನಿಂದ ಒಟ್ಟಾಗಿರೋಣ, ನಿರಂತರ ಆಧಾರ ಮುಂತಾದ ಯಾವ ಸ್ತ್ರೀ ಪುರುಷರ ಸಂಬಂಧದ ಗುಟ್ಟಿನ ಬಾಬುಗಳಿವೆಯೋ ಅವುಗಳ ಮೇಲೆ ಸ್ವೈರಾಚಾರೀ ಜನರು ನೀರು ಬಿಡಬೇಕಾಗುತ್ತದೆ. ಬರಿಯ ವಿಷಯಸುಖ ಇದು ತೀರ ಪಶುವೃತ್ತಿಗಿಂತಲೂ ಕೀಳುತರದ್ದಾಗಿರುತ್ತದೆ. ಇನ್ನು ಯಾರು ಜನಲಜ್ಜೆ ಮನಲಜ್ಜೆಗಳನ್ನು ತೊರೆದಿರುವರೋ ಅಂಥ ಹಾದರದ ತರುಣಿಯರ ಅವಸ್ಥೆಯಾದರೂ ಮುಂದೇನಾಗುವುದು? ಯೌವನವೂ ಗೆಳೆಯರ ಗುಂಪೂ ಇವುಗಳು ಬಹುತರವಾಗಿ ಒಮ್ಮೆಲೆ ಇವರನ್ನು ತೊರೆದುಬಿಡಹತ್ತುತ್ತವೆ. 'ನನ್ನಷ್ಟಕ್ಕೆ ನಾನು ನೋಡಿಕೊಳ್ಳುವೆನು.' ಎಂದು ಅವಳು ಧಿಟ್ಟತನದಿಂದ ನುಡಿದಾಳು; ಮತ್ತು ಅವಳ ಪ್ರಿಯಕರನು ಆ ಗಡಚಾದ ಪ್ರಯೋಗವನ್ನು ಮಾಡಿಕೊಳ್ಳುವ ಸಲುವಾಗಿಯೇ ಅವಳನ್ನು ಬಿಟ್ಟುಬಿಡುವ ಪ್ರಸಂಗ ಒದಗೀತು. ಹೀಗೆ ನಿರ್ಲಜ್ಜ ಕುಮಾರಿಕೆಯು ಒಮ್ಮೆಲೆ ಲೋಕದವರಿಂದ ಭಿನ್ನಳಾಗುತ್ತಾಳೆ.

ಅದರಿಂದ ಸಮಾಜದ ಪ್ರತಿಷ್ಠೆಯೇ ಅಲ್ಲ, ರಕ್ಷಣವೂ ಕೂಡ ಆಕೆಗೆ ದೇರಕದಾಗುತ್ತದೆ. ಬಂಡುಗಾರಿಕೆಯಿಂದ ಅವಳು ಎಗ್ಗಿಲ್ಲದಂತಾದರೂ, ಬಂಡುಗಾರಿಕೆಯ ಕಳ್ಳತನ ಹಾಗು ಒಂಟಿಗತನ ಇವುಗಳ ಕ್ಲೇಶಗಳನ್ನು ಅವಳು ಭೋಗಿಸಲೇ ಬೇಕಾಗುತ್ತದೆ. ಯಾವಳೊಬ್ಬಳ ಬಗ್ಗೆ ಸ್ವೈರಾಚಾರದ ಸಟೆ- ದಿಟವಾದ ಬೊಬ್ಬಾಟವಾಯಿತೆಂದರೆ ಅವಳು ಆಜನ್ಮಪರ್ಯಂತ ಅವಿವಾಹಿತವಾಗಿಯೇ ಉಳಿಯಬೇಕಾಗುವದು. ಮುಂಚಿನ ಪ್ರಿಯಕರನು ಬಿಟ್ಟುಬಿಟ್ಟಿದ್ದರಿಂದಲೋ ಇಲ್ಲವೆ ಲಗ್ನದ ಹೊರತು ವಿಷಯಸುಖವನ್ನನುಭೋಗಿಸಲಾಗುವದೆಂದೋ ಇಂಥ ಸ್ವೈರಾಚಾರೀ ಸ್ತ್ರೀಯರು ಹೆಚ್ಚಾಗಿ ಅವಿವಾಹಿತರೇ ಉಳಿಯುತ್ತಾರೆ. ಇಂಥ ಈ ಸ್ವೈರಿಣಿಯರು ಇಡೀ

ಲಗ್ನಸಂಸ್ಥೆಯನ್ನು ದುರ್ದೆಶೆಗೊಳಿಸುತ್ತಾರೆ. ಪಾಶ್ಚಾತ್ಯ ಸುಖೀ ಸುಮಾಸಿನಿಯರ ಸಂಸಾರ ಸುಖದ ಮೇಲೆ ದೃಷ್ಟಿಕೆಡಹುತ್ತ ಸಂಚರಿಸುತ್ತಿರುವ ಈ ಸ್ವೈರಿಣಿಯರು ರಣಹದ್ದಿನಂತೆ ನುಗ್ಗಿ, ಅವರ ಗಂಡಂದಿರನ್ನು ಓಡಿಸಿಕೊಂಡೊಯ್ಯುತ್ತಾರೆ; ಹಾಗು ಖುದ್ದ ಸ್ವೈರಿಣಿಯ ಒಂಟಿಗ ಆಯುಷ್ಯವಾದರೂ ನಿರಾಶೆ, ದುಃಖ, ನಿರಾಧಾರ, ತಿರಸ್ಕಾರ ಇವುಗಳಿಂದ ದಯನೀಯಜನಕವಾಗಿಯೇ ತೋರುತ್ತದೆ!

ಆ ಸ್ವೈರಾಚಾರದ ಪರಿಣಾಮವು ಶರೀರದ ಮೇಲೆ ಅನಿಷ್ಟಕಾರಕವಾಗಿಯೇ ಆಗುತ್ತಿರುತ್ತದೆ. ಎಲ್ಲ ವ್ಯವಹಾರಗಳನ್ನು ಕಳವಿನಿಂದಲೇ ಮಾಡಬೇಕಾದುದರಿಂದ ನಿರ್ಧಾಸ್ತ ಏಕಾಂತದ ಹಾಗು ಮನಸೋಕ್ತ ವಿಷಯ ಆರಾಮು ಇವುಗಳ ಛಾಯೆಯು ಅವರಿಗೆಂದೂ ಲಭಿಸುವದಿಲ್ಲ. ಪ್ರಣಯಿ ಜನರು ಒಟ್ಟಿಗೂಡಿದ್ದರೂ ಅವರು ಒಟ್ಟಾಗಿರಲು ಶಕ್ತರಾಗುವದಿಲ್ಲ. ಮಟಮಟ ಮಧ್ಯಾಹ್ನ, ಕಪ್ಪಿಟ್ಟ ಮುಚ್ಚಂಜೆ ಹೊಟೆಲ್ಲು, ಮೊಟರ, ಉಪವನ, ಅಟ್ಟದ ಪಾವಟಿಗೆಗಳ ಮೂಲೆಗಳು, ಕತ್ತಲುಗವಿಯುವ ಚಪ್ಪರಗಳ ಸಂದುಗಳು ಇಂಥ ಸ್ಥಳಗಳಲ್ಲಿ ಅವರ ಭೆಟ್ಟಿ ಕೊಡುವಿಕೆಗೆದೆಷ್ಟು ಅವಕಾಶ ದೊರೆತೀತು? ಮತ್ತು ಅವರ ಹಲವು ಹಸಿವೆಗಳ, ಆಕಾಂಕ್ಷೆಗಳ ತೃಪ್ತಿಯು ಅದೆಂತಾದೀತು? ಯಾರಾದರೂ ನೋಡಿದರೋ ಹೇಗೆ, ಯಾರಾದರೂ ಕೇಳಿದರೋ ಹೇಗೆ, ಯಾರಾದರೂ ಪಾಳತಿಯ ಮೇಲಿರುವರೋ ಹೇಗೆ ಮುಂತಾದ ಅಂಜಿಕೆಯಿಂದ ಧಡಧಡಲ್ಲೆಂದು ಹಾರುತ್ತಿರುವ ಎದೆಗಾರರಿಂದ ವಿಷಯಸುಖವನ್ನಾದರೂ ಸಂಪೂರ್ಣವಾಗಿ ಅದೆಂತು ಸೇವಿಸಲಾದೀತು? ಅವರುಗಳಿಗೆ ವಿಷಯತೃಪ್ತಿಯು ಸಮಾಧಾನವಾದರೂ ಹೇಗೆ ಲಭಿಸೀತು? ವಿಷಯವಾಸನೆಯು ಖಳಖಳವೆಂದು ಹೆಚ್ಚುತ್ತಿರುವಾಗಲೇ ಅದಕ್ಕೆ ಭೀತಿಯ ಆತಂಕವು ಉಂಟಾಗುವುದು! ವಿಷಯಸುಖ ಸೇವನಕ್ಕೆ ಸ್ನಾಯುಗಳ ಎಷ್ಟೋ ಕ್ರಿಯೆ-ಪ್ರತಿಕ್ರಿಯೆಗಳ ಅವಶ್ಯಕತೆಯಿರುತ್ತದೆ. ಭೀತಿ, ಬೆದರಿಕೆಗಳು ಮನಸ್ಸಿನಲ್ಲುದ್ಭವಿಸುತ್ತಲೆ ಆ ಸ್ನಾಯುಗಳ ಕ್ರಿಯೆ-ಪ್ರತಿಕ್ರಿಯೆಗಳು ಸಂಪುಷ್ಟಗೊಂಡು, ಆ ಸುಖಕ್ಕೇ ಮುಗ್ಗಬೇಕಾಗುತ್ತದೆ! ಆ ಕ್ರಿಯೆ-ಪ್ರತಿಕ್ರಿಯೆಗಳ ಆತಂಕವು ಶಾರೀರಿಕ ಶಾಸ್ತ್ರದೃಷ್ಟಿಯಿಂದ ಅತ್ಯಂತ ವಿಘಾತಕವಾಗಿದೆ. ಸ್ವೈರಾಚಾರ ಸಂಬಂಧದಲ್ಲಿ ಸುಖಕ್ಕಿಂತ ನಿರಾಶೆ, ತೃಪ್ತಿಗಿಂತ ಅಸಂತೋಷ ಇವುಗಳೇ ನಿಷ್ಪನ್ನವಾಗುವವು; ಹಾಗು ಇಡೀ ವಿಷಯಸುಖದ ಬಗ್ಗೆ ವಿಕೃತ ಕಲ್ಪನೆ ನಿರ್ಮಾಣವಾಗಹತ್ತುತ್ತದೆ. ಆ ಪ್ರಣಯಿ ಯುಗ್ಮವು

ಲಗ್ನದ ನಿಮಿತ್ತದಿಂದ ಜೊತೆಗೂಡಿದರೆ ಪಾರಾದೀತೆನ್ನಬೇಕು! ಮತ್ತು ಲಗ್ನಕ್ಕೆ ಮೊದಲು ತೀರ ಒಂಟಿಗರಾಗಿದ್ದು ಸ್ವೈರಾಚಾರದ ರಿಯಾಯತಿಯನ್ನು ಮಿತಿಯಿಲ್ಲದೆ ಉಪಭೋಗಿಸುವ ಜೊತೆಗಾರರಿಗೆ ಲಗ್ನದ ನಂತರ ಒಮ್ಮೆಲೆ ನಿರಾಶೆಯೇ ಅನಿಸಹತ್ತುತ್ತವೆ ಲಗ್ನದ ಹೊಣೆಗಾರಿಕೆ, ಒಬ್ಬರಿಗೊಬ್ಬರು ಹಾಗು ಪರಿಸ್ಥಿತಿಯೊಡನೆ ಕೂಡಿ ನಡೆಕೊಳ್ಳುವ ಅವಶ್ಯಕತೆ ಮುಂತಾದ ತೊಂದರೆಯು ಘಟನೆಗಳೊಡನೆ ಉಭಯತರೂ ಕೂಡಿ ಕಾದುವದಿರುತ್ತದೆ. ಇಂಥ ಕಾಲಕ್ಕೆ ಅನನುಭೂತ ವಿಷಯಸುಖದ ರುಚಿಯಿಂದಲೇ ಏಕಜೀವವಾಗಿದ್ದ ನವಪರಿಣಿತ ದಂಪತಿಗಳು ಧೈರ್ಯದಿಂದ ಜೀವನಕಲಹಕ್ಕೆ ಎದುರಾಗಲು ಶಕ್ತರಾಗುತ್ತಾರೆ. ಸ್ವೈರಾಚಾರಿಗಳಾದಸ್ತ್ರೀಪುರುಷರಿಗೆ ವಿಷಯಸುಖದ ತೃಪ್ತಿಯ ಪ್ರಕಾರಗಳ ಹೊಸ ಶೋಧಗಳಾವವೂ ಬಾಕಿ ಉಳಿದಿರದ್ದರಿಂದ ಪರಿಸ್ಥಿತಿಯೊಡನೆ ಕಾದುವ ತೊಂದರೆಯಷ್ಟೇ ಅವರ ಪಾಲಿಗೆ ಕಾಯಮುವಿರುತ್ತದಾದ್ದರಿಂದ ಸ್ವೈರಾಚಾರವು ಲಗ್ನಕ್ಕೆ ಅಡ್ಡ ಬರುತ್ತದೆ; ಇಷ್ಟೇ ಅಲ್ಲ, ಲಗ್ನದ ನಂತರವೂ ಅದು ಇಂಥ ಜನರ ಪಾಲಿಗೆ ನಿರಾಶೆಯ ಎಡೆಯನ್ನೇ ನೀಡುತ್ತದೆ!

ಇಂಥ ಸ್ವೈರಾಚಾರದ ಸಂಬಂಧಗಳು ಸ್ವಲ್ಪ ಅವಧಿಯ ವರೆಗೆ ಮಾತ್ರ ಉಳಿಯತಕ್ಕಂಥವುಗಳಿರುತ್ತವೆ. ತತ್ಕಾಲೀನ ಸುಖಕ್ಕೆ ಇಲ್ಲವೆ ಕುತೂಹಲ ವೃತ್ತಿಗೆ ಹಪಾಪಿಸಿದ ಯುವಕ ಜನರು ಸ್ವೈರಾಚಾರವೆಂದರೆ ಒಮ್ಮೊಮ್ಮೆ ಮಾಡಿನೋಡತಕ್ಕಂಥ 'ಸಿಹಿ ಎದೆಗಾರಿಕೆ' ಎಂದು ತಿಳಿಯುತ್ತಾರೆ; ಆದರೆ ನಿಜ ಸಂಗತಿಯು ಹಾಗಿರುವದೋ? ಸರ್ವಸಾಧಾರಣ ಪ್ರವೃತ್ತಿಯ ಯುವತಿಯರ ದೃಷ್ಟಿಯಿಂದ ಇಂಥ ಈ ಎದೆಗಾರಿಕೆಯ ಪ್ರಯತ್ನವು ನಿರುಪದ್ರವದ್ದೂ ಕ್ಷಣಿಕವೂ ಆದೀತೋ? ಇಂಥ ಈ ಕ್ಷಣಿಕ ಹಾಗು ಅಷ್ಟರಮಟ್ಟಿಗೆ ಎಂದು ತಿಳಿಯುವ ಪ್ರಯೋಗದಿಂದ ಅವಳಲ್ಲಿ ಗಂಡನ ಸಂಬಂಧದಲ್ಲಿ ಅನಿಸುವ ಎಲ್ಲ ಸಂಸಾರೀ ಅಪೇಕ್ಷೆಗಳು ಒಮ್ಮೆಲೆ ಜಾಗೃತವಾಗುತ್ತವೆ; ಮತ್ತು ಆ ಗೆಳೆಯನಲ್ಲಿಯೇ ಅವು ಕಾಯಮುವಾಗಿ ಸ್ಥಿರಪ್ರಾಯವಾಗುತ್ತವೆ ವೈಷಯಿಕ ಸುಖಸಾಧನ ಮತ್ತು ಆಧಾರದ ಮಾನಸಿಕ ಸಮಾಧಾನ ಈ ಸಂಗತಿಗಳು ಸ್ತ್ರೀಯರ ಸ್ವಭಾವರಚನೆಯಲ್ಲಿ ಅಭಿನ್ನತೆಯಿಂದ ಒಮ್ಮೆಲೆ ಜಾಗೃತವಾಗುತ್ತಿರುತ್ತವೆ; ಹಾಗು ಮೊದಲಿನ ಗೆಳೆಯನ ಮೇಲೆಯೇ ಅವಳು ವಿಕಾರದ ಹಾಗು ವಿಚಾರದ ಬಲೆಯನ್ನು ಲಗುಬಗನೆ ಚೆಲ್ಲುತ್ತಿರುತ್ತಾಳೆ. ಆ ಬಲೆಯಿಂದ ಅವನನ್ನು ಬಿಗಿಯುವ ಪ್ರಯತ್ನದಲ್ಲಿ ಅವಳೇ ಆತನ ಬಲೆಯಲ್ಲಿ

ಸಂಪೂರ್ಣವಾಗಿ ಸಿಕ್ಕು ಬಿಗಿಯಲ್ಪಡುತ್ತಾಳೆ! ಅವನು ಆ ಧೈರ್ಯದ ಪ್ರಯೋಗವನ್ನು ಅಷ್ಟರವಟ್ಟಿಗೇ ಎಂದು ತಿಳಿದು ಬೇರೆಯವಳ ಮಬ್ಬಿಗೆ ಬಿದ್ದರೆ ಆಗ ಆಕೆಯ ಅವಸ್ಥೆಯು ಏನಾಗುವದು? ಮನೆಕಟ್ಟುವ ಉಪ್ಪಾರರ ಮೇಲೆಯೇ ಅವರು ಕಟ್ಟುತ್ತಿರುವ ಮನೆಯು ಕತ್ತರಿಸಿಬಿದ್ದು ಅವರ ಕೊಲೆ ಯಾಗುವಂತೆ ಅವಳ ಆ ಹರಿದ ಬಲೆಯು ಅವಳ ಕೈಕಾಲುಗಳಿಗೇ ತೊಡಕಿ ನಿರಾಶೆ, ಮತ್ಸರ, ಪಶ್ಚಾತ್ತಾಪ ಇವುಗಳಿಂದ ಕುದಿಯುತ್ತಿರುವ ಬಾಣಲೆಯಲ್ಲಿ ಅವಳನ್ನು ಜೀವಂತ ಕರಿದು ಬಿಡುತ್ತನೆ. ಪ್ರಥಮ ಸಂಬಂಧದಲ್ಲಾದ ನಿರಾಶೆಯಿಂದ ಬಹುತರವಾಗಿ ಅವಳಲ್ಲಿ ನ್ಯೂನಗಂಡನಾದರೂ ಉಂಟಾಗು ತ್ತದೆ; ಇಲ್ಲದಿದ್ದರೆ ಮತ್ಸರದ ಇಲ್ಲವೆ ಪಶ್ಚಾತ್ತಾಪದ ದುಃಖವನ್ನು ಕಳೆದು ಕೊಳ್ಳಲಿಕ್ಕೆಂದು ಅವಳು ಬೀದಿಯ ಬಸವಿಯಾದರೂ ಆಗುತ್ತಾಳೆ.

ಸ್ವೈರಿಣಿಯ ಮನಸ್ಸು ಸ್ವಂತದ ಆಕರ್ಷಕ ಸೌಂದರ್ಯದ ಬಗ್ಗೆ ಎಡಬಿಡದೆ ಹೆಚ್ಚೆಚ್ಚು ಸಾಶಂಕವಾಗುತ್ತಿರುತ್ತದೆ; ಮತ್ತು ಸ್ವಂತದ ಆಕ ರ್ಷಕ ಗುಣಗಳ ಸಂಬಂಧದ ಖಾತ್ರಿಮಾಡಿಕೊಳ್ಳಲಿಕ್ಕೆಂದು ಅವಳು ಹಲವು ಮಂದಿ ಗಂಡಸರೊಡನೆ ಹಲವು ಬಗೆಯ ಅನುಭವ ಪಡೆಯಲು ಉದ್ಯುಕ್ತ ಳಾಗುತ್ತಾಳೆ ಈ ನ್ಯೂನ ಗಂಡವು ಸ್ವೈರಾಚಾರೀ ಗಂಡಸರ ಮನಸ್ಸಿನಲ್ಲೂ ಹುಟ್ಟಹತ್ತುತ್ತದೆ; ಹಾಗು ಕಡಿಮೆ ಎನಿಸುವ ತಮ್ಮ ಶಕ್ತಿಯ ಬಗ್ಗೆ ಖೊಟ್ಟಿ ಅಭಿಮಾನ ಧರಿಸಿ, ಅದರ ಖಾತ್ರಿಪಡೆಯುವ ಸಲುವಾಗಿ ಅವರೂ ತಮ್ಮ ಜೀವವನ್ನು ತಲ್ಲಣಗೊಳಿಸದಿರುವದಿಲ್ಲ. ಯಾವನಿಗೆ ಗೃಹಸ್ಥಾಶ್ರಮದ ಸುಖೀ ಜೀವನದ ನೆಳಲಲ್ಲಿ ಆಯುಃಕ್ರಮಣ ಮಾಡುವದಿದ್ದೀತೋ, ಅಂಥ ವನ ಮನಸ್ಸಿನಲ್ಲಿ ಈ ಮನೋವೃತ್ತಿಯು ಒಮ್ಮೆ ಪ್ರಾಶಿಸಿತೆಂದರೆ ಆತನು ತನ್ನ ಭಾವನಾಶೀಲ ನಡತೆಗೆ ಹೊರತಾಗುತ್ತಾನೆ. ಅವನು ಸ್ವಂತದ ಹೆಂಡತಿಗೂ ಸುಖವೀಯದಾಗುತ್ತಾನೆ. ಸ್ವೈರಾಚಾರೀ ಸ್ತ್ರೀ-ಪುರುಷರು ಒಂದೇ ಲಗ್ನ ಸಂಬಂಧಕ್ಕೆ ಅಂಟಿಕೊಂಡಿರುತ್ತಿರುವದಿಲ್ಲ ಮುಂಚಿನ ಸ್ವೈರಚಾರಿತ್ರ್ಯವು ಸ್ವಚ್ಛ ಹಾಗು ಹಿತಕರವಾದ ಸಂಸಾರಸುಖವನ್ನು ಅವರಿಗೆ ಲಭಿಸಗೊಡುವ ದಿಲ್ಲ. ತದ್ವಿರುದ್ಧವಾಗಿ ಅದು ಪ್ರತಿಕ್ಷಣದಲ್ಲೂ ಅಪನಂಬಿಗೆಯ ಪಿಶಾಚಿಗಳ ನ್ನುಂಟು ಮಾಡುತ್ತಿರುತ್ತದೆ. ಅದರಿಂದ ವಿಷಯಸುಖದೊಳಗಿನ ಸೊಗಸು ಹೊರಟು ಹೋಗುವದು; ಆದರೆ ಅತೃಪ್ತವಿಕಾರಗಳ ಪ್ರಖರವಾದ ಹಸಿವು ಮಾತ್ರ ಒಂದೇಸವನೆ ಹೆಚ್ಚುತ್ತ ಹೋಗುತ್ತದೆ.

ಲೋಕದೊಳಗಿನ ಬೆಲೆಯುಳ್ಳ ವಸ್ತುಗಳಲ್ಲಿ ಪ್ರೇಮವೂ ಒಂದಾಗಿದೆ; ಆದರೆ ಆ ಸ್ವೈರಾಚಾರವು ಎಂದೂ ಯಾರಿಗೂ ಆ ಮಹತ್ವವಾದ ಪ್ರೇಮವನ್ನು ಸಿಗಗೊಡುವುದಿಲ್ಲ. ಲೋಕದೊಳಗಿನ ನೀತಿಯು ಕಲ್ಪನೆಗಳು ಬದಲಾಗಿವೆಯೆಂದು ನಾವು ಬೇಕಾದರೆ ಅಂದುಕೊಳ್ಳಬಹುದು; ಆದರೆ ಮಾನವೀ ಮನಸ್ಸಿನ ಬಗೆಯು ಇನ್ನೂ ಒಂದೇತರವೇ ಆಗಿದೆ. ಅದರ ಕ್ರಿಯೆ-ಪ್ರತಿಕ್ರಿಯೆಗಳ ಮೂಲಕ ಉಂಟಾಗುವ ವಿಪರೀತ ಮನೋವೃತ್ತಿಗಳು ಹಾಗೆ ಹಾಗೆಯೇ ಕಾಯುವವಾಗಿರುತ್ತವೆ. ಸ್ವೈರಾಚಾರದಿಂದ ಭಾವನೆಗಳ ಪುಡಿಪುಡಿಯಾಗುತ್ತಿದ್ದರೆ ಭಾವನೆಗಳು ಸ್ವೈರಾಚಾರದ ಧಿಃಕಾರವನ್ನೇ ಮಾಡುತ್ತಿರುತ್ತವೆ.

ಸ್ವೈರಿಣಿಯು ಗಂಡನಿಗೆ ಮನಸ್ಸಿನೊಳಗೆ ಒಂದೇಸವನೆ ಅಂಜಿಕೆಯೆನಿಸುತ್ತಿರುತ್ತದೇನಂದರೆ, ಲಗ್ನದ ನಂತರವೂ ಈಕೆಯು ಯಾವ ಕಾಲಕ್ಕೆ ಕಣ್ಣು ತಪ್ಪಿಸಿ ಹಾರಿಗ್ಗಾಲಿನಿಂದ ಓಡಿ ಹೋದಾಳೆಂಬದರ ನಿಯಮವಿಲ್ಲೆಂದು. ಯಾವಳು ಲೋಕನಿಂದೆಗೆ ತನ್ನ ಕೌಮಾರ್ಯಾವಸ್ಥೆಯಲ್ಲಿಯೇ ಬಿಕ್ಕೆ ಹಾಕಲಿಲ್ಲವೋ, ಅವಳು ನಿರ್ಧಾಸ್ತವಾದ ಸುವಾಸಿನಿಯ ಅವಸ್ಥೆಯ ಸೈರಲಾಭ ಪಡೆಯಲು ಅದೆಷ್ಟು ಅಂಜುವಳು? ಬೇರೆ ಬೇರೆ ಪುರುಷರ ಜೊತೆಗಿನ ಕ್ಷಣಿಕ ಸುಖಾನುಭವದ ಚಟ ಹಿಡಿದ ಸ್ವೈರಿಣಿಗೆ ಒಬ್ಬನೇ ಒಬ್ಬನಾದ ಗಂಡನೊಡನೆ ಸಂಸಾರ ಮಾಡುವುದು ಅಷ್ಟೊಂದು ಸೊಗಸೆನಿಸದಂತಾಗುತ್ತದೆ; ಹಾಗು ಅದೇ ರೀತಿಯು ಸ್ವೈರಾಚಾರೀ ಗಂಡಸಿನದು. ಆತನ ಮನಸ್ಸಿನಲ್ಲಿ ವ್ಯಕ್ತಿಯ ತುಲನೆಗೆ ಪ್ರಾರಂಭವಾಗುತ್ತದೆ; ಮತ್ತು ಆ ತುಲನೆಯು ಪ್ರಾರಂಭವಾಯಿತೆಂದರೆ, ಮಾಲಿನ ಬೆಲೆ ಹಾಗು ಅದನ್ನು ಕೈವಶ ಮಾಡಿಕೊಂಡ ಸಂಬಂಧದ ಸಮಾಧಾನ ಇವೆಲ್ಲ ಲೋಪವಾದವೆಂದೇ ತಿಳಿಯಬೇಕು.

ಖುದ್ದ ಗಂಡಸರ ಮನೋವೃತ್ತಿಯನ್ನು ನೋಡಿದರೆ ಅವರಿಗೆ ಕುಮಾರಿಕೆಯು ಮತ್ತು ಅದರಲ್ಲೂ ಬಳಿಸಾಡದವಳು ಇಂಥವಳೇ ಪತ್ನಿಯೆಂದು ಸಮ್ಮತವಾಗುವಳು. ಮನಸ್ಸಿನ ಔದಾರ್ಯವು ಹೆಚ್ಚಿದೆ, ಶರೀರ ಸಂಬಂಧದ ಕಲೆಯು ಸಂಪೂರ್ಣ ಇಲ್ಲದಂತಾಗಿದೆ, ನೀತಿಯ ಕಲ್ಪನೆಗಳೂ ಕೂಡ ಸಡಿಲಾಗಿವೆ ಮುಂತಾದ ಬೇಕಾದಷ್ಟು ಬಾಷ್ಕಳ ಹರಟೆಗಳನ್ನು ತರುಣ ಪೀಳಿಗೆಯು ಹೊಡೆಯುತ್ತಿರಲಿ; ಆದರೆ ಪ್ರತಿಯೊಬ್ಬ ತರುಣನ ಮಹತ್ವಾಕಾಂಕ್ಷೆಯು ಸದ್ವರ್ತನದ ಕುಮಾರಿಕೆಯೇ ತನ್ನ ಆದರ್ಶ ಪತ್ನಿಯಾಗಬೇಕೆಂದು ಇರುತ್ತದೆ.

ಯಾವಳಿಗೆ ಮೊದಲಿನ ಗೆಳೆಯರಿರುವರೋ ಅಥವಾ ಯಾವಳು ವಿಷಯ ಸುಖದ ಪ್ರಯೋಗಗಳನ್ನು ಅಲ್ಪ-ಸ್ವಲ್ಪ ಮಾಡಿರುತ್ತಾಳೋ ಅಂಥ ಕುಮಾರಿ ಕೆಯರೊಡನೆ ಲಗ್ನವಾಗಲಿಕ್ಕೆ ಯಾರೂ ಸಿದ್ಧರಿರುವದಿಲ್ಲ. ಈ ಮುಖ್ಯ ಸಂಗತಿಯನ್ನು ಎಲ್ಲ ಕುಮಾರಿಕೆಯರೂ ಚೆನ್ನಾಗಿ ಲಕ್ಷ್ಯದಲ್ಲಿಡತಕ್ಕದ್ದು. ಸ್ವೈರಾಚಾರದ ಕ್ಷಣಿಕ ಥುಮ್ಮಸದ ಪ್ರಯತ್ನವು ತಮ್ಮ ಸಂಸಾರ ಸುಖವನ್ನು ಕಾಯಮವಾಗಿ ಮಣ್ಣುಗೂಡಿಸೀತೆಂಬದನ್ನು ಅವರು ಮರೆಯಲಾಗದು.

ಎಲ್ಲ ಸ್ವೈರಾಚಾರಗಳು ಸಾರ್ವಜನಿಕ ನೀತಿಮತ್ತೆ ಇಲ್ಲವೆ ಕಾಯಿ-ದೆಶೀರ ಸಾಮಾಜಿಕ ಘಟನೆಗಳಾಗುವವರೆಗೆ ಸ್ತ್ರೀ-ಪುರುಷರಲ್ಲಿ ಅನನ್ಯ ವಿಶ್ವಾಸ ಹಾಗು ಪ್ರೇಮ ಇವುಗಳುಂಟಾಗುವ ಸಲುವಾಗಿ ಸಾಮಾಜಿಕ ಬಂಧನಗಳು ಹೆಚ್ಚು-ಕಡಿಮೆ ಮಾನದಿಂದಿರುವದು ಅವಶ್ಯವೇ ಆಗಿದೆ. ಪರಸ್ಪರರು ಬೇಕಾದಷ್ಟು ಸಾರೆ ಮತ್ತು ಬೇಕಾದವರನ್ನು ಸಾಕ್ಷಿಯಿಟ್ಟು ಮಾಡಿದ ಪ್ರೇಮದ ಆಣೆ-ಚೂರಿಗಳು ವೈಷಯಿಕ ತೃಪ್ತಿಯ ನಂತರ ಶುಷ್ಕಗಳೆಂದು ತೋರಹತ್ತುತ್ತವೆ; ಒಪ್ಪತಕ್ಕವುಗಳಲ್ಲವೆಂದೆನಿಸುತ್ತವೆ; ಮನ್ನಿಸಬಾರದೆಂತಲೂ ಅನಿಸುತ್ತವೆ ಸ್ತ್ರೀ-ಪುರುಷ ಸಂಬಂಧಕ್ಕೆ ಶಾಶ್ವತಿಯನ್ನೀಯುವ ಯಾವದೊಂದು ತತ್ತ್ವವು ಅವರ ಕಣ್ಣೆದುರಿಗೆ ಸಂತತವಾಗಿ ಮಿನುಗುತ್ತಿದ್ದರೆ ಆಣೆ-ಚೂರಿಗಳ ಕಾಣಿಕೆಗಳನ್ನರ್ಪಿಸುವ ಆವಶ್ಯಕತೆಯಿರುವದಿಲ್ಲ. ವಿಶ್ವಾಸಘಾತವಾಗುವುದೂ ಶಕ್ಯವಿರುವದಿಲ್ಲ. ಹಿಂದಿನ ಕಾಲದಲ್ಲಿ ಮೋಕ್ಷದ ಆಶೆ, ಧರ್ಮದ ಆಜ್ಞೆ, ರೂಢಿಯ ಪ್ರತಿಷ್ಠೆ ಇವುಗಳು ತಮ್ಮ ತಮ್ಮ ಪರಿಯಿಂದ ಸ್ತ್ರೀಪುರುಷರನ್ನೆಲ್ಲ ವೈವಾಹಿಕ ಜೀವನದ ಕೊಂಡವಾಡೆಯಲ್ಲಿ ನಿರಂತರ ಕಟ್ಟಿಡುತ್ತಿದ್ದವು; ಹಾಗು ಅದರಲ್ಲೇ ರೂಢಿಯಿಂದ ಅವರಿಗೆ ಸುಖವೆನಿಸುತ್ತಿತ್ತು ಅದೆಲ್ಲ ರೀತಿಯನ್ನು ಹುಚ್ಚುಚ್ಚಾರ-ಬುದ್ಧಿಹೀನ-ದ್ದೆಂದು ಬಿಸುಟಿ ಬಿಡಲಿಕ್ಕೆ ನಾವು ಸಿದ್ಧರಾದೆವು; ಆದರೂ ಏನಾದರೂ ನಿಶ್ಚಿತವಾದಂಥ ಕಾಯಮ ಋಣಾನುಬಂಧದಿಂದ ಸ್ತ್ರೀ-ಪುರುಷರು ಏಕತ್ರವಿರುವದು ಪರಸ್ಪರರ ಸುಖದ ಹಾಗು ಸಂತತಿಯ ಸಂರಕ್ಷಣದ ದೃಷ್ಟಿಯಿಂದ ಅವಶ್ಯವಾಗಿದೆ. ಅದು ಕ್ವಚಿತ್ತಾಗಿ ಕಾಣುವ ಕರ್ತವ್ಯನಿಷ್ಠೆಯಿರಲಿ; ಇಲ್ಲವೆ ಸ್ವಂತದ ಸುಖದ ಹಾಗು ಮಾನವ ವಂಶದ ಸುಷ್ಟತೆಯ ಆಸ್ಥೆಯಾಗಿರಲಿ.

ವೈಷಯಿಕ ಸಂಬಂಧಗಳು ಕೇವಲ ವೈಯಕ್ತಿಕ ಋಣಾನುಬಂಧಗಳಿರುವುದಿಲ್ಲ. ಇಡೀ ಸಮಾಜದ ಹಿತಾಹಿತಗಳು ಅವುಗಳಲ್ಲಿ ಒಟ್ಟುಗೂಡಿರುತ್ತವೆ.

ಸಾವಿರಾರು ವರ್ಷ ಅಖಂಡವಾಗಿ ಹಬ್ಬುತ್ತಿರುವ ಮಾನವ ವಂಶದ ತೇಜ ಮತ್ತು ಆರೋಗ್ಯಗಳಿಗೆ ಅವು ಉಗಮಸ್ಥಾನಗಳಾಗಿರುತ್ತವೆ. ಮಾನವನ ವಂಶದ ಬಗ್ಗೆ ಎಚ್ಚರಿಕೆ ಪಡದಿದ್ದರೂ ಸ್ವಂತದ ಬಗ್ಗೆ ಹಾಗು ಸ್ವಂತದ ಅಪತ್ಯಗಳ ಬಗ್ಗೆ ಏನಾದರೂ ಯೋಚನೆ ಮಾಡುವ ಅವಶ್ಯಕತೆಯಿರುವದಿಲ್ಲವೇ? ಮಾನವನ ವೈಷಯಿಕ ವ್ಯಾಪಾರಗಳು ಮನುಷ್ಯತ್ವದ ಗಂಟಲಿಗೇ ಗಾಣವಾಗ ಹತ್ತಿದರೆ, ಮಾನವನ ವಂಶದ ರೋಮರೋಮಗಳಲ್ಲಿ ಹೊಲಸು ರಕ್ತ ಮತ್ತು ಕೊಳೆತ ನೀತಿಮತ್ತೆ ಇಬ್ಬ ಒಳನುಗ್ಗಹತ್ತಿದರೆ, ಸ್ವಂತ ಆ ಮನುಷ್ಯರ ಬೌದ್ಧಿಕ ಮತ್ತು ಶಾರೀರಿಕ ಆರೋಗ್ಯದ ಹಾಗು ಸಮಾಧಾನದ ದಿವಾಳಿ ಹೊಡಿಸಹತ್ತಿರವೆ ಈ ವ್ಯಕ್ತಿಸ್ವಾತಂತ್ರ್ಯದ ಹುಮ್ಮಸದ ಕಾಲದಲ್ಲೂ ಅವರಿಗೆ ಒಂದಿಲ್ಲೊಂದಾದರೂ ನಿಯಮದ ಮುಗುದಾಣವನ್ನು ಹಾಕಬೇಕಾದೀತು ಸ್ವೈರಾಚಾರವು ಸುಷ್ಟವೋ-ದುಷ್ಟವೋ ಎಂಬದನ್ನು ಅದರಿಂದುಂಟಾಗುವ ಪರಿಣಾಮದಿಂದಲೇ ನಿಷ್ಕರ್ಷಿಸಬೇಕಾದೀತು ವ್ಯಕ್ತಿಯ ದೃಷ್ಟಿಯಿಂದ ಪರಿಶೀಲಿಸಿದರೆ, ಸ್ವೈರಾಚಾರವು ವ್ಯಕ್ತಿಯನ್ನು-ವಿಶೇಷವಾಗಿ ಹೆಣ್ಣುಜಾತಿಯನ್ನು-ಮಣ್ಣುಗೂಡಿಸುತ್ತದೆ. ಸಮಾಜದ ದೃಷ್ಟಿಯಿಂದ ನಿರೀಕ್ಷಿಸಿದರೆ ಸ್ವೈರಾಚಾರವು ಸಮಾಜವನ್ನು, ಅಂದರೆ ಪರ್ಯಾಯದಿಂದ ವ್ಯಕ್ತಿಯನ್ನು ಹಾಳುಮಾಡಿಬಿಡುತ್ತದೆ.

ಇದನ್ನೆಲ್ಲ ಚನ್ನಾಗಿ ಮನದಂದೇ ಆ ಮೇಲೆ ಸ್ವೈರಾಚಾರದ ಹಲಿಗೆ ಹೊಡೆಯಬೇಕು. ಇರುಳು ಕಂಡ ಬಾವಿಯಲ್ಲಿ ಹಗಲು ಹಾರಿಕೊಳ್ಳುವವರಿಗೆ ಪಶ್ಚಾತ್ತಾಪದ ದುಃಖವಾದರೂ ಆಗುವುದಿಲ್ಲ; ಆಗಲೂಬಾರದು. ಆದರೆ ಅಂಥ ಎದೆಗಾರರು ಅತ್ಯಲ್ಪರು! ಉರಿಯಲ್ಲಿ ಹಾರಿಕೊಳ್ಳುವ ಬಹುತರ ಎಲ್ಲ ಪತಂಗಗಳು ದೀಪದ ತೇಜದಿಂದ ಕುರುಡಾಗಿರುತ್ತವೆ!! ಕಾಮುಕತೆಯ ತತ್ಪರತೆಯಿಂದ ಅಂಧವಾಗಿರುತ್ತವೆ; ಕಾಮುಕತೆಯ ತತ್ಪರತೆಯಿಂದ ಅಂಧವಾದ ಆ ಪತಂಗಗಳು ಆತ್ಮನಾಶಮಾಡಿಕೊಳ್ಳುತ್ತಿರುತ್ತವೆ!!!



ಸಂಧಿಯು ಒಮ್ಮೆ ತಪ್ಪಿತೆಂದರೆ ಅದು ಕಾಯಮವಾಗಿಯೇ ತಪ್ಪುತ್ತದೆ. ಅನುಕೂಲ ಸಂಧಿಯೆಂಬದು ಹಲವು ಅನುಕೂಲ ಘಟನೆಗಳ ಸಮ್ಮಿಶ್ರಣದಿಂದಾದ ಒಂದು ಯೋಜನೆಯಾಗಿರುತ್ತದೆ. ಆ ಎಲ್ಲ ಘಟನೆ ಮತ್ತೆ ಅದೇ ಸ್ಥಳದಲ್ಲಿ ಹಾಗು ಆ ಆ ಸ್ವರೂಪದಲ್ಲೇ ಒಟ್ಟುಗೂಡುವದು ಕಠಿಣವೇ ಆಗಿರುತ್ತದೆ. ಹೀರ ದೈವವಾದವನ್ನು ಕುರಿತು ಯೋಚಿಸಿದರೂ ಯಶಸ್ವೀ ಮನುಷ್ಯನಿಗೂ ದೈವವೇನೂ ಕಡಿಮೆ ಕಾಡಿಸಿದಂತೆ ಅನಿಸುವುದಿಲ್ಲ. ದತ್ತಗೇಡಿಗಂತೂ ಆಶೆಯ ಮೃಗಜಲವು ಸಾಯುವವರೆಗೂ ಧಾವಿಸಹಚ್ಚುತ್ತದೆ ಆ ಸಂಧಿಯ ಲಾಭವನ್ನು ಆತನು ಪಡೆಯಲಿಲ್ಲೆಂದೇ ಅವನು ದತ್ತಗೇಡಿಯಾದನೋ ಅಥವಾ ಆತನು ದತ್ತಗೇಡಿಯೆಂದೇ ಅವನಿಗೆ ಆ ಸುಸಂಧಿಯ ಲಾಭಪಡಕೊಳ್ಳುವ ಬುದ್ಧಿಯಾಗಲಿಲ್ಲವೋ ಇದು ಯಾವನೊಬ್ಬ ಪ್ರಸಿದ್ಧ ದೈವವಾದಿಗೂ ಬಗೆಹರಿಯದ ಸಮಸ್ಯೆಯಾಗಿದೆ. ಪ್ರೌಢ ಕುಮಾರಿಕೆಯರ ವಿಶೇಷವಾಗಿ ಸುಶೀಲ, ಸುಶಿಕ್ಷಿತ ಅತಿ ಪ್ರೌಢ ಕುಮಾರಿಕೆಯರ-ಸಮಸ್ಯೆಯಾದರೂ ಅಂಥದೇ ಒಂದು ಸಾಮಾಜಿಕ ಕೂಟ ಪ್ರಶ್ನವಾಗಿ ಕುಳಿತಿದೆ. ಲಗ್ನಕ್ಕೆ ಪ್ರಾಪ್ತವಾದಂಥ ತಕ್ಕ ಸಂಧಿಯನ್ನು ತಾವಾಗಿ ಕಳೆದುದರಿಂದ ಅವರು ಅವಿವಾಹಿತರಾಗುಳಿದರೋ ಅಥವಾ ಅವರ ಚಿಕಿತ್ಸಕ ಮಹತ್ವಾಕಾಂಕ್ಷೆಗೆ ಯೋಗ್ಯ ಸಂಧಿಯೇ ಲಭಿಸಲಿಲ್ಲೆಂದು ಅವರು ಇಷ್ಟು ವಯಸ್ಸಾಗುವವರೆಗೆ ಅವಿವಾಹಿತರಾಗುಳಿದರೋ ಇದರ ನಿರ್ಣಯವನ್ನು ಆಯಾ ಕುಮಾರಿಕೆಯರೂ ಕೊಡಲಿಕ್ಕೆ ಶಕ್ತರಾಗಲಾರರು. ಲಗ್ನದ ಪ್ರಶ್ನೆಯು ಬಗೆಹರಿಯದಂಥದೆಂದು ಅವರೊಳಗಿನ ಎಷ್ಟೋ ಮಂದಿ ಅದನ್ನು ಕಾಯಮವಾಗಿಯೇ ಬಿಟ್ಟುಬಿಟ್ಟಿರುತ್ತಾರೆ; ಆದರೆ ಅವಿವಾಹಿತ ಕುಮಾರಿಕೆಯರ ಹೆಚ್ಚಿದ ಸಂಖ್ಯೆಯು ಸೂಚಿಸುತ್ತಿರುವ ಈ ಪ್ರಶ್ನೆಯನ್ನು ಸಮಾಜವು ಕಣ್ಮರೆ ಮಾಡಲಿಕ್ಕೆ ಬರುವುದಿಲ್ಲ. ಅವಿವಾಹಿತರಾಗಿರುವ ಜನರು ಅವರು ಗಂಡಸರಿರಲಿ-ಹೆಂಗಸರಿರಲಿ ಸಮಾಜದ ಸ್ಥೈರ್ಯದ ಹಾಗು ಸ್ವಾಸ್ಥ್ಯದ ದೃಷ್ಟಿಯಿಂದ ಅನಿಷ್ಟರೇ ಸರಿ. ಸಂಸಾರಸುಖದ ಆಸೆಯಿಲ್ಲ, ಹುಮ್ಮಸಿನಿಂದ ಆಯುಃಕ್ರಮಣ ಮಾಡುವ ಈರ್ಷೆಯಿಲ್ಲ, ಮುಪ್ಪಿನಲ್ಲಿ ಮಕ್ಕಳು-ಮರಿಗಳ ಆಧಾರ ಲಭಿಸುವ ಆಶೆಯಿಲ್ಲ; ಹಾಗು ತನ್ನ ತರುವಾಯ ತನ್ನ ಹೆಸರು, ಕೀರ್ತಿ ಮತ್ತು ಸಂಪತ್ತಿ ಇವುಗಳನ್ನು ಮುಂದೆ ಯಾರಾದರೂ ನಡೆಸುವರೆಂಬ ಸಂಭವನವಿಲ್ಲ ಈ ಬಗೆಯಾಗಿ ನಿರಾಶೆಯಿಂದ ನೈದು-ಬಿದ ಜೀವಗಳು

ಸಮಾಜದಲ್ಲಿ ಒಂದು ಬಗೆಯ ನಿರಾಶೆಯ ಹೊಲಸು ವಾತಾವರಣವನ್ನಾದರೂ ಉಂಟುಮಾಡುವರು, ಇಲ್ಲದಿದ್ದರೆ ದುರಾಚಾರದಿಂದ ಹೋಳಿಯಾಡಿ ಸಂಭಾವಿತ ಜೀವನಕ್ಕೆ ತಲೆ ಎತ್ತಿ ಅಡ್ಡಾಡಲು ಅಶಕ್ಯವನ್ನಾದರೂ ಮಾಡುವರು. ಇಷ್ಟು ದೂರದ ಅನಿಷ್ಟ ದೃಷ್ಟಿಯ ಪರಿಣಾಮಗಳನ್ನು ಲಕ್ಷ್ಯದಲ್ಲಿರಿಸಿದರೆ, ಅವಿವಾಹಿತರ ಸಮಸ್ಯೆ ಬಿಡಿಸಲಿಕ್ಕೆಂದು ಸಮಾಜವು ಇಷ್ಟು ಕಸವಿಸಿಯೇಕೆ ಪಡುತ್ತದೆಂಬದರ ಇಂಗಿತವು ಸಹಜವಾಗಿ ತಿಳಿದೀತು.

ಕಾಲವು ಬಾಲವಿವಾಹದ ರೂಢಿಯ ಬಗ್ಗೆ ಸಂಪಾದಿಸಿದ ವಿಜಯದಿಂದಲೇ ಹುಡುಗಿಯರ ಲಗ್ನದ ವಯಸ್ಸು ಒಂದೇಸವನೆ ಹೆಚ್ಚುತ್ತಿದೆ; ಆದರೂ ರೂಢಿಯು ಪ್ರೌಢಕುಮಾರಿಕೆಯರನ್ನು ಕಾಯುವ ಮುಲ್ಲಿಯನ್ನಾಗಿ ಮಾಡಿ, ತನ್ನ ಪತಿಯಿಂದ ಸುಧಾರಣೆಯ ಮೇಲಿನ ಸೇಡು ಹಾಯಿಸಿಕೊಳ್ಳುವ ಅಭ್ಯಾಸವನ್ನು ನಡೆಸಿದೆಯೋ ಹೇಗೆಂಬದು ತಿಳಿಯದಾಗಿದೆ! ಇನ್ನು ಹೆಚ್ಚುತ್ತಿರುವ ಲಗ್ನದ ವಯಸ್ಸು ಇದಾದರೂ ಹೇತುಪುರಸ್ಸರವಾಗಿ ಹೆಚ್ಚಿಸಿದುದೇನು? ವಯಸ್ಸಿನ ಇಂಥ ವರ್ಷಕ್ಕೆ ಹುಡುಗಿಯ ಲಗ್ನವನ್ನು ಮಾಡುವದು, ಎಂಬ ಮರ್ಯಾದೆಯನ್ನು ಯಾವ ಪಾಲಕನಿಗೆ ತನ್ನ ಮನಸ್ಸಿನಲ್ಲಿ ನಿರ್ಧರಿಸಿ ಅದನ್ನು ಅಮಲಿನಲ್ಲಿ ತರಲಿಕ್ಕೆ ಬರುತ್ತದೆ? ಹದಿನಾರು ವರ್ಷದೊಳಗಿನ ಹುಡುಗಿಯನ್ನು ಯಾರೂ ಲಗ್ನಮಾಡಿಕೊಳ್ಳುವದಿಲ್ಲವೆಂದು ಹುಡುಗಿಯ ಪಾಲಕರಿಗೆ ಹದಿನಾರರೊಳಗೆ ಆಕೆಯ ಲಗ್ನಮಾಡುವದು ಅಶಕ್ಯವೇ ಆಗಿರುತ್ತದೆ; ಆದರೆ ಹದಿನಾರರ ನಂತರ ಅವಿವಾಹಿತ ಹುಡುಗಿಗೆ ಲಗ್ನದ ಯಾವ ವರ್ಷಗಳು ಹೆಚ್ಚುವವೋ ಅವು ಹಲವು ಕಾರಣಗಳಿಂದ ಹೆಚ್ಚುತ್ತಿರುತ್ತವೆ. ಹುಡುಗಿಯ ಓದುವ ಲಾಲಸೆ ಹಾಗು ಯೋಗ್ಯತೆ ಮತ್ತು ಪಾಲಕರ ಹುಮ್ಮಸ ಹಾಗು ದುಡ್ಡು ಇವುಗಳ ಹೆಚ್ಚು-ಕಡಿಮೆ ಪ್ರಮಾಣದಿಂದ, ಅವಳ ಶಿಕ್ಷಣಕ್ರಮವು ಮೊದಲು ಮುಗಿಯಬೇಕೋ ಅಥವಾ ಅವಳ ಲಗ್ನವು ಮೊದಲಾಗಬೇಕೋ ಎಂಬದನ್ನು ಅವಲಂಬಿಸಿರುತ್ತವೆ. ಅವಳು ಶಿಕ್ಷಣಕ್ರಮದೊಳಗಿನ ಒಂದೊಂದೇ ಪರೀಕ್ಷೆಯನ್ನು ಹೇಗೆ ಪಾಸಾಗುತ್ತ ಹೋಗುವಳೋ ಹಾಗೆ ಅವಳ ಹಾಗು ಅವಳ ಪಾಲಕರ ಇಚ್ಛೆಯು ಅವಳ ಶಿಕ್ಷಣಕ್ರಮವು ಮುಗಿದ ಮೇಲೆಯೇ ಲಗ್ನಮಾಡುವದು ಪ್ರಬಲವಾಗಹತ್ತುತ್ತದೆ.

ಅವಳ ಆ ಶಿಕ್ಷಣಕ್ರಮವು ಮುಗಿಯಿತೆಂದರೆ ಅವಳು ಲಗ್ನಕ್ಕೆ ಹೆಚ್ಚು ಯೋಗ್ಯಳಾದಾಳು, ಅವಳು ವರನಿಗೆ ಹೆಚ್ಚು ಮನಸ್ಸಿಗೆ ಬಂದಾಳು ಇಲ್ಲವೆ

ಸಂಸಾರಶಾಸ್ತ್ರದಲ್ಲಿ ಆವಳು ಹೆಚ್ಚು ಕುಶಲಳಾದಾಳು ಇಂಥದೇನೂ ಸಂಬಂಧ ವಿರುವದಿಲ್ಲ. ಲಗ್ನಮಾಡದಲೆ ಅವಳು ಆಜನ್ಮ ಅವಿವಾಹಿತಳಾಗಿರಬೇಕೆಂಬ ಇಚ್ಛೆಯು ಯಾವ ತಾಯಿ-ತಂದೆಗಳಿಗೂ ಇರುವದಿಲ್ಲ ಶಿಕ್ಷಣ ಮುಗಿದ ಬಳಿಕ ಅವಳು ಲಗ್ನವಾಗಬೇಕು; ಮತ್ತು ದೊರೆತ ಶಿಕ್ಷಣದ ಬಲದಿಂದ ಹೆಚ್ಚು ಸುಖದಿಂದ ಸಂಸಾರ ಮಾಡಬೇಕು ಎಂಬದನ್ನೇ ಶಿಕ್ಷಣ ಕೊಡಿಸುವ ಪಾಲ ಕರು ಆಕೆಯ ಬಗ್ಗೆ ಅಪೇಕ್ಷಿಸುತ್ತಿರುತ್ತಾರೆ. ಕುಮಾರಿಕೆಯು ಸ್ವಂತ ಬಯಕೆ ಯಾದರೂ ಹಾಗೆಯೇ ಇರುತ್ತದೆ. ಒಟ್ಟಿನಲ್ಲಿ ಹುಡುಗೆಯರಿಗೆ ಶಿಕ್ಷಣಕೊಡಿ ಸುವದಕ್ಕೂ ಹಾಗು ಲಗ್ನಕ್ಕೂ ಏನೂ ಸಂಬಂಧವಿರುವದಿಲ್ಲ ಏನಾದರೂ ಅಲ್ಪ ಸ್ವಲ್ಪ ಇದ್ದರೆ ಅದು ಅತ್ಯಂತ ಕ್ಷೀಣವಾದದ್ದು. ವಧುವನ್ನು ಆರಿಸುವ ಪರೀಕ್ಷೆ ಯಲ್ಲಿ ಶಿಕ್ಷಣವೆಂಬುದೊಂದು ಐಚ್ಛಿಕ ಮತ್ತು ಮಿಕ್ಕ ಗುಣಗಳಾವವಾದರೂ ಅಪೂರ್ಣವಿದ್ದರೆ ಅವುಗಳನ್ನು ಭರತಿ ಮಾಡುವ ಗುಣ ಎಂಬವು ಶಿಕ್ಷಣ ಪೂರ್ಣವಾದ ಮೇಲೆಯೇ ಲಗ್ನಮಾಡುವದೆಂಬ ಕಾರ್ಯಕ್ರಮವು ಜಾಣ ಹುಡುಗೆಯ ತಂದೆ ತಾಯಿಗಳಿಗೆ ಒಳ್ಳೇ ಮಬ್ಬು ಹಾಕಿಬಿಟ್ಟಿರುತ್ತದೆ. ಹುಡು ಗೆಯ ಜಾಣತನವು ಆರಿವಾಸಿ ಶಿಕ್ಷಣದಲ್ಲೇ ಬತ್ತಬೇಕು, ಅವಳ ವೃದ್ಧಿಂ ಗತ ವ್ಯಕ್ತಿಮತ್ವದ ಉಬ್ಬಿನ ಬೆಳವಣಿಗೆಯನ್ನು ಆಯತ ಕಾಲಕ್ಕೆ ಕಡಿಯ ಬೇಕು, ಅವಳ ಪ್ರೇಮಲ ಹಾಗು ಸೋಜ್ವಲ ಸಂಗಶಿಗೆ ಇಷ್ಟು ಬೇಗನೆ ಮುಗ್ಗಬೇಕು ಎಂಬದು ಹುಮ್ಮಸದ ತಂದೆ ತಾಯಿಗಳಿಗೆ ಹೇಗೆನಿಸೀತು? ಅವಳ ಶಿಕ್ಷಣಕ್ರಮವು ಪೂರ್ತಿಯಾಗುವಷ್ಟರಲ್ಲಿ ಅವಳ ವಯಸ್ಸಿನ ಮಾನ ದಿಂದ ಅವಳಿಗೆ ಯೋಗ್ಯರಾದಂಥ ತರುಣರ ಲಗ್ನಗಳು ಆ ಮೊದಲೇ ಆಗಿ ಬಿಟ್ಟಿರುತ್ತವೆ. ವಧು ಹಾಗು ವರ ಇವರಲ್ಲಿ ಎರಡರಿಂದ ಏಳು ವರ್ಷಗಳ ವರೆಗೆ ಅಂತರವಿರಬೇಕೆಂಬ ಕೋಷ್ಟಕವನ್ನು ಜ್ಞಾಪಿಸಿಕೊಂಡರೆ, ಅವರ ಶಿಕ್ಷಣ ಮುಗಿಯುವ ವರೆಗೆ ಅವಳಿಗೆ ವಯಸ್ಸಿನಿಂದ ಯೋಗ್ಯರಾದಂಥ ಅವಿವಾಹಿತ ಲಗ್ನದ ಹುಡುಗರು ಬಾಕಿ ಉಳಿಯುವದು ಹೆಚ್ಚಾಗಿ ಸಂಭವವಿರುವದಿಲ್ಲ.

ಸದ್ಯದ ಆರ್ಥಿಕ ತೊಂದರೆಯು ಲಗ್ನಕ್ಕೆ ಪೇಟೆಯ ಧಾರಣೆಯ ಸ್ವರೂಪವನ್ನು ತಂದಿಟ್ಟಿದೆ; ಆದರೆ ಆ ಪೇಟೆಯಲ್ಲೂ ಪದವಿಧಾರಿ ಕುಮಾ ರಿಕೆಯರು ಬಹು ಮೂಲ್ಯರಾಗಿದ್ದರೂ ಅಮೂಲ್ಯ= ಬೆಲೆಯಿಲ್ಲದವರಾಗಿ ನಿರ್ಧರಿಸುವರು. ಐರಾವತವೇನೋ ಬಹು ದೊಡ್ಡ ರತ್ನವು; ಆದರೆ ಅದು ಪುಕ್ಕಟೆಯಾಗಿ ದೊರೆತರೂ ಅದನ್ನು ಪೋಷಿಸುವ ಕೆಲಸವು ರಾಜ-ಮಹಾ

ರಾಜರದೇ ಸರಿ! ಬಹುಮುಷ್ಟಿಗೆ ಬೇಕಾರ ಹಾಗು ಅಂಶತಃ ಅತ್ಯಲ್ಪ ಸಂಬಳ ವನ್ನು ಸಂಪಾದಿಸುವ ಇಂದಿನ ತರುಣನು ಸ್ವಂತದ ಹೊಟ್ಟೆಯನ್ನು ಹೇಗಾ ದರೂ ಹೊರುತ್ತಾನೆ ಅಂಥವನಿಗೆ ಪದವಿಧಾರಿ ಹೆಂಡತಿಯೆಂದರೆ ಕೇವಲ ಐರಾವತದಂತೆ ಪೋಷಿಸಲಶಕ್ಯವಾದ ಭಾರೀ ಕಾಣಿಕೆಯೇ ಎಂದೆನಿಸುತ್ತದೆ! ತರುಣರಿಗೆ ತಮ್ಮಷ್ಟು ಕಲಿತ ತರುಣಿಯು ಬೇಕಾಗಿರುವದಿಲ್ಲ ತದ್ವಿರುದ್ಧ ವಾಗಿ ತಮ್ಮ ಆಜ್ಞೆಯಲ್ಲಿರಬಹುದಾದಂಥ, ಕಡಿಮೆ ಕಲಿತಂಥ, ಸ್ವರೂಪದಲ್ಲಿ ಸುಂದರಳಾದ, ದುಡ್ಡಿನಿಂದ ಶಿರಿವಂತಿಕೆಯುಳ್ಳ ಇಂಥ ಹೆಂಡತಿಯೇ ಬೇಕಾ ಗಿರುತ್ತಾಳೆಂದು ಲೋಕಪ್ರವಾದವು ಅವರ ಮೇಲೆ ಹೊರಿಸಲಾಗುವದು; ಆದರೆ ಅದಕ್ಕಿಂತಲೂ ತರುಣರ ಮನೌದಾರ್ಯವೇ ಅವರಿಗೆ ತಮ್ಮ ಸರಿ ಜೋಡಿಯು ಪದವಿಧಾರಿ ತರುಣಿಯನ್ನು ಮಡದಿಯೆಂದು ಆರಿಸುವದಕ್ಕೆ ಅಡ್ಡ ಬರುತ್ತದೆ. ಅವನಿಗಾದರೂ ಮನಸ್ಸಿನಲ್ಲಿ ಅವಳ ಸಂಸ್ಕಾರಯುಕ್ತ ಜೊತೆಯು, ಸರಿಜೋಡಿಯು ಮಿತ್ರತ್ವದ ಬಗ್ಗೆ ಅಷ್ಟೇ ಹುಮ್ಮಸವಿರುತ್ತದೆ: ಆದರೆ ತನ್ನೊ ಡನೆ ಲಗ್ನವಾದಳೆಂದರೆ ಅವಳಿಗೆ ಕಷ್ಟಪಡಬೇಕಾದೀತು; ಮತ್ತು ಅಂಥ ಸೈಹಿಕಕಷ್ಟಗಳನ್ನು ಅವಳಂತಹ ವಿದುಷಿಗೆ ನಾಡಹೇಳುವದೆಂದರೆ ಅಧಮು ತನವೇ ಎಂಬಿತ್ಯಾದಿ ಸಂಕೋಚದ, ಔದಾರ್ಯದ, ಅಂಜಿಕೆಯ ಮತ್ತು ಚ್ಯುತಿಗೊಂಡ ಭಾವನೆಯಿಂದಲೇ ಆತನು ಅವಳನ್ನು ವರಿಸಲಿಕ್ಕೆ ಸಿದ್ಧನಿರುವ ದಿಲ್ಲ. ಇಂದಿನ ಲಗ್ನದ ಸಂತೆಯನ್ನು ನಿರೀಕ್ಷಿಸಿದರೆ ಹುಡುಗನದೇನು-ಹುಡಿಗೆ ಯದೇನು, ಅವರು ಕಲಿಯುತ್ತಿರುವಾಗಲೇ ಅವರ ಲಗ್ನವು ಬೇಗನೆ ಕೂಡು ತ್ತದೆ. ಹುಡುಗನು ಪದವಿಧಾರಿಯಾದನೆಂದರೆ ಮತ್ತು ಆತನಿಗೆ ನೌಕರಿ-ಚಾಕರಿ ದೊರೆಯುದಿದ್ದರೆ ಆತನ ಬೆಲೆಯು ಅಮೂಲ್ಯ= ಏನೂ ಬೆಲೆಯಿಲ್ಲ-ಎಂದಾಗು ತ್ತದೆ ಹುಡುಗಿಯು ಪದವಿಧರಳಾದಳೆಂದ ಮಾತ್ರವೇ ಬಹುಮೂಲ್ಯಳಂತಾ ಗುತ್ತಾಳೇನೋ ನಿಜ; ಆದರೆ ಆ ಬಹುಮೂಲ್ಯ ವ್ಯಕ್ತಿಗೆ ಸಂಸಾರದೊಳಗಿನ ಸಖಿಯೆಂದು ತಂದುಕೊಳ್ಳಲಿಕ್ಕೆ ಆದಾವ ಯುವಕನ ಕೈಯೂ ಮುಂದಾಗುವ ದಿಲ್ಲ. ಕಲಿತಂಥ ಹುಡುಗಿಯರು ಹೆಚ್ಚು ಖರ್ಚು ಮಾಡುವವರಿರುತ್ತಾರೆ, ಸೋಮಾರಿಗಳಿರುತ್ತಾರೆ, ಮನೆಗೆಲಸಗಳಲ್ಲಿ ಪರಾವಲಂಬಿಗಳಾಗಿರುತ್ತಾರೆ, ಸಾಂಸಾರಿಕ ಸಂಗತಿಗಳಲ್ಲಿ ದುರಾಗ್ರಹಿಗಳಿರುತ್ತಾರೆ ಇತ್ಯಾದಿ ಹಲವು ಸಟೆ ದಿಟ ಪ್ರವಾದಗಳು ಗತಿಸಿದ ಪೀಳಿಗೆಯೊಳಗಿನ ಅಡಮುಟ್ಟ, ಗರ್ವಿಷ್ಠ, ಸೋಮಾರಿ, ಆದರೆ ಭಾಗ್ಯಶಾಲಿಗಳಾದ ವಿದುಷಿಯರು ಏನನ್ನು ಪ್ರಸ್ಥಾಪಿಸಿರುವರೊ, ಅದು

ಇಂದಿನ ಕುಮಾರಿಕೆಯರನ್ನೂ ಬೆನ್ನಟ್ಟಿ, ಅವರ ಲೌಕಿಕವನ್ನು ಕಳೆಯುತ್ತಿದೆ. ಇಂದಿಗೆ ಕಲಿಯುತ್ತಿರುವ ಕುಮಾರಿಕೆಯಾದರೂ ಆರ್ಥಿಕ ಅಡಚಣಿಯಲ್ಲಿ ಸಿಕ್ಕು ತೊಳಲುತ್ತಿರುವ ಕುಟುಂಬದೊಳಗಿನವಳೇ ಆಗಿರುತ್ತಾಳೆ. ದಾಸ-ದಾಸಿಯರನ್ನಿಟ್ಟುಕೊಳ್ಳುವ ಅಶಕ್ಯತೆಯ ಮೂಲಕ ಅವಳು ಮನೆಗೆಲಸಗಳಲ್ಲಿ ನಿಷ್ಣಾತಳಾಗಿರುತ್ತಾಳೆ; ಹಾಗು ಮರ್ಯಾದಿತ ಮಹತ್ವಾಕಾಂಕ್ಷೆಗಳನ್ನಷ್ಟೇ ಧರಿಸಿರುತ್ತಾಳೆ; ಅಂದಬಳಿಕ ಅವಳ ಉದ್ಯೋಗಶೀಲತೆಯ ಬಗ್ಗೆ, ಕರ್ತವ್ಯನಿಷ್ಠೆಯ ಬಗ್ಗೆ ಹಾಗು ಮಿತವ್ಯಯದ ಬಗ್ಗೆ ಏನಾದರೊಂದು ವಿಪರೀತ ಕಲ್ಪನೆಯನ್ನು ಸಮಾಜವು ಮಾಡಿಕೊಂಡಿದೆ; ಮತ್ತು ಹಗಲಿರುಳೂ ಮಾಡುತ್ತಿದೆ

ಶಿಕ್ಷಣ ಪೂರೈಸಿದೊಡನೆ ತಂದೆ-ತಾಯಿಗಳಿಗೆ ಮಗಳು ಕೇವಲ ತನ್ನ ಪರಿಚೋಡಿಯವಳೂ ತನ್ನಷ್ಟು ಕರ್ತವ್ಯನಿಷ್ಠಳೂ ಎಂದೆನಿಸುತ್ತದೆ. ಅದರಲ್ಲೂ ಅವಳ ಲಗ್ನದ ಬಗ್ಗೆ ಪ್ರಯತ್ನಪಟ್ಟು ಸಟ್ಟು ಸಾಕಾಗಿದ್ದ ತಾಯಿ-ತಂದೆಗಳಂತೂ ತನ್ನ ಮನಸ್ಸಿನಲ್ಲಿ ಅನ್ನುಹತ್ತುವರೇನಂದರೆ, ಇನ್ನು ಈಕೆ ಪ್ರೌಢಳಾದ್ದರಿಂದ; ತನ್ನ ಲಗ್ನವನ್ನು ತಾನೇ ಹೊಂದಿಸಿಕೊಳ್ಳಬೇಕು ಸವವಿಧಾರಿ ಮಗಳ ತಾಯಿ-ತಂದೆಗಳು ಅವಳ ಲಗ್ನದ ಜೋಡಿಗಾರಿಕೆಯನ್ನು ಮೆಲ್ಲಮೆಲ್ಲನೆ ತಪ್ಪಿಸಿಕೊಳ್ಳಹತ್ತಿರುವರೆಂದು ಜನರಾಡಿಕೊಳ್ಳುತ್ತಿರುವರು. ಸ್ವಂತಕ್ಕೆ ಲಭಿಸಿದ ಮಹತ್ವದ ಕಲ್ಪನೆಯಿಂದ ಕುಮಾರಿಕೆಯರಾದರೂ ಹಲವು ಪ್ರಸಂಗಗಳಲ್ಲಿ ಕೊಬ್ಬೇರಿ ಬಿಡುತ್ತಾರೆ. ವರಾನ್ವೇಷಣದ ನೀಗದ ಶರ್ತುಗಳನ್ನು ಬಡಬಡಿಸಹತ್ತುತ್ತಾರೆ; ದುರಾಗ್ರಹದ ಭಾಷೆಯಾಡಹತ್ತುತ್ತಾರೆ; ಮತ್ತು ಸಂಸಾರದಲ್ಲಿ ಕೂಡಿ ಇರದಿದ್ದರೆ ಬೇರೆಯಾಗಿರುವ ಅಂಜಿಕೆಯನ್ನು ತೋರಿಸುತ್ತಾರೆ. ಮಗಳ ಮನಸ್ಸು ಸ್ಪಷ್ಟವಾಗಿ ತಿಳಿದ ಬಳಿಕ ಮುಂದೆ ಮುಂದೆ ಹಿರಿಯ ಜನರು ಅವಳ ಲಗ್ನದ ಗೊಂದಲದಲ್ಲಿ ಬೀಳಲಿಕ್ಕೆ ಧೈರ್ಯಪಡದಾಗುತ್ತಾರೆ. ಕುಮಾರಿಕೆಯ ಮನಸ್ಸಿನಲ್ಲಿ ತಾನು ದೊರಕಿಸಿದ ಶಿಕ್ಷಣದ ಬಗ್ಗೆ, ಅದರ ಮೂಲ್ಯದ ಬಗ್ಗೆ ಮತ್ತು ಅದರ ಬಲದ ಮೇಲೆ ಸ್ವತಂತ್ರವಾಗಿ ಜೀವಿತದ ಚರಿತಾರ್ಥ ಸಾಗಿಸುವ ಕಾರ್ಯಕ್ರಮದ ಬಗ್ಗೆ ವಿಪರೀತ ಕಲ್ಪನೆಗಳು ಉಂಟಾಗಹತ್ತುತ್ತವೆ. ಅದರಲ್ಲಿ ಅವಳ ಸುತ್ತುಮುತ್ತಲಿನ ಸಂಸಾರಗಳು ಅವಳಿಗೆ ಹೆಚ್ಚು ತೊಂದರೆಯ, ಕಷ್ಟದ ಹಾಗು ಕೀಳು ತರದವಾಗಿ ಕಾಣಹತ್ತುವವರಿಂದ ಬರಬರುತ್ತ ಆಕೆಗೆ ಲಗ್ನದ ಮೋಹವು ಹುಟ್ಟಿ

ದಾಗುತ್ತವೆ. ದಿಟವಾಗಿ ಹೇಳುವದೆಂದರೆ, ನಮ್ಮಗಳ ಸಂಸಾರಗಳು ಹೆಚ್ಚಾಗಿ ಪೀಡಿತ, ಕಷ್ಟಪ್ರದ ಹಾಗು ರುಚಿಯಿಲ್ಲದವೇ ಆಗಿರುತ್ತವೆ. ಅವಳಿಗೆ ಇಂಥ ಸಂಸಾರಗಳಲ್ಲಿ ತನ್ನ ವ್ಯಕ್ತಿಮತ್ವಕ್ಕೆ ಆತಂಕವೇ ಉಂಟಾಗುವದೆಂದು ಅನಿಸ ಹತ್ತುತ್ತದೆ. ಅಂತೆಯೇ ಅವಳು ಅವಿವಾಹಿತಳಾಗಿರುತ್ತಾಳೋ ಇಲ್ಲವೆ ಯೋಗ್ಯನಾದಂಥ ಜೊತೆಗಾರನು ಅವಳಿಗೆ ಸಿಗುವದಿಲ್ಲೆಂದು ಅವಳು ಅವಿವಾಹಿತಳಾಗಿರುವಳೋ ಇದು ಅವಳದವಳಿಗೇ ಗೊತ್ತು! ಆದರೆ ಇಷ್ಟು ಹೇಳಬಹುದೇನೆಂದರೆ, ಅವಳಿಗೆ ಸ್ವತಂತ್ರ ಜೀವನ ನಾಗಿಸುವ ಮಹತ್ವಾಕಾಂಕ್ಷೆಯುಂಟಾಗುತ್ತದೆ. ಶಿಕ್ಷಣಕ್ರಮದಲ್ಲಿ ತಾನು ಹೇಗೆ ಯಶದ ಮೆಟ್ಟಿಲುಗಳನ್ನು ಒಂದರ ಹಿಂದೊಂದರಂತೆ ಚ್ಯುತಿಯಿಲ್ಲದೆ ಏರಿದಳೋ, ಅಷ್ಟೇ ಚಪಲದ ಓಟದಿಂದ ತಾನು ಸ್ವತಂತ್ರ ಜೀವನದ ಮುಕ್ಕಾಮವನ್ನೂ ಸಹಜವಾಗಿ ಮುಟ್ಟುವೆನು, ಎಂದು ಅವಳಿಗೆ ಅನಿಸಹತ್ತುತ್ತವೆ. ಇನ್ನು ಅವಳು ಸ್ಕೂಲ ಮಿಸ್ಟ್ರೆಸ್ಸಾಗಿರಲಿ ಇಲ್ಲವೆ ನರ್ಸ-ಡಾಕ್ಟರಿಣಿಯಾಗಿರಲಿ, ಮೊದ ಮೊದಲು ಅವಳು ತನ್ನ ಕೆಲಸದಲ್ಲಿ ಅತ್ಯಂತ ತಲ್ಲೀನಳಾಗಿ ಬಿಡುವದರಿಂದ, ಆಗ ಅವಳಿಗೆ ತನ್ನ ಹೊಟ್ಟೆಹಸಿವಿನ ಪರಿವೆ ಕೂಡ ಇರುವದಿಲ್ಲ.

ಅಂದಬಳಿಕ ಇಂಥ ಏಕಾಗ್ರ ಸೇವೆಯಲ್ಲಿ ಭಾವನೆಗಳ ಪಲವು ಹಸಿವುಗಳು ಅವಳಿಗೆ ಹೇಗೆ ನೆನಪಾಗಬೇಕು? ಆಗಿನ ಅವಳ ಆಲಸ್ಯರಹಿತವಾದ ಹೆಚ್ಚು ಶ್ರಮದ ಸಾರ್ಥಕವೂ ಆಗುತ್ತದೆ; ಅವಳು ಕೈಕೊಂಡ ಕೆಲಸವು ಸಫಲವೂ ಆಗುತ್ತದೆ; ಅವಳ ಕೀರ್ತಿಯೂ ಹೆಚ್ಚುತ್ತಿದೆ; ಆದರೆ ತಾನು ಚೆನ್ನಾಗಿ ಯಶ ದೊರಕಿಸಿದೆನು, ಎಂದು ಯಾವಾಗ ಆಕೆಗೆ ಅನಿಸುವದೋ, ಅದೇ ಕ್ಷಣದಲ್ಲಿ "ಹಾಗಾದರೆ ಇನ್ನು ಮುಂದೇನು?" ಎಂಬ ಉದಾಸ ಪ್ರಶ್ನೆಯನ್ನು ಅವಳಿಗೆ ಅವಳ ಉದಾಸೀನಗೊಂಡ ಮನಸ್ಸು ಕೇಳುತ್ತದೆ; ಮತ್ತು ಆ ಕೂಡಲೆ ಅವಳು ಒಮ್ಮೆಲೆ ಖತಿಗೊಳ್ಳುತ್ತಾಳೆ ಅಂಥ ಕಾರ್ಯಗಳೊಳಗಿಂದ ಬಿಡುವಾದದ್ದನ್ನು ಕಂಡು ಹತ್ತೊತ್ತಿಕ್ಕಿದ್ದ ಅವಳ ಹಸಿವುಗಳು ಅವಳನ್ನು ಹರಿಹರಿದು ತಿನ್ನಹತ್ತುತ್ತವೆ; ಹಾಗು ಅವಳು ಮನಸ್ಸಿನಿಂದ ಮತ್ತು ಶರೀರದಿಂದ ತೀರ ಹೈರಾಣಾಗಿ ಬಿಡುತ್ತಾಳೆ. ಕೇವಲ ನಿಸರ್ಗವು ಪ್ರಾಣಿಮಾತ್ರರ ರೋಮರೋಮಗಳಲ್ಲಿ ವ್ಯಕ್ತಿವಿಕಾಸವೆಂಬುದೊಂದು ಮಹತ್ವಾಕಾಂಕ್ಷೆಯನ್ನು ಬಿತ್ತಿಟ್ಟಿರುತ್ತದೆ ಆ ವ್ಯಕ್ತಿವಿಕಾಸವು ವಿಜಾತೀಯರ ನೆರವಿನಿಂದ ಮತ್ತು ನೆರವಿನಲ್ಲಿ ಪೂರ್ಣವಾಗಬೇಕೆಂಬ ಯೋಜನೆಯನ್ನು ಅದರೊಡನೆಯೇ ಆ ನಿಸರ್ಗವು

ಮಾಡಿಟ್ಟಿರುತ್ತದೆ. ಆಂದಬಳಿಕ ಒಂದೇ ವ್ಯಕ್ತಿಯು ಆತ್ಮವಿಕಾಸವು ಸಾಧಿಸು ವದೆಂತು? ಹಾಗು ಸಮಾಧಾನವನ್ನು ಹೇಗೆ ಉಂಟುಮಾಡುವದ? ಸ್ತ್ರೀಯ ಪ್ರವೃತ್ತಿಯು ಬೇರೆಯವರ ಆಶ್ರಯಕ್ಕಾಗಿ ಬಾಯಿಬಾಯಿಬಿಡುತ್ತಿರತ್ತದೆ. ಆವಳ ಕರ್ತೃತ್ವದ ಕಾರ್ಯಕ್ಷೇತ್ರವು ಭಿನ್ನವಾಗಿದ್ದರೂ ಕೂಡ ಆವಳಿಗೆ ಸ್ವತಂತ್ರವಾದ ಅಸ್ತಿತ್ವವಿರ ವದಿಲ್ಲ; ಮತ್ತು ಅಂಥ ಆ ಅಸ್ತಿತ್ವವನ್ನು ಹೆಚ್ಚು ಕಾಲ ಸ್ಥಿರಪಡಿಸಲಿಕ್ಕಾಗುವದಿಲ್ಲ. ಕುಮಾರಿಕೆಯರು ಅಂಗೀಕರಿಸಿದ ಕಾರ್ಯದ ಪರಮೋತ್ಕರ್ಷವಾಗಬೇಕೆಂಬುವೇ ಅವರ ಭಾವನೆಗಳ ಆದರ್ಶದ ಉಮಯುಬಿಂದುವು.

ಲಗ್ನದ ಕಾಲವು ಹೊರಟು ಹೋದ್ದರಿಂದ ಪತಾರವಾದ, ಹಸಿವೆಗಳ ನಿರೋಧನದಿಂದ ನಿಸ್ತೇಜಗೊಂಡ, ನಿರಾಶಾಮಯ ಜೀವನದಿಂದ ಉದಾಸ ರಾಗಿ ತೋರುವ ಅತಿ ಪ್ರೌಢ ಕುಮಾರಿಕೆಯರು ಲಗ್ನಕ್ಕಾಗಿ ತೀರ ಕಸಿವಿಸಿ ಪಡುತ್ತಾರೆಂಬ ದೃಶ್ಯವು ಅಲ್ಲಲ್ಲಿ ಕಂಗೊಳಿಸುತ್ತದೆ

ಮತ್ತು ಅಂಥ ಕುಮಾರಿಕೆಯರು ಕಸಿವಿಸಿಪಡದೇನು ಮಾಡಬೇಕು? ಬಹುತರವಾಗಿ ಮೂವತ್ತೈದು ವರ್ಷಗಳಿಗೆ ಮಾತೃಪದದ ಸಂಬಂಧವು ಕಟ್ಟಾಗುತ್ತದೆ ಸ್ತ್ರೀಯರ ಮನಸ್ಸಿನಲ್ಲಿ ಪತಿಪ್ರೇಮದ ಹಸಿವು ಪ್ರಖರತರ ವಾಗಿ ವಾಸಿಸಿರುತ್ತದೆ. ಪತ್ನಿಯಾಗದ ಹೊರತು ಅವಳಿಗೆ ಹೇಗೆ ವೈಷಯಿಕ ಸಮಾಧಾನವು ಲಭಿಸುವದಿಲ್ಲವೋ, ಹಾಗೆಯೇ ತಾಯಿಯಾಗದ ಹೊರತು ಅವಳ ಸಂಸಾರೀ ಮಹತ್ವಾಕಾಂಕ್ಷೆಯು ಪೂರ್ಣವಾಗುವದಿಲ್ಲ. ಸ್ತ್ರೀಯು ಪ್ರಾಮುಖ್ಯವಾಗಿ ತಾಯಿಯೇ ಆಗಿರುತ್ತಾಳೆ. ಆ ಮಾತೃಪದದ ಹಸಿವು- ಅಪತ್ಯಸಂಗೋಪನದ ಹುಮ್ಮಸು ಅವರಂತಹ ಬೇರೆ ಮಹತ್ವದ ಯಾವ ಕಾಂಕ್ಷೆಯೂ ಅವರಲ್ಲಿ ವಾಸಿಸಿರುತ್ತಿರುವದಿಲ್ಲ ಇಂಥ ಆ ಜೀವಾಳದ ಮಾತೃ ಪದದ ಪ್ರಾಪ್ತಿಗಾಗಿ ಅತಿಪ್ರೌಢ ಕುಮಾರಿಕೆಯರು ಕಸಿವಿಸಿಪಡುತ್ತಿದ್ದರೆ ಆಶ್ಚರ್ಯವಲ್ಲ ಮೂವತ್ತೈದರ ವಯಸ್ಸಿನವರೆಗೇ ಎಲ್ಲ ಸಂಸಾರ! ಇದ ಶಿಕ್ಷಣಕ್ಕೆ, ಸ್ವತಂತ್ರ ಜೀವನ ಸಾಗಿಸಲಿಕ್ಕೆ ಹಾಳು ಮಾಡಿದ ವರ್ಷಗಳನ್ನು ಕಳೆದರೆ ಅದರಲ್ಲಿ ೩-೪ ವರ್ಷಗಳ ಮಾತೃಪದದ ಆಶೆಯ ಅವಧಿಯು ಬಾಕಿ ಉಳಿದಿರುತ್ತದೆ; ಹಾಗು ಅಷ್ಟು ಅವಧಿಯಲ್ಲಿ ತಾಯ್ತನವನ್ನು ಹೊಂದುವ ದಕ್ಕಾಗಿ ಅವರು ಹಾಗೆ ಕಸಿವಿಸಿಪಡುತ್ತಿರುತ್ತಾರೆ.

ಮುಂಚಿನ ವರಾನ್ವೇಷಣದ ಎಲ್ಲ ಕರಾರುಗಳನ್ನು ಅವರು ಈ ಮೊದಲೇ ಕೈಬಿಟ್ಟಿರುತ್ತಾರೆ. ಇಷ್ಟೇ ಅಲ್ಲ, ಚಿಕ್ಕಂದಿನಲ್ಲೇ ಲಗ್ನವಾಗಿದ್ದರೆ ಯಾವ

ಪರಿಸ್ಥಿತಿ ಮತ್ತು ಎಂಥ ಗಂಡಸನ್ನು ಅವರು ವರಿಸುತ್ತಿರಲಿಲ್ಲವೋ, ಅಂಥ ವಿಪರೀತ ಪರಿಸ್ಥಿತಿ ಮತ್ತು ಅಂಥ ತ್ಯಾಜ್ಯ ವರನನ್ನು ಅವರೀಗ ಒಮ್ಮೆಲೆ ಒಪ್ಪುತ್ತಾರೆ. ಪ್ರೌಢ ಕುಮಾರಿಕೆಯರ ಹಣೇಬರೆಹದಲ್ಲಿ ಇಷ್ಟೊಂದೇ ವರನೇ ಇರತಕ್ಕದ್ದು; ಮತ್ತು ಅವನಾದರೂ ತೀರ ಹೆಚ್ಚು ವಯಸ್ಸಿನವನಿರುವದರಿಂದ ವಯಸ್ಸಿನ ಅಂತರದ ಪಟ್ಟಿಗಾದರೂ ಅವನು ಕೇವಲ ಇಜ್ಜೋಡಾಗಿಯೇ ಕಾಣುವನು! ವಿದುಷಿಯರಿಗೆ ಸಾಮಾಜಿಕ ಪ್ರತಿಷ್ಠೆಯು ಹೆಚ್ಚಾಗಿರುವುದರಿಂದ ವಿಶೇಷ ಅನಿಸಹತ್ತುತ್ತದೆ. ಪರಸ್ಪರರ ವಯಸ್ಸಿನೊಳಗಿನ ಅಂತರದ ಕಡೆಗೆ, ಆ ವರನ ಪೂರ್ವದ ಮಕ್ಕಳು-ಮರಿಗಳ ಕಡೆಗೆ, ಗಂಡನ ನಿರ್ವೀರ್ಯವಾದ ಪ್ರವೃತ್ತಿಯ ಕಡೆಗೆ ಹಾಗು ಸಣಿಸುತ್ತ ನಡೆದಿರುವ ಆತನ ದೇಹಯಷ್ಟಿಯ ಕಡೆಗೆ ಅವರು ಕಂಡೂ ಕಾಣದವರಂತೆ ಮಾಡುತ್ತಾರೆ. ಇಂಥವರ ಉಡಿಯಲ್ಲಿ ಸಂಸಾರ ಸುಖದ ಭಾಗವು ಅದೆಷ್ಟು ಬೀಳುತ್ತಿದ್ದೀತೋ ಇದು ಅವರವರಿಗೇ ಗೊತ್ತು! ಲಗ್ನದ ವಯಸ್ಸಿನಲ್ಲಿ ತಾನು ನೆಟಿನೆಟಿಪು ವರ್ತಿಸಿದೆನು, ಅನೇಕ ಯೋಗ್ಯರಾದ ವರಗಳನ್ನು ಪಡೆಯುವದಕ್ಕೆ ಅಸಮ್ಮತಿಸಿದೆನು; ಅದಕ್ಕೆ ಶಿಕ್ಷೆಯೆಂದೇ ಈ ಎಂಜಲದ ಹಾಗು ಹಾಳಾದ ಸಂಸಾರ ಸಾಗಿಸುವದು ತನ್ನ ಪಾಲಿಗೆ ಬಂದಿತೆಂದು ಅವರಲ್ಲಿಯ ಹಲವು ಮಂದಿಗೆ ಅನಿಸದಿರುವದಿಲ್ಲ. ಒಂಟಿಗ ಕೌಮಾರ್ಯದಲ್ಲಿ ಸುಖವು ಲಭಿಸಲಿಲ್ಲ, ಪ್ರೌಢತನದ ಎಂಜಲು ಸಂಸಾರದಲ್ಲಿ ಸುಖವು ಶಿಲ್ಕು ಉಳಿದಿಲ್ಲ. ಹೀಗೆ ಅವಳಿಗೆ ಆಜನ್ಮ ಪರ್ಯಂತ ಒಂದಿಲ್ಲೊಂದು ಬಗೆಯ ಮಾನವೀ ಆಕಾಂಕ್ಷೆಗಳ ಸಂಕಟವು ಆಗುತ್ತಿರುತ್ತದೆ. ಹಲವು ಮಂದಿ ತಮ್ಮ ನಿರಾಶೆಯನ್ನು ಪ್ರಕಟವಾಗಗೊಡದೆ, ಅವಿವಾಹಿತ ಸ್ಥಿತಿಯಲ್ಲೇ ಅಖಂಡವಾಗಿದ್ದಾರು; ಇಲ್ಲವೆ ವಿವಾಹಿತ ಸ್ಥಿತಿಯೊಳಗೆ ಬಹಿರಂಗದಲ್ಲಿ ಸಮಾಧಾನಿಗಳಂತೆ ತೋರುವರು; ಆದರೂ ಕೂಡ ಅವರು ಧರಿಸಿದ್ದ ಆ ಬಲವಂತದ ಆನಂದವು ಅವರ ಮನಸ್ಸಿನ ದೀನಸ್ಥಿತಿಯನ್ನೇ ನೋಡುವವರ ಕಣ್ಣಿಗೆ ಕಟ್ಟುತ್ತದೆ.

ಕಲಿತಂಥ ಹಾಗು ಗಳಿಸುವಂಥ ಕುಮಾರಿಕೆಯರಿಗೆ ಅವರ ಪಾಲಕರೂ ಹಿರಿಯರೂ ಸುತ್ತುಮುತ್ತಲಿನ ಜನರೂ ಅವರು ವಹಿಸಿರುವ ನೌಕರಿ ಚಾಕರಿಗಳನ್ನೇ ಮುಂದರಿಸುವ ಪ್ರೋತ್ಸಾಹನವೀಯುತ್ತಿರುತ್ತಾರೆ. ದುಡ್ಡಿನ ಚಟವಾದರೂ ಬೇರೆ ಚಟಗಳಂತೆ ನಿತ್ಯಪರಿಪಾಠದಿಂದ ಹತ್ತುತ್ತದೆ; ಮತ್ತು ಅದು ಒಮ್ಮೆ ಹತ್ತಿತೆಂದರೆ, ಅದನ್ನು ಬಿಟ್ಟುಬಿಡುವದು ಅಶಕ್ಯವಾಗುತ್ತದೆ. ಅವಳ

ಸಂಪಾದನೆಯನ್ನವಲಂಬಿಸಿರುವ ಜನರಿಗೆ ಲೋಭದ ಚಟ ಹತ್ತುತ್ತದೆ; ಮತ್ತು ಅವಳ ಸಂಪಾದನೆ ಕಟ್ಟಾಗಬೇಕೆಂಬ ಕಲ್ಪನೆಕೂಡ ಅವರಿಗೆ ಅಸಹ್ಯವಾಗುತ್ತದೆ. ಇದುವರೆಗೆ ಶಿಕ್ಷಣಕ್ಕೆಂದು ವ್ಯಯಗೊಳಿಸಿದ ಹಣವನ್ನು ತಿರುಗಿ ತಲುಪಿಸಬೇಕೆಂಬ ನಿಷ್ಠುರ ಆಗ್ರಹದಿಂದ ಕ್ರೂರರಾದ ತಂದೆ-ತಾಯಿಗಳು ಅನ್ನುವರು; ಅಲ್ಲದೆ ಕುಟುಂಬದ ವೆಚ್ಚ-ಪ್ರಸಂಗಗಳಲ್ಲೂ ನೆರವಾಗಬೇಕು.(ಅವು ವರ್ಷಾನುವರ್ಷ ಇರತಕ್ಕವುಗಳೇ) ತನ್ನ ಸ್ವಂತದ ಸಂಪಾದನೆಯೊಳಗಿಂದ ವೃದ್ಧರಾದ ತಂದೆ-ತಾಯಿ, ಮನೆತಪ್ಪಿದ್ದ ಭಗಿನಿಯರ ಕುಟುಂಬ, ಹೆಂಡತಿ ಸತ್ತಿದ್ದ ಅಣ್ಣಂದಿರ ಸಂಸಾರ ಇವರುಗಳ ಪಾಲನ ಪೋಷಣಗಳಿಗೂ, ಚಿಕ್ಕ ಭಗಿನಿಯರ ಲಗ್ನಗಳ ಹಾಗು ತಮ್ಮಂದಿರ ಓದು ಇವುಗಳಿಗೂ ಅವಳು ಹಣದ ಸಹಾಯ ಮಾಡಲೇಬೇಕು; ಮತ್ತು ಈ ಸಹಾಯವನ್ನು ಅವಳು ಅವಿವಾಹಿತವಾಗಿದ್ದು ಸಂತತ ಮಾಡುತ್ತಿರುವುದೇ ಅವಳ ಆಯುಷ್ಯದ ಇತಿಕರ್ತವ್ಯತೆಯು ಎಂಬ ಶಬ್ದಜಾಲಗಳು ಅವಳ ಕಿವಿಗೆ ಆಗಾಗ್ಗೆ ಬೀಳುತ್ತಿರುತ್ತವೆ. ಅವಳಿಗೆ ಅವರ ಆ ಮೋಸದ ಹಾಗು ಸ್ವಾರ್ಥಪರ ಬಿನ್ನಹಗಳು ನಿಜವೆನಿಸದಿದ್ದರೂ ಕೂಡ ತನ್ನೊಬ್ಬಳ ಸುಖಕ್ಕಾಗಿ ಇಷ್ಟು ಮಂದಿಯ ಮನ ನೋಯಿಸುವದು ಆಕೆಯ ಜೀವಕ್ಕೆ ಬರುತ್ತದೆ. ಎಲ್ಲ ಆಪ್ತೇಷ್ಟರ ಆ ನಿರ್ಲಜ್ಜ ಸ್ವಾರ್ಥೀ ಹರಿತಗಳಿಂದ ಆಕೆಯು ರೇಗಿಗೆದ್ದು, ಸ್ವಂತದ ಸ್ವಾರ್ಥವನ್ನು ಚೂರುಚೂರಾಗಿ ಮಾಡಿ ಅವರ ಮೋರೆಯ ಮೇಲೆ ಬಿಸುಟುತ್ತಾಳೆ. ಅವಳಿಗೆ ಪರಮಾರ್ಥದ ಹೊರತು ಬೇರೆ ಜೀವನವನ್ನೇ ಅವರು ಬಾಕಿ ಉಳಿಸುವದಿಲ್ಲ. ಹೆಣ್ಣು ಜಾತಿಯು ಅತ್ಯಂತ ಭಾವನಾಶೀಲವಾದುದು. ಆ ಭಾವನಾಶೀಲತೆಯ ಮೂಲಕ ಮನೆಮನೆಗಳಲ್ಲಿ ಆಕರ್ಷಕ ಸಂಸಾರಗಳು ನಡೆದಿವೆ. ಅವುಗಳೊಳಗಿನ ದುಃಖಿಗಳು, ಕಷ್ಟಪಡುವವರು, ರೋಗಿಗಳು, ಅಲ್ಪವಯಿಗಳು ಇವರುಗಳ ಪಾಲನ-ಪೋಷಣವಾಗುತ್ತಿರುವದೇನೋ ನಿಜ; ಆದರೂ ಅದೇ ಭಾವನೆಯ ಅತಿರೇಕದಿಂದ ಸ್ತ್ರೀಯರು ಸ್ವಂತದ, ಸ್ವಾರ್ಥದ, ಶರೀರದ ಹಾಗು ಸುಖದ ಹೋಳಿಗೊಳಿಸುತ್ತಾರೆ. ಕಾರಣವೇನಂದರೆ, ಕುಟುಂಬದೊಳಗಿನ ಸಣ್ಣ-ಪುಟ್ಟವರು, ಮುದುಕರು-ತದಕರು ಕೂಡ ಎಲ್ಲರೂ ಪ್ರಪಂಚವನ್ನು ತಮತಮಗೆ ಸರಿಯಾಗಿ ಚೆನ್ನಾಗಿ ನಡೆಯಿಸುತ್ತಾರೆ. ಪ್ರತಿಯೊಬ್ಬರು ತಮ್ಮ ತಮ್ಮ ಪ್ರಪಂಚದಲ್ಲಿ ಸಂಪೂರ್ಣ ಆಸಕ್ತರಾಗಿರುತ್ತಾರೆ. ಇಡೀ ಕುಟುಂಬದಲ್ಲಿ ದುಡಿಯುವವಳೂ ದಣಿಯುವವಳೂ ಆವಂಥ ಅವಳೊಬ್ಬಳೇ ಗಳಿಸುವ ಕುಮಾರಿಕೆಯು! ಅವಳು

ಎಲ್ಲ ಸುಖಕ್ಕಾಗಿಯೂ ಧಾವಿಸಬೇಕು; ಆದರೆ ಅವಳಿಗೆ ಶರೀರಕ್ಲೇಶ ಇಲ್ಲವೆ ಮನಃಕ್ಲೇಶಗಳಾಗಹತ್ತಿದರೆ ಅವಳ ನೆರವಿಗೆ ಅದಾರೂ ಧಾವಿಸಿ ಬರಲಾರರು! ಇಡಿ ಮನೆಯಲ್ಲಿ ತನ್ನ ವಿಷಯವಾಗಿ ಚಿಂತಿಸುವವರು ಅದಾರೂ ಇರಲಾರರೆಂಬ ಈ ತಿಳುವಳಿಕೆಯು ವಯಸ್ಸು ಹೆಚ್ಚಿದಂತೆ ಅವಳಿಗೆ ಹೆಚ್ಚೆಚ್ಚು ತಿಳಿಯಹತ್ತುತ್ತದೆ; ಆದರೆ ಇದರಿಂದ ಅವಳಿಗೇನು ಪ್ರಯೋಜನ? ಯಾಕೆಂದರೆ ಆ ಕಾಲಕ್ಕೆ ವಯಸ್ಸು ಮತ್ತು ಹುರುಪು ಇವೆರಡೂ ಹೊರಟುಹೋಗಿರುತ್ತವೆ. ಹುಟ್ಟಿಸಿದ ಸಂಸಾರ ಸಾಗಿಸಿ ನಿವೃತ್ತರಾದ ಪ್ರೌಢಹೆಂಗಸರಲ್ಲಿ ಅವಳು ವಯಸ್ಸಿನಿಂದ ಹೋಗಿ ಕುಳಿತಂತೆ ಸಂಸಾರ ಮಾಡಲಿಕ್ಕೆ ಎಂದೂ ಲಭಿಸಲಿಲ್ಲೆಂದು ಸುಖೇಚ್ಛೆಗಳನ್ನೇ ಸುಟ್ಟು ಸುರಿಮಾಡಿದ ವೈರಾಗ್ಯದ ವಿಧವೆಯರಂತೆ ಅವಳ ಹುರುಪು ಅಂತರಂಗದಲ್ಲಿ ಪೂರಾ ಸುಟ್ಟುಹೋಗಿರುತ್ತದೆ. ಅವಳ ತಲೆಯಲ್ಲಿ ಲಗ್ನದ ವಿಚಾರಗಳು ಬಂದರೆ ಅವುಗಳ ಬಗ್ಗೆ ಅವಳದನಳಿಗೇ ಹಾಸ್ಯಾಸ್ಪದವೆನಿಸುತ್ತದೆ; ಹಾಗು ಅವುಗಳನ್ನು ಅಮಲಿನಲ್ಲಿ ತರುವುದು ಅಶಕ್ಯವೆನಿಸುತ್ತದೆ. ಅಂತೆಯೇ ಅವಳು ತನ್ನ ಆಯುಷ್ಯವನ್ನು ಅದೇ ಸ್ಥಿತಿಯಲ್ಲಿ ಸುಮ್ಮನೆ ಕ್ರಮಿಸುತ್ತಿರುತ್ತಾಳೆ. ಸನ್ಮಾರ್ಗದಿಂದಿರುವ ಬಗ್ಗೆ ಬೇರೆಯವರಿಂದ ದೊರೆಯುವ ಶಾಬ್ದಿಕ ಪ್ರಶಂಸೆಯು ನೊಂದುತ್ತ ಬಂದಿರುವ ಅವಳ ವೈಷಯಿಕ ಆಕಾಂಕ್ಷೆಗಳನ್ನು ತಣ್ಣಗೆ ಮಾಡುತ್ತದೆ. ಎಲ್ಲರಿಗೂ ಉಪಯುಕ್ತಳಾದ ವಿಷಯದ ಒಳ್ಳೇ ಗುಣದ ಅಫುವಿನ ಗುಳಿಗೆ ನುಂಗಿ ನುಂಗಿ, ಅವಳು ತನ್ನ ಸ್ವಾರ್ಥದ ಕಸಿವಿಸಿಯನ್ನು ಕ್ಷಣಕಾಲವೇ ಮರೆಯಲು ಶಕ್ತಳಾಗುತ್ತಾಳೆ.

ಯಾವ ಕುಮಾರಿಯರು ಭಿಡೆ-ಮುರುವತ್ತುಗಳಿಗೆ ಬಿಕ್ಕೆ ಹಾಕದಂಥವರಿರುವರೋ ಅವರ ಬಗ್ಗೆ ಶಾಲೆ-ಕಾಲೇಜುಗಳಲ್ಲಿ ಕಲಿಯುವಾಗ ಉಲ್ಟಾದಂಥ ಖೊಟ್ಟಿ ಲೋಕಾಪವಾದವು ಅವರ ಲಗ್ನಕ್ಕೆ ಹಗಲೆಲ್ಲ ವಿಘ್ನವನ್ನುಂಟು ಮಾಡುತ್ತದೆ. ತರುಣರ ಸಾದಾಮೈತ್ರಿಯು ವಿಪರ್ಯಸ್ತವಾದದ್ದರ ಹಾಗು ತನ್ನ ಮರ್ಯಾದೆಯು ಚೂರುಚೂರಾದದ್ದರ ಗಂಧವಾರ್ತೆಯೂ ಅವಳಿಗಿರುವದಿಲ್ಲ. ಅವಳಿಗೆ ಮುಂದೆ ಎಂದಾದರೂ ಆ ಅನಿಷ್ಟ ಸಂಗತಿ ತಿಳಿದರೆ ಅವಳು ಕಾಯುವಾಗಿಯೇ ದುಃಖಿಯಾಗುತ್ತಾಳೆ. ಅವಳು ಪುರುಷ ಮಿತ್ರರೊಡನೆ ಮಾತಾಡುವುದು ಕಥೆಯಾಡುವುದು ಒಮ್ಮೆಲೆ ಕಟ್ಟಾಗುತ್ತದೆ; ಹಾಗು ಸ್ವಯಂವರದ ದ್ವಾರವು ಅವಳ ಮಟ್ಟಿಗಂತೂ ಕಾಯಮ ಕಟ್ಟಾಗಿ ಹೋಗುತ್ತದೆ. ಕೆಲ ಕುಮಾರಿಕೆಯರಿಗೆ ವಿವಾಹಿತ ಗೃಹಸ್ಥರೊಡನೆ ದುರಾಚಾರದ

ಸ್ನೇಹವು ಕೂಡುತ್ತದೆ  ಹೀಗೆ ಎಲ್ಲಿ ಆಗಿರುವದೋ ಅಲ್ಲಿ ಅವರಿಗೆ ನಿಜವಾದ ಸುಖ-ಸಮಾಧಾನ ಲಭಿಸುವದು ಕಠಿಣವಾಗಿರುತ್ತದೆ. ಯಾಕೆಂದರೆ ತುಂಬಿದ ಸಂಸಾರದೊಳಗಿಂದ ಅವಳು ಆ ಪುರುಷನನ್ನು ಕಾಯಮವಾಗಿ ಓಡಿಸಿಕೊಂಡೊಯ್ಯುವದು ಎಂದಿಗೂ ಶಕ್ಯವಿಲ್ಲ. ಅವನ ಒಲವಾದರೂ ಸಾಮಾಜಿಕ ಪ್ರತಿಷ್ಠೆಯ ಕಡೆಗೆ, ಮೊದಲಿನ ಹೆಂಡತಿಯ ಕಡೆಗೆ ಹಾಗು ತನ್ನ ಮಕ್ಕಳು-ಮರಿಗಳ ಕಡೆಗೆ ಇದ್ದೇ ಇರುವದು.

ಕಲಿತ ಕುಮಾರಿಕೆಯ ಸಮಸ್ಯೆಯು ಇದು ಸಮಾಜಕ್ಕೆ ಉಂಟಾದ ಪ್ರಶ್ನವಾಗಿರದೆ, ಸ್ವಂತ ಆ ಕುಮಾರಿಕೆಯರಿಗೂ ಬಗೆಹರಿಯದ ಪ್ರಶ್ನವಾಗಿರುತ್ತದೆ. ಸುತ್ತಮುತ್ತಲಿನ ಜನರು ಹೆಚ್ಚು ಸಹಾನುಭೂತಿಯಿಂದ ಆ ಕುಮಾರಿಕೆಯರ ಕಡೆಗೆ ನೋಡುತ್ತಿದ್ದರೆ, ಅವರ ಲಗ್ನದ ವಿಷಯದಲ್ಲಿ ಎಡೆಬಿಡದೆ ಸಹಾಯ ಮಾಡುತ್ತಿದ್ದರೆ, ತಮ್ಮ ಸ್ವಾರ್ಥ, ಖೊಟ್ಟಿ ಅಭಿಮಾನ, ಕುಟುಂಬದ ಕೀರ್ತಿ ಹಾಗು ಅವಳ ವಿಷಯದ ತಮ್ಮ ವಿಪರೀತ ಅಪೇಕ್ಷೆ ಇವನ್ನೆಲ್ಲ ಅವರು ಬದಿಗಿರಿಸುತ್ತಿದ್ದರೆ ಹಾಗು ಅವಳ ವ್ಯಕ್ತಿವಿಕಾಸಕ್ಕೆ, ಸುಖಕ್ಕೆ ಮತ್ತು ಸ್ಥೈರ್ಯಕ್ಕೆ ಯಾವುದರಿಂದ ನೆರವಾದೀತೆಯೋ ಅದರಂತೆ ನಡೆಯಲು ಸಿದ್ಧರಿದ್ದರೆ ಶಿಕ್ಷಿತ ಹಾಗು ಶೀಲವಂತ ಕುಮಾರಿಕೆಯರ ಸುತ್ತಲೂ ಇಂದಿಗ ಯಾವ ಅದೃಶ್ಯ ಬಂಧನಗಳ ಗುಲಾಮಗಿರಿಯು ಹಬ್ಬಿರುವದು ಕಂಡುಬರುವದೋ ಅದು ಇಲ್ಲದಂತಾದೀತು. ಮನೆಯ ಜನರ ಸಂಪೂರ್ಣ ಬೆಂಬಲವಿದ್ದರೇನೇ ಮನುಷ್ಯನು ಸಮಾಜದ ಅವಹೇಲನೆಗೂ ಟೀಕೆಗೂ ಕಾಲಿನಿಂದ ಚಿಮ್ಮಲಿಕ್ಕೆ ಶಕ್ತನಾಗುತ್ತಾನೆ. ಅಂಥ ಬೆಂಬಲವು ಕುಮಾರಿಕೆಯರಿಗೆ ಅವರ ಆಪ್ತ-ಸ್ವಕೀಯರಿಂದ ಸಂತತವಾಗಿ ಸಿಕ್ಕುವದು ಹೆಚ್ಚು ಆವಶ್ಯಕವಾಗಿರುತ್ತದೆ. ಕುಮಾರಿಕೆಯರು ತಮ್ಮ ಬೇತುಗಳನ್ನು ಒಂದಿಷ್ಟು ವ್ಯಾವಹಾರಿಕ ಮರ್ಯಾದೆಗೆ ತರಬೇಕು; ಸಾರಾಸಾರ ವಿಚಾರದಿಂದ ಬೇರೆಯವರಿಗೆ ಸಮ್ಮತವಾಗುವ ಹಾಗು ಸ್ವಂತಕ್ಕೆ ಸಾಧಾರಣ ರೀತಿಯಿಂದ ಸಮ್ಮತವಾಗುವ ವರನನ್ನು ಸ್ವೀಕರಿಸಬೇಕು. ಸ್ವಂತ ಸ್ತ್ರೀತ್ವದ ಮನಸ್ಸನ್ನು ಪೂರ್ಣ ಗುರ್ತಿಸಬೇಕು; ಮತ್ತು ಆ ಮನಸ್ಸಿನೊಳಗಿನ ಆಶೆಗಳನ್ನು ಪೂರ್ತಿಗೊಳಿಸಲು ಆವಶ್ಯವಿರುವ ಎಲ್ಲ ಘಟನೆಗಳನ್ನು ತೀರ ವ್ಯಾವಹಾರಿಕತೆಯಿಂದ ಶೋಧಿಸಬೇಕು; ಹಾಗು ಸ್ವಸುಖಕ್ಕಾಗಿ ಸ್ವಲ್ಪ ಕಣ್ಣುಮುಚ್ಚಿ ಮಾಡಿ ಎಲ್ಲ ಪ್ರಾಪಂಚಿಕ ಸಂಗತಿಗಳನ್ನು ಸ್ವೀಕರಿಸಬೇಕು. ಪರಮಾರ್ಥಕ್ಕಾಗಿ ಆಜನ್ಮ

ಸ್ವಾರ್ಥಕ್ಕೆ ಹೋಳಿ ಮಾಡುವ ಆವಶ್ಯಕತೆಯಿಲ್ಲವೆಂಬುದನ್ನು ತಿಳಿಯಬೇಕು. ಯಾವ ಕುಮಾರಿಕೆಯರು ಈ ಸಂಗತಿಗಳನ್ನು ತಿಳಿಯುವರೋ, ಅವರು ತಮ್ಮ ತಮ್ಮ ಮಟ್ಟಿಗಾದರೂ ಈ ಸಮಸ್ಯೆಯನ್ನು ಬಿಡಿಸುವರು. ಕುಮಾರಿಕೆಯರೇ ಈ ಸಮಸ್ಯೆಯನ್ನು ಲಗುಬಗನೆ ಬಿಡಿಸಹತ್ತಿದರೆ, ಇದು ಸಮಾಜದೆದುರು ಸಮಸ್ಯೆಯೆಂದು ಬಾಕಿ ಉಳಿಯಲಿಕ್ಕಿಲ್ಲ

---

## ಅವಿವಾಹಿತ ಮಾತಾ　　:: ೪

ವಿವಾಹವಾಗದೆ ಮಾತೃಪದ ಪ್ರಾಪ್ತವಾಗುವಂತಹ ಆಪತ್ತಿಯು ಸ್ತ್ರೀಜೀವನದಲ್ಲಿ ಇನ್ನೊಂದಿಲ್ಲ. ಮಾತೃಪದ ಪ್ರಾಪ್ತವಾಗುವದು ಕೇವಲ ನಿಸರ್ಗಾಧೀನವು; ಆದರೂ ಶುದ್ಧ ತಾಯ್ತನವು ಯಾವ ಪರಿಸ್ಥಿತಿಯಲ್ಲಿ ಹಾಗು ಯಾವ ಬಗೆಯಾಗಿ ಪ್ರಾಪ್ತವಾಗಿದ್ದರೂ ಕೂಡ ಅದು ಜೀವಾಳದ್ದೇ ಆಗಿರುತ್ತದೆ. ವಿವಾಹದ ಮುದ್ರೆ-ಅಪ್ಪಣೆ ದೊರೆತ ಬಳಿಕ ಸ್ತ್ರೀಗೆ ತಾಯ್ತನವು ಪ್ರಾಪ್ತವಾಗಬೇಕೆಂಬ ನೀತಿಯು ಕಾಯಿದೆಯಿಂದ ಮತ್ತು ಸಮಾಜದಿಂದ ನಿರ್ಧರಿಸಿದುದೆಂದು ಅವಿವಾಹಿತ ತಾಯ್ತನವು ಪ್ರಾಣಸಂಕಟದ್ದಾಗಿದೆ. ಸಮಾಜವು ಸುಸಂಘಟಿತವಾಯಿತು; ಸ್ವಂತದ ಸ್ಥೈರ್ಯಕ್ಕಾಗಿ, ಸಾತತ್ಯತೆಗಾಗಿ ಮತ್ತು ಸ್ವಚ್ಛತೆಗಾಗಿ ಅದು ಲಗ್ನಸಂಸ್ಥೆಯನ್ನು ನಿರ್ಮಿಸಿತು; ಲಗ್ನಸಂಸ್ಥೆಯಿಂದ ಉಂಟಾಗುವ ಪ್ರಜೆಗಳಿಗೇ ವಾರಸಾ ಹಕ್ಕಿನಿಂದ ಆಸ್ತಿ ದೊರಕುವ ಹಕ್ಕು ಕೊಟ್ಟಿತು. ವಿವಾಹಿತ ಸ್ತ್ರೀ ಪುರುಷರ ಪ್ರೇಮ ಸಂಬಂಧದಲ್ಲಿ ಕೈ ನೀಡುವವರಿಗೆ ಶಿಕ್ಷೆ ನಿರ್ಧರಿಸಲ್ಪಟ್ಟಿತು. ಇಷ್ಟು ಲಗ್ನಸಂಸ್ಥೆಯ ಸುತ್ತಲೂ ಕಾಯಿದೆಯಿಂದ, ರೂಢಿಯಿಂದ ಮತ್ತು ಧರ್ಮದಿಂದ ಒಂದರ ಮೇಲೊಂದು ಕಟ್ಟಿದ್ದ ಭದ್ರವಾದ ಕೋಟೆಗಳನ್ನು ನೋಡಿ ನಮಗೆ ಅನಿಸುವದೇನಂದರೆ, ಸಮಾಜದಲ್ಲಿ ಲಗ್ನಸಂಸ್ಥೆಯೊಂದು ಆದ್ಯ ಹಾಗು ಒಂದೇ ಒಂದಾದ ನಿರಂತರ ಘಟನೆಯಿದೆ. ಈ ಸಂಸ್ಥೆಯಿಂದಲೇ ಸಮಾಜಧಾರಣೆಯಾಗುತ್ತಿರುತ್ತದೆ ಇಂಥ ಈ ಆದ್ಯ ತತ್ತ್ವ, ಸಮಾಜಸಮ್ಮತ ನೀತಿ, ಸರ್ವರೂ ಆಚರಿಸುವ ರೂಢಿ ಇವುಗಳನ್ನೆಲ್ಲ ಅಪಮಾನಪಡಿಸುವ ಆ ಅವಾಹಿತ ತಾಯ್ತನ! ಅಂದಬಳಿಕ ಅದರ ಮೇಲೆ ಸಮಾಜದ ರೋಷವೆಷ್ಟಿದ್ದೀತೆಂಬದನ್ನು ಬೇರೆ ಹೇಳಲಿಕ್ಕೇ ಬೇಡ. ಅವಿವಾಹಿತ ಮಾತೃಪದವು ವಿವಾಹಸಂಸ್ಥೆಯ ಮೂಲಕವೇ ತ್ಯಾಜ್ಯವೆನಿಸುವದು! ಗರ್ಹಣೀಯವಾದವು ನೀತಿನಿಯಮಗಳ ಸಲು

ವಾಗಿ! ಕಾಯಿದೇಶೀರ ಪರಿಣಾಮುಗಳಿಗಾಗಿಯೇ ಭಯಂಕರವೆನಿಸುವದು! ಪ್ರಾಣಸಂಕಟವೆನಿಸುವದಾದರೂ ರೂಢಿಯ ಅಂಕುಶದಿಂದ! ಶೀರ ಮುಂದರಿದ ರಾಷ್ಟ್ರಗಳಲ್ಲಿ ನೋಡಿದರೂ ಅಲ್ಲಿಯೂ ಅವಿವಾಹಿತ ತಾಯ್ತನವನ್ನು ಪ್ರಾಣಸಂಕಟವೆಂದೇ ತಿಳಿಯುವರು! ಆ ಪ್ರಾಣಸಂಕಟವನ್ನು ನೀಗಿಕೊಳ್ಳುವದಕ್ಕಾಗಿ ಸಹಸ್ರಾರು ಕುಮಾರಿಕೆಯರೂ ಲಕ್ಷಾವಧಿ ಶಿಶುಗಳೂ ಪ್ರಾಣಕ್ಕೆರವಾಗುತ್ತಾರೆ; ಮತ್ತು ಆ ಇಬ್ಬಗೆಯ ಮರಣದೊಳಗಿಂದ ಯಾರೊಬ್ಬರ ಮರಣವೂ ಸಾಧಿಸಲಿಲ್ಲೆಂದು ಸ್ವಂತದ ಹೇಡಿ ಮನಸ್ಸಿಗೆ ಶಾಪಳಿಸಿಕೊಳ್ಳುತ್ತ, ದೀನ ಬಾಲಕನನ್ನು ಎದೆಗವಚಿಕೊಳ್ಳುತ್ತ ಜೀವಂತ ಮರಣವನ್ನು ಹಲವು ಮಂದಿ ಕುಮಾರಿಕೆಯರು ಸಹಿಸುತ್ತಿರುತ್ತಾರೆ ಲಗ್ನಸಂಸ್ಥೆಯ ವಿರುದ್ಧ ಬಾಷ್ಕಳ ಯುಕ್ತಿವಾದ ಮಾಡುವವರು ಅವಿವಾಹಿತ ತಾಯ್ತನದ ಬಗ್ಗೆ ವಿಪರೀತ ಕಲ್ಪನೆಯನ್ನು ಎಷ್ಟೇ ಮೂರ್ಖತನದಿಂದ ಲೋಕದೆದುರು ಮಂಡಿಸಿದರೂ, ಅದನ್ನಿನ್ನೂ ಅಮಲಿನಲ್ಲಿ ತರುವ ಧೈರ್ಯವು ಲೋಕದಲ್ಲಿ ಅದಾರಿಗೂ ಆಗಿರುವದಿಲ್ಲ; ಹಾಗು ಮುಂದಾದರೂ ಎಷ್ಟೋ ನೂರು ವರ್ಷಗಳ ವರೆಗೂ ಆಗಲಿಕ್ಕಿಲ್ಲ. ಆತ್ಯಂತಿಕ ಕಲ್ಪನೆ ಮಂಡಿಸಲಿಕ್ಕೆ ಹೆಚ್ಚಾದ ಧೈರ್ಯ ಇಲ್ಲವೆ ಕೊಂಚವೂ ವಿದ್ವತ್ತ ಇವು ಬೇಕಾಗುವದಿಲ್ಲ. ಅಂಥದೇ ಒಂದು ಕಲ್ಪನೆಯು ಅವಿವಾಹಿತ ಐಚ್ಛಿಕ ತಾಯ್ತನದ್ದಾಗಿದೆ; ಆದರೆ ಅವಿವಾಹಿತ ಮಾತೆಯರಿಗೆ ಸಮಾಜದಲ್ಲುಂಟಾದ ದುರ್ದೆಸೆಯು ಯಾರಿಗೆ ಪ್ರತ್ಯಕ್ಷ ನೋಡಲು ದೊರೆತಿರುವದೋ ಅಥವಾ ಅದರ ಕಲ್ಪನೆ ಮಾಡಲಿಕ್ಕೆ ಬರುತ್ತಿರುವದೋ ಅವರಿಗೆ ಆವರ ಆ ಮಹತ್ಸಂಕಟದ ಭೀಕರ ದೃಶ್ಯವನ್ನು ಕಂಡು ಮೈಮೇಲೆ ಮುಳ್ಳೇಳದಿರಲಾರವು

ಅವಿವಾಹಿತ ತಾಯ್ತನವನ್ನು ತಿಳಿದೂ ತಿಳಿದು ಅಥವಾ ಹುಮ್ಮಸದಿಂದ ಅದಾರು ಸ್ವೀಕರಿಸುತ್ತಾರೆ? ಕೇವಲ ಸ್ವಂತದ ಹೊಣೆಗಾರಿಕೆ ತಿಳಿಯದಂಥ ಚಿಕ್ಕ ಹುಡುಗಿಯರಿಗೆ ಕೂಡ ಆ ಆಪತ್ತಿಯ ಅಂಜಿಕೆ ಎನಿಸುತ್ತಿರಲು, ವಯಸ್ಸಿಗೆ ಬಂದಿರುವ ತಿಳುವಳಿಕೆಯುಳ್ಳ ತರುಣಿಯು ತಾನಾಗಿ ಆ ವಿಪತ್ತು ತಂದುಕೊಂಡಾಳೆಂಬುವುದು ತಪ್ಪಾದೀತು. ಹಾಗಾದರೀ ಅವಿವಾಹಿತ ತಾಯ್ತನವು ಉಂಟಾಗುವುದಾದರೂ ಹೇಗೆ? ಅದರ ಕಾರಣ ತಿಳಿದರೆ ಅದನ್ನು ಯಥಾಶಕ್ತಿ ನಿವಾರಿಸಲು ಅನುಕೂಲವಾದೀತೆಂದು ನಮಗೆ ತಿಳಿದ ಅಲ್ಪ ಸ್ವಲ್ಪ ಕಾರಣಗಳನ್ನು ನಾವಿಲ್ಲಿ ನಮೂದಿಸುತ್ತೇವೆ. ಮೊದಲನೇ ಹಾಗು ಮುಖ್ಯ ಕಾರಣ

ನೆಂದರೆ, ಈ ಪ್ರೌಢ ವಿವಾಹದ ಅತಿರೇಕಕ್ಕೆ ಮುಟ್ಟಿದ ರೀತಿಯಾಗಿದೆ. ಗಂಡು-ಹೆಣ್ಣುಗಳ ಲಗ್ನಗಳ ವಯಸ್ಸನ್ನು ಆರ್ಥಿಕ ಅಡಚಣಿಗಳ ಮೂಲಕ ನಾವು ಒಂದೇಸವನೆ ಹೆಚ್ಚಿಸುತ್ತ ಬಂದೆವು; ಆದರೂ ಕೂಡ ನಿಸರ್ಗವು ನಮ್ಮೊಡನೆ ಎಂದೂ ಸಂಗನಮತ ಮಾಡಿರಲಿಲ್ಲ. ಸೃಷ್ಟಿಕಾರ್ಯವು ನಡೆಯಲಿಕ್ಕೆಂದು ಕಾಮುಕ ಭಾವನೆಗಳುಂಟಾಗುವ ಕಾಲವನ್ನು ನಿಸರ್ಗವೇ ಸಾಮಾನ್ಯವಾಗಿ ಯಾವುದನ್ನು ನಿರ್ಧರಿಸಿಟ್ಟಿದೆಯೋ ಅದರಲ್ಲಿ ಕೊಂಚವೂ ಹೆಚ್ಚುಕಡಿಮೆ ಯಾಗಿರುವದಿಲ್ಲ; ಆಗಲಿಕ್ಕೂ ಇಲ್ಲ. ನಿಸರ್ಗವು ತನ್ನ ಕೆಲಸವನ್ನು ಮಾಡಿಯೇ ಮಾಡುತ್ತಿರುತ್ತದೆ. ಅದು ರೂಢಿಯ ಸಮ್ಮತಿಗಾಗಿ ಇಲ್ಲವೆ ಲಗ್ನದ ಸಮ್ಮತಿ-ಮುದ್ರೆಗಾಗಿ ಎಂದೂ ಕಾದು ನಿಲ್ಲುವುದಿಲ್ಲ. ಹುಡುಗೆಯರ ವರ್ಷಗಳು ಹೆಚ್ಚಿದನೆಂದರೆ ಅವರಲ್ಲಿ ನಿಸರ್ಗಸಿದ್ಧವಾದ ಆಕಾಂಕ್ಷೆಯು ಉತ್ಪನ್ನವಾಗ ತಕ್ಕದ್ದೇ. ಅದು ಅವರನ್ನು ಸುಮ್ಮನಿರಗೊಡುದಿಲ್ಲ; ಹಾಗು ಕೊನೆಗೆ ಮೋಸ ಗೊಳಿಸದಿರುವದಿಲ್ಲ. ಆದರಲ್ಲಿ ಗಂಡಸ ಜಾತಿಯು ತಾನಾಗಿ ಮುಂದಾಗುವ ಹಾಗು ಏರಿ ಹೋಗುವಂಥದಿರುತ್ತದೆ! ಅದರಿಂದ ತೀರ ಇಲ್ಲ ಇಲ್ಲವೆಂದೆನ್ನು ತ್ತಿದ್ದರೂ ಸಂಕೋಚದಿಂದ ಇಲ್ಲವೆ ಅಂಜಿಕೆಯಿಂದ ಕುಮಾರಿಕೆಯರು ಗಂಡ ಸರ, ವಿಶೇಷವಾಗಿ ಹುಮ್ಮಸದ ಯುವಕರ ಕಾಮುಕ ಆಕ್ರಮಣಕ್ಕೆ ಬಲಿಯಾ ಗುತ್ತಾರೆ. ಸಂತತಿನಿಯಮನದ ಸಾಧನಗಳ ನಿರ್ಧಾಸ್ತತೆಯು ಅವಾಸ್ತವ ವಾಗಿ ಹೆಚ್ಚಿದೆ; ಅದಕ್ಕೆ ಖೊಟ್ಟಿ ಕೀರ್ತಿ ಧರಿಸಿದೆ. ಸಾಧನಗಳ ನಿರ್ಧಾಸ್ತತೆಯಲ್ಲಿ ನಂಬಿಗೆಯಿಟ್ಟು ಮೋಸಗೊಂಡ ಹಾಗು ಮೋಸಗೊಳಿಸಲ್ಪಟ್ಟಂಥವರೇ ಬಹುತರ ಎಲ್ಲ ಅವಿವಾಹಿತ ತಾಯಂದಿರಿರುತ್ತಾರೆ. ಅವರ ಗೆಳೆಯ ಹಾಗು ಗೆಳತಿ ಯರು ಸಂತತಿನಿಯಮನದ ಸಾಧನದ ಬಗ್ಗೆ ನೂರಕ್ಕೆ ನೂರರಂತೆ ನಿರ್ಧಾಸ್ತ ತೆಯ ಆಶ್ವಾಸನೆ ಕೊಡುತ್ತಿರುತ್ತಾರೆ; ಮತ್ತು ಅವಳಿಗಾದರೂ ಆ ಆಶ್ವಾಸ ಗಳಿಂದ ದೊಡ್ಡ ಆಧಾರವೆನಿಸುತ್ತಿರುತ್ತದೆ. ಗಂಡಸು ಸ್ವೈರಾಚಾರ ಮಾಡು ತ್ತಿರುವಾಗ ತನ್ನನ್ನಾರಾದರೂ ಹಿಡಿಯಲಿಕ್ಕಿಲ್ಲಷ್ಟೇ ಎಂಬುದೊಂದೇ ಮಾತಿಗೆ ಹೆದರುತ್ತಿರುತ್ತಾನೆ. ಕುಮಾರಿಕೆಯರಿಗೆ ತಮ್ಮನ್ನಾರೂ ನೋಡುತ್ತಿರುವದಿಲ್ಲ ವಷ್ಟೇ ಎಂಬ ಭೀತಿಯು ಇದ್ದೇ ಇರುವದಲ್ಲದೆ, ತಮ್ಮ ಮೈ ಮೇಲೆ ಪ್ರಸಂಗವು ಹೊರಳಲಿಕ್ಕಿಲ್ಲವಷ್ಟೇ ಎಂಬ ಭೀತಿಯು ವಿಶೇಷವಾಗಿರುತ್ತದೆ. ಅವುಗಳೊಳಗೆ ಸಾಧನಗಳಿಂದ ಮಾತೃಪದದ ಅಂಜಿಕೆಯು ದೂರವಾಗುವಂಥದಿದೆ ಎಂಬದು ತಿಳಿದ ಕೂಡಲೆ ಅವರಿಗೆ ಆ ಸಾಹಸವನ್ನು ಮಾಡಿಯೇ ನೋಡುವ ಇಚ್ಛೆಯುಂ

ಟಾಗುತ್ತದೆ. ಲಗ್ನದ ಆಶ್ವಾಸನೆ ಕೊಡುತ್ತಿರುವ ತರುಣನಲ್ಲಿ ನಂಬಿಗೆಯಿಟ್ಟು ಆತನ ಕಾಮುಕ ದೈನ್ಯತೆಗೆ ಬಲಿಬೀಳುತ್ತಿರುವ ಕುಮಾರಿಕೆಯರಾದರೂ ಅಲ್ಪ ಸ್ವಲ್ಪವಿಲ್ಲ. ಇಂಥ ಸಂಬಂಧದಲ್ಲಿ ಗರ್ಭಿಣಿಯಾಗುವ ಮೊದಲು ಅಥವಾ ಗರ್ಭ ಧರಿಸಿದ ನಂತರ ಅದೇ ತರುಣನೊಡನೆ ಅವಳ ಲಗ್ನವಾದರೆ ಅವಳ ಆ ವೈಷಯಿಕ ಸ್ವಾತಂತ್ರ್ಯದ ಅತಿರೇಕ ಚರ್ಚೆ ಕೂಡ ಆಗುವುದಿಲ್ಲ; ಆದರೆ ಆಕೆಯು ಆ ಪ್ರಿಯಕರನು ಮೋಸಗಾರ ಇಲ್ಲವೆ ಢೋಂಗಿಯಾದರೆ ಅವಳಿಗೆ ಆ ಸಂಕಟವನ್ನು ಸುಮ್ಮನಿದ್ದು ಸಹಿಸಬೇಕಾಗುತ್ತದೆ. ಅಯೋಗ್ಯ ಪುರುಷನಲ್ಲಿ ನಂಬಿಗೆ ಇಟ್ಟಬಗ್ಗೆ ಹಿಂದಿನಿಂದ ಅವಳಿಗೆ ಪಶ್ಚಾತ್ತಾಪವಾದರೂ ಉಪಯೋಗವೇನು? ಅವಳನ್ನು ಕೆಡಿಸುವವನು ಅವಳು ಗರ್ಭಿಣಿಯಾಗುತ್ತಲೆ ಅವಳ ಸನಿಯಕ್ಕೆ ಹಾಯದಾಗುತ್ತಾನೆ. ಅವಳೊಡನೆ ತನ್ನ ಹೆಸರು ಸೇರಿಸಲ್ಪಟ್ಟು, ಅವಳೊಡನೆ ತಾನು ಕೆಟ್ಟ ಹೆಸರು ಹೊಂದಬೇಕಾದೀತೆಂಬ ಅಂಜಿಕೆಯು ಆತನಿಗೂ ಇರುತ್ತದೆ. ತಾನು ಫೌಜದಾರೀ ಗುನ್ಹೆಯಲ್ಲಿ ಸಿಕ್ಕೇನೆಂಬ ಬೆದರಿಕೆಯಿರುತ್ತದೆ. ಇವುಗಳಲ್ಲದೆ ಇನ್ನೂ ಹಲವು ಅವಿವಾಹಿತ ಮಾತೆಯರಾಗುವ ಪೇಚು-ಪ್ರಸಂಗಗಳು ನಿರ್ಮಾಣವಾಗುವಂಥ ಪ್ರಸಂಗಗಳು ಒದಗುತ್ತವೆ. ಹಿರಿಯಕ್ಕನ ಹೆರಿಗೆಯಲ್ಲಿ ಸಹಾಯ ಮಾಡಲೆಂದು ಹೋಗುವ ವಯಸ್ಸಿಗೆ ಬಂದಿರುವ ಅವಿವಾಹಿತ ತಂಗಿ, ದೂರಿನ ಗುರ್ತದ ಇಲ್ಲವೆ ವಿಧುರ ಅಪ್ತನ ಮನೆಯಲ್ಲಿ ವಿದ್ಯಾ-ಭ್ಯಾಸಕ್ಕೆಂದಿರುವ ಕುಮಾರಿಕೆ ಮತ್ತು ಅಂದಾದುಂದಾಗಿರುವ ಬದ್‌ಮಾಷ ಹಾಗು ನಿಂದ್ಯವಾದಂಥ ದೊಡ್ಡ ಕುಟುಂಬದೊಳಗಿರುವ ಕುಮಾರಿಕೆ ಇವರುಗಳ ಮೇಲೆ ಯಾವ ಕಾಲಕ್ಕೆ ಎಂಥ ಸಂಕಟವೊದಗೀತು ಅವರ ಮೇಲೆ ಅಧಿಕಾರ ನಡೆಸುವ ಜನರು ತಮ್ಮ ಸತ್ತೆಯನ್ನು ಯಾವಾಗ ಹೇಗೆ ದುರುಪಯೋಗಿಸುವರು ಎಂಬದಕ್ಕೆ ನಿಯಮವಿರುವದಿಲ್ಲ. ಇಂಥ ಪೇಚು ಪ್ರಸಂಗಗಳಲ್ಲಿ ಒತ್ತಾಯದಿಂದ ಅವಳ ಮೇಲೆ ಹೊರಲಾಗುವ ತಾಯ್ತನವು ಅತ್ಯಂತ ಕರುಣಾಸ್ಪದವಾಗಿರುತ್ತದೆ. ಅದೇ ಪ್ರಕಾರದ ರೋಮಾಂಚಗಳನ್ನುಂಟು ಮಾಡುವ ಮಾತೃಪದವು ಗುಂಡ ಜನರ ಜಬರಿ-ಬಲವಂತಿಕೆಗಳಿಂದ ಇಲ್ಲವೆ ಮೋಸಗಳಿಂದ ನಿರ್ಮಾಣವಾಗುತ್ತದೆ. ಸಂಕ್ಷಿಪ್ತವಾಗಿ ಅನ್ನಬೇಕಾದರೆ, ಅವಿವಾಹಿತ ಮಾತೃಪದವು ಮೋಸಪಡಿಸುವದರಿಂದ, ವಿಶ್ವಾಸಘಾತದಿಂದ, ಬಲವಂತದಿಂದ ಕುಮಾರಿಕೆಯರ ಮೇಲೆ ಹೇರಲಾಗುತ್ತದೆ. ಅವರಿಗಾಗುವ ಆ ಮೋಸವು ಸಂತತಿನಿಯಮನದ ಸಾಧನದ ಅಥವಾ ಪ್ರಿಯಕರನ ಆಶ್ವಾಸನದ

ಖಾತ್ರಿಯಿಂದ ಆಗಿರುತ್ತದೆ. ಸಾಧನಗಳು ಕೈಕೊಟ್ಟಿರಲಿ ಇಲ್ಲವೆ ವಚನವು ಅವಳ ವಿಶ್ವಾಸಘಾತಗೊಳಿಸಿರಲಿ; ಅವಳ ಇಚ್ಛೆಗೆ ಪ್ರತಿಯಾಗಿ ಇಲ್ಲವೆ ಅವಳ ಮೇಲೆ ಸತ್ತೆ ನಡೆಸುವ ಪುರುಷರು ಮಾಡಿದ ಅತ್ಯಾಚಾರದಿಂದ ಅದು ನಿರ್ಮಾಣವಾಗಿರಲಿ ಅವೆಲ್ಲವುಗಳ ರೀತಿಯು ಒಂದೇ. ಅವಿವಾಹಿತ ಮಾತೃಪದವು ಅವಳನವಳಿಗೆ ಎಂದೂ ಬೇಕೆನಿಸಿದ್ದಿಲ್ಲ; ಹಾಗು ಅನಿಸುವದೂ ಇಲ್ಲ

ಮಹತ್ತರವಾದ ಸಂಕಟದಲ್ಲಿ ಸಿಕ್ಕ ಆ ಕುಮಾರಿಕೆಯನ್ನು ಮೋಸಗೊಳಿಸುವವನಿಗೆ ಅವಳೊಡನೆ ಲಗ್ನವಾಗಹಚ್ಚಿ, ಅವಳನ್ನು ಉದ್ಧರಿಸುವ ಬದಲು, ಅವಳ ಮರ್ಯಾದೆಯ ಕವದಿಯನ್ನು ಅಶಕ್ಯ ಹುಲುಬಿನ ಮುಳ್ಳು ಮೇಲೆ ಹರವಿ, ಅದನ್ನು ಚೂರುಚೂರಾಗಿ ಮಾಡುವದಕ್ಕೆಂದು ಜಪ್ಪಿಸಿ ಕುಳಿತಿದ್ದ ನಮ್ಮ ನಿಷ್ಠುರವಾದ ಸಮಾಜವು ಅವಳ ದಿನದ ಚಲನವಲನದ ಮೇಲೆ ಪಾಳತಿಯಿಟ್ಟೇತು. ಅವಳು ಗರ್ಭಿಣಿಯಾದ ಹಾಗು ಅವಳು ಗರ್ಭಪಾತ ಮಾಡಿಕೊಳ್ಳಲಿರುವ ಸಂಬಂಧದ ಅಥವಾ ಶಿಶುವನ್ನು ಕೊಂದು ಚೆಲ್ಲ್ಯಾಳೆಂಬ ಸಂಭವವಿರುವ ಬಗ್ಗೆ ಮೂಕಿ ಅರ್ಜಿಯನ್ನು ಪೋಲೀಸರಿಗೆ ಕೊಡಲಿಕ್ಕೆ ಅದು ತಪ್ಪಲಿಕ್ಕಿಲ್ಲ; ಮತ್ತು ಪೋಲೀಸರ ಕಾಟವು ಒಮ್ಮೆ ಬೆನ್ನಿಗೆ ಹತ್ತಿತೆಂದರೆ ಮನುಷ್ಯನಿಗೆ ಎತ್ತ ಹೋಗಲಿ-ಎತ್ತಬಿಡಲಿ ಎಂಬಂತಾಗುತ್ತದೆ. ಮದ್ದು-ಮಾಟಗಳನ್ನು ಮಾಡಿಕೊಂಡು ಇಲ್ಲವೆ ಶಸ್ತ್ರಕ್ರಿಯೆಯಿಂದ ಗರ್ಭಪಾತಗೊಳಿಸುವ ಇಲ್ಲವೆ ಸ್ವಂತದ ಬಿಡುಗಡೆ ಮಾಡಿಕೊಳ್ಳುವ ಯಾವ ವ್ಯವಸ್ಥೆಯನ್ನೂ ಅವಳಿಗೆ ಮಾಡಲಿಕ್ಕಾಗುವದಿಲ್ಲ. ಅವಳ ಸಂಬಂಧದ ಚರ್ಚೆಯು ಎಲ್ಲ ಕಡೆಗೂ ಆಗ ಹತ್ತಿತೆಂದರೆ, ಗರ್ಭಪಾತದ ಬಗ್ಗೆ ಗುಪ್ತರೀತಿಯಿಂದ ಔಷಧಕೊಡುವ ವೈದ್ಯರು ಇಲ್ಲವೆ ಶಸ್ತ್ರಕ್ರಿಯೆ ಮಾಡುವ ಡಾಕ್ಟರರು ಅವಳಿಗೆ ಸಹಾಯ ಮಾಡಲಿಕ್ಕೆ ಸಿದ್ಧರಾಗುವದಿಲ್ಲ. ಶ್ರೀಮಂತ ಜನರಲ್ಲಾದ ಇಂಥ ಪ್ರಕಾರಗಳು ಹೆಚ್ಚಾಗಿ ಬಹಿರಂಗವಾಗುವದಿಲ್ಲ. ಅವರ ಹುಡುಗೆಯರ ಹೊಟ್ಟೆಯೊಳಗಿನ ಆ ರೋಗದ ಆಪರೇಶನ್ನು ಆಗಲೆ ಆಗುತ್ತದೆ. ಇಲ್ಲದಿದ್ದರೆ ಅವಳು ಯಾವನೊಬ್ಬ ದೂರದಲ್ಲಿರುವ ಆಪ್ತೇಷ್ಟನ ಕಡೆಗೆ ಹೋಗಿ ನಾಲ್ಕಾರು ತಿಂಗಳ ನಂತರ ಹವೆ ಬದಲಿಸಿಕೊಂಡಾದರೂ ಬರುತ್ತಾಳೆ.

ನಿಜವಾಗಿ ನೋಡಿದರೆ ಸಮಾಜವು ಹೀಗೆ ಮೋಸಗೊಂಡ ಕುಮಾರಿಕೆಯರ ಬಗ್ಗೆ ಹೆಚ್ಚು ಸಹಾನುಭೂತಿಯಿಂದ ನಿರೀಕ್ಷಿಸಬೇಕು. ಅವಿವಾಹಿತ ಮಾತೆಯರೇನು ಹುಟ್ಟಾಕುಲಟೆಯರಲ್ಲ; ಇಲ್ಲವೆ ವೇಶ್ಯೆಯರೂ ಅಲ್ಲ. ಅವರಾ

ದರೂ ಸರ್ವಸಾಧಾರಣ ಮನುಷ್ಯರಷ್ಟೇ ಸಾತ್ವಿಕರೂ ಸುಜನರೂ ಆಗಿರುತ್ತಾರೆ. ಅವರಿಂದ ಯಾವುದಾದರೂ ತಪ್ಪಾಗಿದ್ದರೆ ಅದು ಹೆಚ್ಚು ನಂಬಿಗೆ ಇಟ್ಟದ್ದು ಇಲ್ಲವೆ ಪೇಚು-ಪ್ರಸಂಗಗಳೊಳಗಿಂದ ಕೂಡಲೆ ಪಾರಾಗದಿದ್ದದ್ದು; ಆದರೆ ಅವಳ ಈ ಕ್ಷುಲ್ಲಕ ತಪ್ಪಿಗಾಗಿ ಅವಳಿಗೆ ಶಾಸನವಾದರೂ ಎಷ್ಟಾಗಬೇಕೆಂಬ ಬಗ್ಗೆ ಏನಾದರೂ ಮರ್ಯಾದೆ ಬೇಕೇಬೇಕು. ಅವರನ್ನಿಂದು ಸಮಾಜದೊಳಗಿಂದ ಕಾಯಮವಾಗಿ ಹೊರದೂಡುವದು ಇಲ್ಲವೆ ಆತ್ಮಹತ್ಯೆ ಮಾಡಿಕೊಳ್ಳಲಿಕ್ಕೆ ಹಚ್ಚುವದು ಇಂಥ ಶಿಕ್ಷೆಯು ಅವರ ಆ ಅಪರಾಧದ ಮಾನದಿಂದ ತೀರ ಕಠಿಣ ಹಾಗು ಮಿತಿಮೀರಿದ್ದೆಂದು ತಿಳಿಯಬೇಕು. ದುರಾಚಾರೀ ಮನುಷ್ಯರನ್ನು ಸಮಾಜದೊಳಗಿಂದ ಹೊರದೂಡಲೇಬೇಕು; ಆದರೆ ಅವಿವಾಹಿತ ಮಾತೆಯರೆಲ್ಲರೂ ದುರಾಚಾರಿಗಳಾಗಿರುವದಿಲ್ಲ. ಅವರಿಂದಾದ ತಪ್ಪನ್ನು ಸಮಾಜವು ಮರೆಯಲು ಶಕ್ಯವಾದರೆ ಅವರು ತಮ್ಮ ಇತರ ಭಗಿನಿಯರಂತೆ ಸುಖದ ಸಂಸಾರಗಳನ್ನು ಮಂಡಿಸಬಲ್ಲರು. ಯಾರ ಬಗ್ಗೆ ಬೊಬ್ಬಾಟವಾಗಿಲ್ಲವೋ ಅವರು ಸಂಸಾರ ಹೂಡಿಕೊಂಡು ಮಾನ-ಮನ್ನಣೆಯಿಂದ ಹಾಗು ಆನಂದದಿಂದ ಕಾಲಕ್ರಮಿಸುತ್ತಲೇ ಇರುವರು. ಅವರು ಸಮಾಜಕ್ಕೆ ಹಲವು ಬಗೆಯಿಂದ ಉಪಯುಕ್ತರಾದಾರು; ಆಗೇ ಆಗುವರು ಸಮಾಜದೊಳಗಿನ ಮನುಷ್ಯಬಲವನ್ನು ಒಂದಿಲ್ಲೊಂದು ಬಗೆಯಿಂದ ರಕ್ಷಿಸಿಡಬೇಕು; ಮತ್ತು ಕೇವಲ ಕೆಲವು ಕ್ಷುಲ್ಲಕ ತಪ್ಪಿಗಾಗಿ ಶಿಕ್ಷೆಯೆಂದು ನಾವು ಚಲೋ ಜನರನ್ನು ಸಮಾಜದಿಂದ ಹೊರದೂಡಹತ್ತಿದರೆ ನಮ್ಮ ಮನುಷ್ಯ ಬಲವು ಕ್ಷೀಣವಾದೀತು.

ಅನಾಥಾಶ್ರಮಗಳು ಅಲ್ಲಲ್ಲಿ ತೆರೆಯಲ್ಪಡುತ್ತಿರುವವು. ಅವು ವಿಧವೆಯರ ಹಾಗು ಕುಮಾರಿಕೆಯರ ಹೆರಿಗೆಗಳನ್ನು ಗುಪ್ತರೀತಿಯಿಂದ ಮಾಡಹತ್ತಿವೆ. ಅವರಧೀನ ಪ್ರಜೆಯನ್ನು ಪಾಲನ ಪೋಷಿಸುವ ಮಹತ್ಕಾರ್ಯವನ್ನು ಮಾಡುತ್ತಲಿವೆ. ಇಂಥ ಪ್ರಸಂಗದಲ್ಲಿ ಯಾವ ದುರ್ದೈವೀ ಕುಟುಂಬದ ಮೇಲೆ ಅವಿವಾಹಿತ ತಾಯ್ತನದ ದುರ್ಧರ ಪ್ರಸಂಗ ಒದಗುವದೋ ಅವರು ಗಾಬರಿ ಪಡುವ ಕಾರಣವೇ ಇಲ್ಲ. ಆ ಸಂಗತಿಯು ಹಲ ಕೆಲವರ ಕಿವಿಗಳಿಗೆ ಮುಟ್ಟುವ ಮೊದಲೇ ಅವಳನ್ನು ಆ ಆಶ್ರಮಗಳಿಗೆ ಕಳಿಸಿ, ಅವಳ ಆ ಗ್ರಹಣವು ಬಿಟ್ಟಿತೆಂದರೆ ತಿರುಗಿ ಕರೆತರಬೇಕೆಂಬ ಅಲ್ಪ ಜಾಣತನದಿಂದಲೂ ಧೈರ್ಯದಿಂದಲೂ ವರ್ತಿಸಿದರೆ, ಆ ದುರ್ದೈವೀ ಕುಮಾರಿಕೆಯು ಆ ಪ್ರಾಣಸಂಕಟದೊಳಗಿಂದ ಬದುಕಬಹುದಾಗಿದೆ. ಸಮಾಜದೊಳಗಿಂದ ಹೊರದೂಡಲ್ಪಡಲಿರುವ ಆ ಬಡ

ವೆಯು ಮತ್ತು ಪ್ರಪಂಚದಲ್ಲಿ ಬಂದು ಕೂತ್ರುಲಿರುವಳು.

ಕುಮಾರಿಕೆಯರ ಬಗ್ಗೆ ಮೇಲೆ ವಿವರಿಸಿದ ವಿವೇಚನವು ವಿಧವೆಯರಿಗಾದರೂ ಸಂಪೂರ್ಣವಾಗಿ ಉಪಯುಕ್ತವಾಗತಕ್ಕದ್ದಿದೆ. ಅವಿವಾಹಿತ ತಾಯ್ತನದ ಅರ್ಥವು ಲಗ್ನದ ಗಂಡನಿರದಾಗ ಸಂಭವಿಸಿದ ತಾಯ್ತನವೇ ಸರಿ. ಪುನರ್ವಿವಾಹದ ಕಡೆಗೆ ಸಮಾಜವು ಇನ್ನೂ ತಿರುವು ಮುಖವನ್ನೇ ಮಾಡುತ್ತಿದೆ; ಮತ್ತು ವಿಧವೆಯರಿಗಾಗುವ ಆತಂಕದಿಂದ ಅವರನ್ನು ಒಮ್ಮೊಮ್ಮೆ ಮೋಹದಿಂದ ಅಥವಾ ಸಂಕಟದಿಂದ ಅವಿವಾಹಿತ ತಾಯ್ತನದ ಆಪತ್ತಿಗೊಯ್ಯು ಮುಟ್ಟಿಸುತ್ತದೆ.

ಅವಿವಾಹಿತ ತಾಯ್ತನವಿದು ಸಮಾಜಕ್ಕೊಂದು ಲಾಂಛನವೇ ಸರಿ. ಯಾವ ಸಮಾಜದೊಳಗಿನ ಗಂಡಸರು ವಿಶ್ವಾಸಘಾತ ಮಾಡಲು ಶಕ್ತರಾಗುವರೋ, ಬಲವಂತ ಮಾಡಲು ಶಕ್ತರಾಗ ವರೋ ಹಾಗು ಸಮಾಜವು ಹಾಗೆ ಮೋಸಗೊಂಡ ಸ್ತ್ರೀಯೊಡನೆ ಅವರಿಗೆ ಲಗ್ನವಾಗಲು ಒತ್ತಾಯ ಮಾಡಲಿಕ್ಕೆ ಶಕ್ತವಾಗುವದಿಲ್ಲವೋ ಇವೆಲ್ಲ ಅದರ ಹಿಂಬದಿಯಲ್ಲಡಗಿರುವ ಸಂಗತಿಗಳು ಅಷ್ಟೇ ನಾಚಿಕೆಗೇಡಾಗಿರುತ್ತವೆ. ಅವಿವಾಹಿತ ಮಾತೆಯರನ್ನು ಸಮಾಜದಿಂದ ಬೇರ್ಪಡಿಸುವದೆಂದರೆ, ಕೊಲೆಗಾರನನ್ನು ಗಲ್ಲಿಗೇರಿಸದೆ, ಸತ್ತವನನ್ನೇ ಮತ್ತೆ ಗಲ್ಲಿಗೇರಿಸುವಷ್ಟೇ ರೊಚ್ಚಿಗೆಬ್ಬಿಸುವ ದುಷ್ಕೃತ್ಯವಾಗಿದೆ.

---

## ಉಪೇಕ್ಷಿತವಾದ ಒಂದು ಸುಧಾರಣೆ :: ೫

ಅವಶ್ಯವಿದ್ದ ಯಾವ ಸುಧಾರಣೆಗಳು ಕೇವಲ ಉಪೇಕ್ಷೆಯಿಂದ ಹಿಂದುಳಿದಿವೆಯೋ ಅವುಗಳಲ್ಲಿ ವಿಧವಾವಿವಾಹವೆಂಬ ಸುಧಾರಣೆಯು ಒಂದಾಗಿದೆ. ಅವಶ್ಯವೆಂಬುದು ಖಾತ್ರಿಯಾದ ಹಾಗು ಜನರ ಮನಸ್ಸಿಗಿನ್ನೂ ಬಾರದಂತಹ ಇಂಥ ಹಟದ ಬಾಬು ಇನ್ನಾವುದೂ ಇಲ್ಲ. ಮುಂಚಿನ ಧರ್ಮಮಾರ್ತಂಡರೆಲ್ಲ ಗತಿಸಿದರು; ಅವರೊಡನೆಯೇ ಅಯೋಗ್ಯ ಹಾಗು ನಿಷ್ಠುರವಾದ ವಿರೋಧವೂ ಹೋಯಿತು. ಇಂದಿನ ಧರ್ಮಮಾರ್ತಂಡರು ಇಂಗ್ಲಿಷರ ಪ್ರಾರಂಭ ಕಾಲದೊಳಗಿನ ನಿಗರಗಟ್ಟಿ ಸುಧಾರಕರ ಭಾಷೆಯನ್ನಾಡಹತ್ತಿರುತ್ತಾರೆ. ಪುನರ್ವಿವಾಹವು ಆವಶ್ಯಕವೆಂಬುದು ಸರ್ವಮಾನ್ಯ ಸಂಗತಿಯಾಗಿದೆ. ಅದಕ್ಕೆ ಯಾರ ವಿರೋಧವೂ ಇಲ್ಲದಿರುವಾಗ, ಆ ಸುಧಾರಣೆಯು ಇನ್ನೂ ಜನರಲ್ಲಿ ರೂಢವೇಕಾಗಿಲ್ಲವೆಂಬುದರ ಕಾರಣಗಳನ್ನು ಹುಡುಕಿ ತೆಗೆಯಬೇಕು. ವಿಚಾರ

ಗಳಿಗೆ ಔದಾರ್ಯವು ಲಭಿಸಿತು; ಅವು ಬಹು ದೂರದ ಹಾರಿಕೆ ಹಾರಿದವು; ಆದರೆ ಸಮಾಜವೇನೂ ಅವುಗಳ ಹಿಂದಿಂದೆ ಹಾರಿಕೊಳ್ಳುವದಿಲ್ಲೆಂಬ ಸಂಗತಿಯು ನಿಜವಿದ್ದರೂ ಅಭಿನಂದನೀಯವಲ್ಲೆಂಬದು ಮಾತ್ರ ಖಂಡಿತವು.

ಪುನರ್ವಿವಾಹ ಮತ್ತು ಪ್ರೌಢವಿವಾಹ ಇವೆರಡೂ ಸುಧಾರಣೆಗಳ ಸಸಿಗಳು ಒಂದೇಕಾಲಕ್ಕೆ ಅಕ್ಕಪಕ್ಕದಲ್ಲಿ ನೆಡಲ್ಪಟ್ಟವು. ಅವುಗಳೊಳಗಿನ ಪ್ರೌಢವಿವಾಹದ ಸಸಿಯು ಚೆನ್ನಾಗಿ ಎದ್ದಿತು. ಸಾರಡಾ ಕಾಯಿದೆಯು ಅದಕ್ಕೆ ಗೊಬ್ಬರ-ನೀರುಗಳನ್ನು ಹಾಕಿ ಶಿಕ್ಷೆಯ ಮುಳ್ಳುಬೇಲಿಯನ್ನೂ ಹಚ್ಚಿ, ಅದನ್ನು ಕೊಬ್ಬಿ ಬೆಳಿಸಲಿಕ್ಕೆ ನೆರವಾಯಿತು; ಮತ್ತು ಅದೇ ಸಸಿಯ ನೆಳಲಿನಿಂದ ಪುನರ್ವಿವಾಹದ ಸಸಿಯು ಇಂದಿಗೆ ಕ್ಷೀಣವಾದಂತೆ ಕಾಣಿಸುತ್ತದೆ. ಬಾಲವಿವಾಹದ ಕಾಯಿದೆಯಿಂದ ವಿಧವೆಯರ ಸಂಖ್ಯೆಯು ಹೇಗೆ ಮಿತಿಮೀರಿದ್ದಿತೋ, ಅದರಂತೆಯೇ ವಯಸ್ಸಾದ ಕುಮಾರಿಕೆಯರು ಆ ಕಾಲಕ್ಕೆ ತೀರ ದುರ್ಮಿಳರಾಗಿದ್ದರು. ಬಾಲವಿವಾಹಗಳು ಕಟ್ಟಾದವು, ವಿಧವೆಯರ ಸಂಖ್ಯೆಯು ಕುಗ್ಗಿತು; ಇದೆಲ್ಲ ನಿಜ; ಆದರೆ ಪುನರ್ವಿವಾಹದ ಸಮಸ್ಯೆಯು ಮಾತ್ರ ಅದರಿಂದ ಬಹಳೇ ಹಿಂದೆ ಬಿದ್ದಿತು. ಮಧ್ಯಮ ವಯಸ್ಸಿನ ಗೃಹಸ್ಥನ ಮೊದಲ ಹೆಂಡತಿ ಗತಿಸಿದರೆ ಅವನಿಗೆ ತನ್ನ ಮೃತಪತ್ನಿಯ ವಯಸ್ಸಿನ ಹಾಗು ಸು-ಶಿಕ್ಷಿತೆಯಾದ ಕುಮಾರಿಕೆ ದೊರೆಯುತ್ತಿದ್ದರೆ ಆತನು ವಿಧವೆಯರ ಕಡೆಗೆ ಹಣಿಕಿ ಸಹ ಹಾಕುತ್ತಿರಲಿಲ್ಲ! ಒಂದು ಬಗೆಯಿಂದ ಪುನರ್ವಿವಾಹದ ನಿಜವಾದ ಹಿತಶತ್ರುಗಳು ಅದಾರಾದರೂ ಇದ್ದರೆ, ಅವರೇ ಉಪವರರಾದ ಕುಮಾರಿಕೆಯರು ಇಲ್ಲವೆ ಪ್ರೌಢ ಕುಮಾರಿಕೆಯರು!

ಆರ್ಥಿಕ ಪರಿಸ್ಥಿತಿಯು ಪುನರ್ವಿವಾಹಕ್ಕೆ ನೆರವಾಗುವುದರ ಬದಲು ವಿರೋಧವನ್ನೇ ಮಾಡುತ್ತದೆ. ಅದು ಹೇಗೆಂದರೆ, ಇಂದಿನ ವಿಧವೆಯು ಹೆಚ್ಚೆಂದರೆ ಇಂಗ್ಲಿಷ ೫-೬ ಇಯತ್ತೆಯ ವರೆಗೆ ಕಲಿತವಳಿರುತ್ತಾಳೆ. ಆಮೇಲೆ ಮುಂದೆ ಕಲಿಯುವಳು; ಹಾಗು ನರ್ಸ, ಸ್ಕೂಲಮಿಸ್ಟ್ರೆಸ್ ಇಲ್ಲವೆ ಡಾಕ್ಟರಿಣಿಯಾಗುತ್ತಾಳೆ. ಸ್ವಂತದ ಹೊಟ್ಟೆಯನ್ನು ಹೊರೆಯಹತ್ತುತ್ತಾಳೆ; ಮತ್ತು ಯಾವ ಹೆಂಗಸಿಗೆ ಸ್ವಂತದ ಯೋಗ್ಯತೆಯಿಂದ ತನ್ನ ಹೊಟ್ಟೆ ತುಂಬುವ ಚಟವು ಒಮ್ಮೆ ಹತ್ತಿರುವದೋ, ಅವಳಿಗೆ ತನ್ನ ಸ್ವಾತಂತ್ರ್ಯ ಕಳೆದುಕೊಳ್ಳುವದು ಜೀವಕ್ಕೆ ಬರುತ್ತದೆ. ಮನಸ್ಸಿನಲ್ಲಿ ಇಚ್ಛೆಯಿದ್ದರೂ ಲಗ್ನವಾಗಿ ಗಂಡನ ಆಧೀನಳಾಗಲಿಕ್ಕೆ ಅವಳು ಸಿದ್ಧಳಾಗುವುದಿಲ್ಲ. ಪುನರ್ವಿವಾಹವಾದ ಬಗ್ಗೆ

ಜನರ ತಪ್ಪು ತಿಳುವಳಿಕೆ ಮತ್ತು ಹೆಂಗಸರ ಸಾಮಾಜಿಕ ಬಹಿಷ್ಕಾರ ಇವು ಗಳನ್ನು ವಿಧವೆಯು ಸಹಿಸಬೇಕಾಗುತ್ತದೆ. ಇಂಥ ಕಾಟವಾಗದಿರಲಿಕ್ಕೆ ದುಡ್ಡಿನ ಸುಸ್ಥಿತಿಯಿರಬೇಕಾಗುತ್ತದೆ. ನೂರುಗಟ್ಲೆ ಸಂಬಳ ದೊರಕಿಸುವ ಗಂಡಸರು ತಮ್ಮ ಸಮಾಜವನ್ನು ಬೇರೆಯೇ ಏರ್ಪಡಿಸುತ್ತಾರೆ. ಇಂಥವ ರಿಗೆ ಬೇರೆ ಸಮಾಜದವರ ಬಗ್ಗೆ ಪರಿವೆಯೇ ಇರುವದಿಲ್ಲ. ಅದರಿಂದ ಅವರು ಪುನರ್ವಿವಾಹ ಮಾಡಿಕೊಂಡರೆ ಅವರಿಗಾಗಲಿ ಅವರ ಹೆಂಡತಿಗಾಗಲಿ ಸಾಮಾ ಜಿಕ ತೊಂದರೆಗೆಳುಂಟಾಗುವದಿಲ್ಲ. ಆರ್ಥಿಕ ಪರಿಸ್ಥಿತಿಯು ಮೂಲಕ ಇಂದಿ ಗೂ ಪುನರ್ವಿವಾಹದ ಬಾಬು ಬಡವರ ಅಳವಿನ ಹೊರಗಿನದಾಗಿದೆ. ಗಳಿಸು ವಂತಹ ವಿಧವೆಯರು ಇಂಥ ಬಡ ಗಂಡಸಿನೊಡನೆ ಲಗ್ನವಾಗಲಿಕ್ಕೆ ಸಿದ್ಧ ರಾಗುವದಿಲ್ಲ. ನರ್ಸ ಇಲ್ಲವೆ ಮಿಸ್ಟ್ರೆಸ್ಸೆಂದು ಅವರ ಯಾವ ಮಾನವ ದರ್ಜೆಯು ಈಗ ಜನರಲ್ಲಿರುವುದೋ ಅದನ್ನು ಕಳೆದುಕೊಳ್ಳಲಿಕ್ಕೆ ಅವರು ಸಿದ್ಧ ರಿರುವದಿಲ್ಲ; ಮತ್ತು ಒಂದುವೇಳೆ ಸಿದ್ಧರಾಗುವುದಾದರೂ ಮಾನ-ಧನಗಳ, ವೈಭವಗಳ ದಾನದೊರೆಯುತಕ್ಕ ಆಶೆಗಾಗಿಯೇ!

ಹಿರಿಯರ ಸಹಾನುಭೂತಿಯು ಎಷ್ಟು ಅವಶ್ಯವೋ ಅಷ್ಟು ಲಭಿಸದ್ದ ರಿಂದ ಚಿಕ್ಕ-ಚಿಕ್ಕ ಬಾಲಿಕೆಯರೂ ಕೂಡ ವೈಧವ್ಯ ದುಃಖದಲ್ಲಿ ಇಡೀ ಆಯುಷ್ಯ ವನ್ನು ಬೊಬ್ಬಾಟವಿಲ್ಲದಂತೆ ಕ್ರಮಿಸುತ್ತಿರುತ್ತಾರೆ. ಮಗಳು ಇಲ್ಲವೆ ಸೊಸೆಯು ಪುನರ್ವಿವಾಹ ಮಾಡಿಕೊಂಡರೆ ಅಡ್ಡಿಯಿಲ್ಲವೆಂದು ಮೋರೆಯ ಮಟ್ಟಿಗೆ ಅನ್ನುತ್ತಿರುವ ಮನುಷ್ಯರ ಉದ್ಗಾರಗಳಲ್ಲೇ ಪುನರ್ವಿವಾಹ ಮಾಡದಿರುವದೇ ವಿಹಿತವೆಂಬ ಬೇರೆ ಧ್ವನಿಯು ಹೊರಡುತ್ತಿರುತ್ತದೆ. ಹಿರಿಯರು ಪ್ರಯತ್ನ ಪಟ್ಟು ಮಕ್ಕಳು-ಸೊಸೆಯಂದಿರ ಪುನರ್ವಿವಾಹಗಳನ್ನು ಮಾಡಿಕೊಟ್ಟ ದಾಖಲೆ ಗಳು ದೊರೆಯುವದಿಲ್ಲವೆಂಬ ಮಾತು ಈ ವಿಷಯದಲ್ಲಿ ಸಾಕ್ಷಿ ಕೊಡಲಿಕ್ಕೆ ಸಾಕಾಗಿದೆ. ಹಿರಿಯರು ಸಾಮಾಜಿಕ ಪ್ರತಿಷ್ಠೆಯನ್ನು ಕಾಯ್ದುಕೊಳ್ಳುವ ಬಗ್ಗೆ ಹೆಚ್ಚು ದಕ್ಷರಿರುತ್ತಾರೆ; ಮತ್ತು ಹಣೆ ಹಣೆ ಬಡಕೊಳ್ಳುತ್ತ ಕಣ್ಣೀರು ಸುರಿಸುತ್ತ ಕಾಲ ಕ್ರಮಣ ಮಾಡುತ್ತಿರುವ ಹಿರಿಯಕ್ಕಂದಿರ ಬಾ ಯಿಂದ ಹೊರಡುವ ಹೆಂಗಸರ ಪುರಾಣವು ಅವಳ ಕಿವಿಗೆ ಒಂದೇಸವನೆ ಅಪ್ಪಳಿಸುತ್ತಿರುತ್ತದೆ ಹಿರಿಯ ಜನರು ಉದಾಸೀನರಷ್ಟೇ ಅಲ್ಲ, ಪ್ರತ್ಯಕ್ಷ ಅಥವಾ ಅಪ್ರತ್ಯಕ್ಷ ರೀತಿಯಿಂದ ವಿರೋಧಿಸುವವರು ತರುಣರ ದೃಷ್ಟಿಯೂ ಅವಳ ಕಡೆಗೆ ತಿರುಗುವದಿಲ್ಲ. ಇಂಥ ಸ್ಥಿತಿಗೆ ಮುಟ್ಟಿರುವ ಇಂದಿನ ವಿಧವೆಯು ದಿಟ್ಟ

ತನದಿಂದ ಸ್ವಂತದ ಪುನರ್ವಿವಾಹ ಮಾಡಿಕೊಂಡಾಳೆಂಬ ಆಶೆ ಹಿಡಿಯುವದು ವ್ಯರ್ಥವೇ ಸರಿ. ಸದ್ಯಕ್ಕೆ ಪ್ರತಿಯೊಬ್ಬ ವಿಧವೆಯು ತೀರ ಏಕಾಂತದಲ್ಲಿ ಪುನರ್ವಿವಾಹ ಮಾಡಿಕೊಳ್ಳಬೇಕೆಂದು ದೃಢವಾಗಿ ಯೋಚಿಸುತ್ತಿರಬಹುದಾದರೂ ಆ ಯೋಜನೆಯನ್ನು ಅನುಲಿನಲ್ಲಿ ತರುವುದೆಂದರೆ ಆಪ್ತ-ಸ್ವಕೀಯರ ಆಧಾರವನ್ನು ಸ್ವಂತದ ಕೈಯಿಂದ ಕತ್ತರಿಸಿ ಚೆಲ್ಲುವಂತೆಯೇ ಎಂಬ ದೃಶ್ಯವು ಎಲ್ಲಿಯವರೆಗೆ ವಿಧವೆಯ ಕಣ್ಣೆದುರಿಗಿರುವುದೋ, ಅಲ್ಲಿಯವರೆಗೆ ಅವಳಿಂದ ಯಾವ ಕೆಲಸವೂ ಧೈರ್ಯದಿಂದಾಗುವುದು ಶಕ್ಯವಿರುವುದಿಲ್ಲ. ಸದ್ವಿಚಾರಗಳನ್ನು ಹತ್ತೋತ್ತಿಕ್ಕಿದರೂ, ಅವುಗಳೊಡನೆ ನುರೆವಾಜದಂತೆ ಹಾಗು ತಲೆಯೆತ್ತಿಕೊಂಡು ಯಾವ ಭಾವನೆಗಳು ಉಂಟಾಗುತ್ತಿರುದವೋ ಆ ಭಾವನೆಗಳಿಗೆ ಕಾಲ್ಪನಿಕ ಭೀತಿಯು ಒಡ್ಡು ಹಾಕಿದರೂ ಅವುಗಳ ನಿರೋಧನವು ಆಗುವದಷ್ಟೇ ಇದೆ! ಸೆದೆ-ಸೊಪ್ಪಿನ ಆ ಒಡ್ಡು ಒಡೆಯುವ ಎದೆಗಾರಿಕೆಯು ಯಾವಳ ಭಾವನೆಯಲ್ಲಿರುವದೋ ಅವಳು ಬರಬರುತ್ತ ಲೋಕನಿಂದೆಯ ಪರಿವೆ ಮಾಡದಾಗುತ್ತಿರುವಳೇನೋ ನಿಜ, ಆದರೆ ಪುನರ್ವಿವಾಹ ನೆರವೇರುವ ಹಂಚಿಕೆಯು ಒಮ್ಮೆ ಕೆಟ್ಟಿತೆಂದರೆ ಅದು ನಿರಂತರದ್ದೇ ಸರಿ ಎಲ್ಲಿ ಭಾವನೆಗಳು ಪ್ರಬಲವಾಗಿರುವುದಿಲ್ಲವೋ ಅಲ್ಲಿಯೂ ಅವು ಅಡ್ಡದಾರಿಯಿಂದ ಮತ್ತು ಸಂದಿ ಮೂಲೆಗಳೊಳಗಿಂದ ಜಿಸಿಯುಹತ್ತುತ್ತವೆ, ಹಾಗು ಬೇಡಾದ ಸ್ಥಳದಲ್ಲಿ ಒಡ್ಡು ಒಡೆದು ಆ ಭಾವನೆಗಳು ಒತ್ತರದಿಂದ ಹರಿಯಹತ್ತಿದವೆಂದರೆ ಆ ಮೇಲೆ ಇಂಥ ಸ್ವೈರಿಣಿಗೆ ಪುನರ್ವಿವಾಹವು ನಿರಂತರವೇ ವಿಮುಖವಾಗುವುದು. ಪುನರ್ವಿವಾಹಬೇಡ ಇಲ್ಲವೆ ನಾನು ಮಾಡಿಕೊಳ್ಳಲಿಕ್ಕಿಲ್ಲ ಹೀಗೆನ್ನುವವರೇ ಏಕೆ, ಪ್ರೌಢ ಸ್ತ್ರೀಯರೊಳಗೆ ಕುರಿತು ಅಂಥವರನ್ನು ಚೇಷ್ಟೆ ಮಾಡುವ ಬಾಲವಿಧವೆಯರೂ ಮನಸ್ಸಿನಲ್ಲಿ ಚೆನ್ನಾಗಿ ತಿಳಿದಿರಬೇಕೇನೆಂದರೆ, ವಿಕಾರಗಳ ಮೇಲಿನ ವಿಚಾರದ ಅಧಿಕಾರವು ಕೆಲವೊಂದು ವೇಳೆ ಅಲ್ಪಕಾಲದ ಮಟ್ಟಿಗೆ ಮಾತ್ರ ನಡೆಯುತ್ತದೆ. ವಿಕಾರಗಳನ್ನು ಹತ್ತಿಕ್ಕಿ ಬಿಟ್ಟರೂ, ಅವು ಉಕ್ಕೇರಿ ಹಾಗು ತಮ್ಮ ತೆರೆಗಳೊಡನೆ ಅವಳನ್ನು ತೇಲಿಸಿಕೊಂಡು ಹೋದವು. ಎಂಬಂತಾಗಬಾರದು ಮಾನವೀ ಪ್ರಕೃತಿಯಲ್ಲಿ ಯಾವ ಗುಣಧರ್ಮಗಳಿರುವವೋ ಅವುಗಳನ್ನು ನಿರೋಧಿಸುವದು ಕಠಿಣವಿದೆ. ಒಂದುವೇಳೆ ನಿರೋಧ ಮಾಡಿದರೂ ಯಾವುದಕ್ಕಾಗಿ ಭಾವನೆಗಳ ನಿಕರದ ಉಪವಾಸಗಳು ಆಮರಣಪರ್ಯಂತ ಮಾಡುವ ವ್ರತವನ್ನು ಅವರು ಮಾಡಬೇಕೋ ಅದರ ದಿವ್ಯವೇನು ಅವರಿಗೆ

ಲಭಿಸುವದು? ಪುನರ್ಜನ್ಮದ ಮೇಲೆ ನಂಬಿಗೆಯಿಟ್ಟರೂ ಇಂದಿನ ವಿಧವೆಯು ಅಷ್ಟು ಭೋಳೀಭಾವಿಕಳಿದ್ದರಿಂದ ಮೃತಪತಿಯು ತನ್ನ ಪುನರ್ವಿವಾಹದಿಂದ ರೌರವ ನರಕಕ್ಕೆ ಹೋಗುವನೆಂದು ಪ್ರಾಮಾಣಿಕವಾಗಿ ಮನ್ನಿಸಲಾರಳು. ಕೇವಲ ನೆರೆಹೊರೆಯವರಿಗೆ ರಚಿಸಲಿಕ್ಕಿಲ್ಲೆಂದು ಸ್ವಂತದ ಸುಖವನ್ನು ಸುಟ್ಟು ಸೂರೆಗೊಳ್ಳಲಿಕ್ಕೂ, ಅನೇಕ ಬಗೆಯ ಕ್ಷುಧೆಗಳನ್ನು ನಿವಾರಿಸಿಕೊಳ್ಳದಿರಲಿಕ್ಕೂ ಅವರು ತತ್ಪರರಾದರೆ ಅದು ಅವರ ಮೂರ್ಖತನವಲ್ಲದೆ ಇನ್ನೇನು?

ಆರ್ಥಿಕ ಸ್ವಾತಂತ್ರ್ಯದ ಸಾಧನಗಳು ಮತ್ತು ಸಂತತಿನಿಯಮನದ ನಿರ್ಧಾಸ್ತ ಸಾಧನಗಳು ಇವು ಎಂತೆಂತು ಸ್ತ್ರೀಯರ ಹಸ್ತಗತವಾಗಹತ್ತಿರುವವೋ ಅಂತಂತೇ ಅವರ ಪುನರ್ವಿವಾಹದ ಒತ್ತರವೂ ಕಡಿಮೆಯಾಗಹತ್ತಿದೆ. ಇದರ ಅರ್ಥವು ಪುನರ್ವಿವಾಹ ಮಾಡದ ವಿಧವೆಯರೆಲ್ಲರೂ ದುರಾಚಾರಿಗಳಿರುತ್ತಾರೆಂತಲ್ಲ. ಲೋಕಮತದ ಭಾರದ ಕೆಳಗೆ ಜಿಬ್ಬಿಯಾಗಿ ಹೋದ್ದರಿಂದ ವಿಚಾರವಷ್ಟೇ ಏಕೆ, ವ್ಯಕ್ತಿತ್ವವೂ ಕೂಡ ನಷ್ಟವಾದ ಇಲ್ಲವೆ ಸಂಸಾರ ಸುಖದ ಕಾವು ತಿಳಿದು ಆ ಬಗ್ಗೆ ಬೇಜಾರುಗೊಂಡ ವಿಧವೆಯರ ಗುಂಪನ್ನು ಬಿಟ್ಟುಬಿಟ್ಟರೂ ಕೂಡ ಮನಸ್ಸಿನಲ್ಲಿ ಶರೀರ ಸುಖದ ಕಡೆಗೆ ಯಾರ ಒಲವಿದೆಯೋ ಅವರುಗಳು ಒಂದಿಲ್ಲೊಂದು ತೆರನಾಗಿ ಅದನ್ನು ದೊರಕಿಸಿಯೇ ಬಿಡುವರು; ಹಾಗು ಮೇಲೆ ನಿರ್ದೇಶಿಸದ ಸಾಧನಗಳು ಹೀಗೆ ಕದ್ದು ಮಾಡಿದ ಹಾದರಗಳನ್ನು ಬೈಲಿಗೆ ಬರಗೊಡುವದಿಲ್ಲ ಆ ಸಾಧನಗಳ ಬಲದಿಂದ ಕುಮಾರಿಕೆಯರೂ ಆಜನ್ಮ ಲಗ್ನವಾಗದೆ ಇರುತ್ತಿರುವ ಪ್ರಯತ್ನದಲ್ಲಿರುವರಷ್ಟೆ? ಅಂದಬಳಿಕ ಯಾವ ಪರಿಸ್ಥಿತಿಯು ಇಂದಿಗೆ ಅಸ್ತಿತ್ವದಲ್ಲಿದೆಯೋ ಅದನ್ನು ಉಲ್ಲೇಖಿಸದ ಹೊರತು ಗತ್ಯಂತರವಿಲ್ಲ.

ನಮ್ಮ ಪ್ರಪಂಚಗಳು ಬಹು ನೀರಸ, ಕಾಟ ಕೊಡುವ ಹಾಗು ಬೇಜಾರದವಾಗಿರುವದರಿಂದ ತಿಳುವಳಿಕೆಯುಳ್ಳ ಸ್ತ್ರೀಯರಿಗೆ ಲಗ್ನವಾಗಿ ಪ್ರಪಂಚ ಮಾಡುವಬಗ್ಗೆ ಹೆಚ್ಚಾದ ಆಕರ್ಷಕ ಉತ್ಸುಕತೆಯು ಉಳಿದಿರುವುದಿಲ್ಲ ಸಂಸಾರ ಸುಖದ ಬಗ್ಗೆ ಅತ್ಯಂತ ಕುತೂಹಲವುಳ್ಳ ಕುಮಾರಿಕೆಯರೂ ಸಪ್ತಪದಿಯ ಹೆಜ್ಜೆಗಳನ್ನು ತೀರ ನಿರುಪಾಯದಿಂದ, ಕೊಂಚ ನಿರಾಶೆಯಿಂದ ಹಾಗು ಹೆಚ್ಚಾದ ಅಂಜಿಕೆಯಿಂದಲೇ ಇಡುತ್ತಾರೆ. ಅಂದಬಳಿಕ ಪ್ರತ್ಯಕ್ಷ ವೈವಾಹಿಕ ಜೀವನದ ಕಹಿ ಅನುಭವದ ಝಳ ತಾಕಿಸಿಕೊಂಡ. ಬರೆ ಹತ್ತಿದ್ದ ವಿಧವೆಯರು ಮತ್ತೆ ಸಂಸಾರದಲ್ಲಿ ತೊಡಗಲಿಕ್ಕೆ ಮನಸ್ಸಿಲ್ಲದವರಾದರೆ ಆಶ್ಚರ್ಯವಲ್ಲ.

ಪುನರ್ವಿವಾಹದಿಂದ ಪರಾಙ್ಮುಖಗೊಳಿಸುವ ಆಪ್ತೇಷ್ಟರಾದರೂ ಧರ್ಮದ ಆಜ್ಞೆ, ನೀತಿಯ ಶ್ರೇಷ್ಠತ್ವ ಇಲ್ಲವೆ ತಮ್ಮ ಸ್ವಂತದ ಸಾಮಾಜಿಕ ಪ್ರತಿಷ್ಠೆ ಇವುಗಳನ್ನು ಕಾಯಲಿಕ್ಕೆಂದೇ ಹಾಗೆ ಉಪದೇಶಿಸುತ್ತಿರುವರೆಂದೆನ್ನುವದು ಅಷ್ಟು ನಿಜವಲ್ಲ. ದಾಸ-ದಾಸಿಯರ ಅಡಚಣೆಯಲ್ಲಿ ಮತ್ತು ವೃದ್ಧಿಂಗತ ಆರ್ಥಿಕ ದೈನ್ಯದ ಉರಿಯಲ್ಲಿ ಸಿಕ್ಕಂಥ ಇಂದಿನ ಬಿಳಿಛಾಯದ ವರ್ಗದೊಳಗಿನ ಕುಟುಂಬಗಳು ಕೇವಲ ಹೊಟ್ಟೆಯ ಪಾಡಿಗಾಗಿ ಇಪ್ಪತ್ನಾಲ್ಕು ತಾಸು ದುಡಿಯುವ ಹೆಂಗಸರು ದೊರೆಯುವ ಹಂಚಿಕೆಯ ಕಡೆಗೆ ಎಷ್ಟು ಆತುರತೆಯಿಂದ ನೋಡುತ್ತಿದ್ದಾರೆಂಬದನ್ನು ತಿಳಿಸಲವಶ್ಯವೇ ಇಲ್ಲ. ಅಂಥದರಲ್ಲಿ ಮನೆಯ ಯಜಮಾನನ ಹುಡುಗರು-ಹುಪ್ಪಡಿಗಳನ್ನು ಸಲಹುವದು, ಕುಟುಂಬದಲ್ಲಿ ಮೂಲೆಗುಂಪಾಗಿ ಬಿದ್ದುಕೊಂಡಿರುವವರ ಕೆಲಸ ಮಾಡುವದು ಮುಂತಾದ ಕಡು ತೊಂದರೆಯ ಕೆಲಸಗಳು ವಿಧವೆಯರ ಹೊರತು ಮತ್ತಿನ್ನಾರು ಮಾಡುವರು?

ಒಟ್ಟಿನಲ್ಲಿ ಸಾಮಾಜಿಕ ಪರಿಸ್ಥಿತಿ ಮತ್ತು ಸ್ವಂತ ವಿಧವೆಯರು ಇವುಗಳೆಲ್ಲ ಪುನರ್ವಿವಾಹದ ಕಾರ್ಯಕ್ರಮಕ್ಕೆ ಪರ್ಯಾಯದಿಂದ ವಿರೋಧ ಮಾಡತಕ್ಕವುಗಳೇ ಆಗಿವೆ; ಆದರೆ ಅದರಿಂದ ಸಾಧಿಸುವದಾದರೂ ಏನು? ಸಂಸಾರ ನೌಕೆಯನ್ನು ಒಳ್ಳೇ ಕೌಶಲ್ಯದಿಂದ ಮತ್ತು ಧೈರ್ಯದಿಂದ ಸಾಗಿಸುವ ಎಷ್ಟೋ ಮಂದಿ ಸುಗೃಹಿಣಿಯರು ವಿಧವೆಯರೊಳಗಿಂದ ಹೊರಟಾರು! ತೇಜಸ್ವೀ ಪ್ರಜೆಯನ್ನು ಹೆರುವ ಎಷ್ಟೋ ಜನ ಸುಮಾತೆಯರು ಅದರಿಂದ ಸಮಾಜಕ್ಕೆ ನಿರುಪಯುಕ್ತರಾಗುವರು! ಉದಾಸೀನದಿಂದ ಆಯುಃಕ್ರಮಣ ಮಾಡುವ ವ್ಯಕ್ತಿಯು ಅದೆಷ್ಟು ಮನಸ್ಸುಗೊಟ್ಟು ಲೋಕದ ವ್ಯವಹಾರವನ್ನು ನಿಕಟದಿಂದ ಹಾಗು ಉಲ್ಲಸದಿಂದ ಮಾಡೀತು? ಇಂಥ ಈ ಪ್ರಚಂಡ ಕಾರ್ಯಶಕ್ತಿಯನ್ನು ನಾವು ಕೇವಲ ಅಕ್ಷಮ್ಯ ಅವಹೇಲನೆಯಿಂದ ಅಥವಾ ಖೊಟ್ಟಿ ಭೀತಿಯಿಂದ ನಾಶಗೊಳಿಸುತ್ತಿರುವವೆಂಬ ಕಲ್ಪನೆಯು ಅದಾರಿಗಾದರೂ ಇದೆಯೇನು? ಮತ್ತು ಆ ಅಸಂತುಷ್ಟ ಜೀವಗಳು ಮನೆಮನೆಗಳಲ್ಲೂ ಅಸಂತೋಷದ ವಿಷವನ್ನೇ ಹಬ್ಬಿಸುತ್ತಿರುವದನ್ನು ನೋಡಿದರೆ, ಸಂಸಾರೀ ಮನುಷ್ಯನ ನಿರ್ವೇಧ ಸುಖಕ್ಕೆಂದು ಸಹ ಪ್ರತಿಯೊಂದು ಕುಟುಂಬದೊಳಗಿನ ವಿಧವೆಯರ ಪುನರ್ವಿವಾಹಗಳು ತೀರ ಅವಶ್ಯವಾಗಿ ಮಾಡಲೇಬೇಕೆಂದೆನಿಸುತ್ತದೆ. ಪಾಶ್ಚಾತ್ಯ ದೇಶಗಳಲ್ಲಿ ಕುಮಾರಿಕೆಯರಿಗಿಂತ ವಿಧವೆಯರ ಲಗ್ನಗಳೇ ಕ್ಷಿಪ್ರ

ದಲ್ಲಿ ಕೂಡಿಬಿಡುತ್ತವೆ; ಆದರೆ ನಮ್ಮ ಕಡೆಯ ವಿಧವೆಯರ ಕಡೆಗೆ ನೋಡಿದರೆ ಅವರು ಸ್ವಂತದ ಬಗ್ಗೆ ತೀರ ಬೇಫಿಕೀರರಿಷ್ಟೇ ಅಲ್ಲ, ವಿಶೇಷ ಆತ್ಮ ಘಾತಕಿಯರೂ ಇರುವದರಿಂದ ಪುನರ್ವಿವಾಹದ ಶಕ್ಯತೆಯೇ ಅವರಿಗೆ ಮಾನ್ಯವಾಗುವದಿಲ್ಲ.

ನಿಜವಾಗಿ ನೋಡಿದರೆ ಅಲ್ಪ-ಸ್ವಲ್ಪ ಸಂಸಾರ ಮಾಡಿದ ಹೆಂಗಸರಿಗೆ ಗಂಡನನ್ನು ಆರಿಸುವ ಬಗ್ಗೆ ತೀಕ್ಷ್ಣದೃಷ್ಟಿಯುಂಟಾಗಿರುತ್ತವೆ. ಹೆಚ್ಚೇನು? ಆದರೆ ವಧುಪರೀಕ್ಷೆಯ ಸಮಯದಲ್ಲಿ ಯಾವ ಸಂಗತಿಗಳು ಆಕರ್ಷಕವಾಗಿರುತ್ತವೆ; ಮತ್ತು ಹೇಗೆ ವರ್ತಿಸುವದರಿಂದ ಅವರ ಮನಸ್ಸನ್ನು ಸಂತತವಾಗಿ ತಮ್ಮ ಆಧೀನದಲ್ಲಿರಿಸಿಕೊಳ್ಳಬರುತ್ತದೆ ಇದರ ಗಮಕವು ಅವರಿಗೆ ಚೆನ್ನಾಗಿ ಸಾಧಿಸಿರುತ್ತದೆ. ಅವರು ತಮ್ಮ ಪ್ರಾಮಾಣಿಕ ವಿಚಾರದಂತೆ ನಡೆಯುವ ದಿಟ್ಟತನ ತೋರಿಸಿದರೆ, ಪ್ರೌಢ ಕುಮಾರಿಕೆಯರ ಶರ್ಯತ್ತಿನಲ್ಲೂ ಅವರು ಲಗುಬಗನೆ ತಮ್ಮ ಲಗ್ನಗಳನ್ನು ಕೂಡಿಸಿಕೊಂಡುಬಿಟ್ಟಾರು. ಯಾರು ಮನಸ್ಸಿನಿಂದ ಖಂಬೀರರಾಗಿರುವರೋ, ಅವರು ತಮ್ಮ ಶೇಷಾಯುಷ್ಯವನ್ನು ಸ್ವಚ್ಛವಾಗಿಸಬಲ್ಲರು; ಆದರೆ ಯಾರು ಮನಸ್ಸಿನಿಂದ ಮೆತ್ತಗಿರುವರೋ ಅಥವಾ ಯಾರು ಪ್ರತಿಕೂಲ ಪರಿಸ್ಥಿತಿಯಲ್ಲಿ ಸಿಕ್ಕುಬಿದ್ದಿರುವರೋ ಅಂಥವರು ಪುನರ್ವಿವಾಹದ ಅಭಾವದಲ್ಲಿ ಎಷ್ಟು ನಗೆಗೇಡಾಗುವರೆಂಬದರ ಪಟ್ಟಿಯು ಮನಸ್ಸಿಗೆ ಉದ್ವೇಗವನ್ನುಂಟು ಮಾಡತಕ್ಕದ್ದಾಗಿದೆ. ಮಹಿಲಾಶ್ರಮಗಳು ಎಲ್ಲೆಲ್ಲಿ ಇರುವವೋ ಅಲ್ಲಲ್ಲಿ ಈ ಪತಿತರ ಸಂಗತಿಗಳು ಬರೆದೇ ಬರೆದಿಡಲ್ಪಟ್ಟಿರುತ್ತವೆ; ಅಲ್ಲದೆ ಮುಸಲ್ಮಾರ ಕೈಯಲ್ಲಿ ಸಿಕ್ಕು ನಿರಂತರವಾಗಿ ಅವರ ವಶದಲ್ಲಿರುವ ಹಾಗು ಸಮಾಜವು ನಿಷ್ಠುರತೆಯಿಂದ ಹೊರದೂಡಲ್ಪಟ್ಟಿರುವ ಪತಿತ ವಿಧವೆಯರ ಸಂಖ್ಯೆಯಾದರೂ ಮಿತಿಯಿಲ್ಲದಾಗಿದೆ. ಈ ಸಮಾಜ ಸಂಖ್ಯೆಯ ಹ್ರಾಸ, ಈ ಕಾರ್ಯಶಕ್ತಿಯ ಕಣ್ಣೆದುರಿಗೆ ನಡೆಯುತ್ತಿರುವ ನಾಶ ಇವುಗಳನ್ನು ನಿಲ್ಲಿಸಬೇಕಾಗಿದ್ದರೆ, ಪುನರ್ವಿವಾಹದ ವಿಷಯಕ ನಮ್ಮಗಳ ಮನೋವೃತ್ತಿಯನ್ನು ನಾವು ಸಂಪೂರ್ಣ ಬದಲಿಸಬೇಕು. ಬಿಳಿಛಾಯದ ಜಾತಿಯವರು ಸಾವಿರಾರು ವರ್ಷಗಳ ವರೆಗೆ ಪುನರ್ವಿವಾಹದ ಬಾಗಿಲು ಮುಚ್ಚಿಬಿಟ್ಟು ಅಂಥದೇನು ಮೋಕ್ಷ ಸಂಪಾದಿಸಿದರು? ಮತ್ತು ಬೇರೆ ವರ್ಣದವರು ಪುನರ್ವಿವಾಹವನ್ನು ಸ್ವೀಕರಿಸಿದ್ದರಿಂದ ಅಂಥ ಯಾವ ಆತ್ಮನಾಶವನ್ನು ಮಾಡಿಕೊಂಡರು? ಪ್ರತಿಯೊಂದು ರೂಢಿಯ ಬಗ್ಗೆ ಸಾಮುದಾಯಿಕ

ಹಿತಾಹಿತದ ದೃಷ್ಟಿಯಿಂದ ವಿಚಾರವಾಗಬೇಕು; ಹಾಗು ಆ ದೃಷ್ಟಿಯಿಂದ ನೋಡಿದರೆ, ಈ ಅತ್ಯಂತ ಮಹತ್ವದ ಬಾಬಿನ ಕಡೆಗೆ ನಾವುಗಳು ತಿಳಿದೂ ತಿಳಿದು ಕಣ್ಮುಚ್ಚಣಿಕೆಯಾಟ ನಡೆಸಿರುತ್ತೇವೆ ಶಹಾಮೃಗವು ಉಸುಗಿನಲ್ಲಿ ತಲೆಸೇರಿಸಿದ ಮಾತ್ರಕ್ಕೆ ಅದು ಶತ್ರುಗಳ ಕೈಯಿಂದ ಸಂಪೂರ್ಣ ಪಾರಾಗುವದಿಲ್ಲ. ಅದರಂತೆಯೇ ಹಿಂದುಸಮಾಜವು ಈ ಬಾಬಿನ ಕಡೆಗೆ ಕಣ್ಣು ಮುಚ್ಚಿಕೊಂಡು ಕುಳಿತರೆ ಅದು ಅವನತಿಯ ದಾಳಿಯೊಳಗಿಂದ ಪಾರಾಯಿತೆಂದು ಹೇಗೆ ಹೇಳಲಿಕ್ಕೆ ಬಂದೀತು? ಯಾವ ಪ್ರವಾಹಗಳು ಸ್ಪಷ್ಟವಾಗಿ ಹರಿಯುವದಿಲ್ಲವೋ ಅಥವಾ ನಾವು ಯಾವವನ್ನು ಹರಿಯಗೊಡುವದಿಲ್ಲವೋ ಅವು ನೆಲದೊಳಗಿಂದ ಹರಿಯುತಕ್ಕವುಗಳೇ. ಒಮ್ಮೊಮ್ಮೆ ಅವುಗಳ ಸ್ಫೋಟವೇ ಆದರೆ 'ದೈವೀ ಆಪತ್ತಿ' ಎಂದು ನಾವು ಸುಮ್ಮನಾಗುತ್ತೇವೆ. ಇಂಥ ಈ ಸ್ಫೋಟಗಳು ಸಾವಿರಾರು ವರ್ಷಗಳಿಂದ ಒಟ್ಟುಗೂಡುತ್ತ ಇಂಥ ಪ್ರತಿಬಂಧಿಸಿದ ಪ್ರವಾಹಗಳ ಒಡ್ಡುಗಳನ್ನು ಒಡೆಯುವುದರಿಂದಲೇ ಆಗುತ್ತಿರುತ್ತವೆ. ನಿಸರ್ಗಕ್ಕೆ ತನ್ನನ್ನು ಒಪ್ಪಿಸಿಕೊಡುವದು; ಹಾಗು ಅದರೊಡನೆ ಸಣ್ಣ ದೊಡ್ಡ ತಿರುಗಣಿ ಮಡುವುಗಳಲ್ಲಿ ಸಿಕ್ಕು ಪ್ರಾಣಾಂತಿಕ ಗುಟುಕು ನೀರನ್ನು ಕುಡಿಯುತ್ತ ಹೋಗುವದು ಇದು ಕರ್ತೃತ್ವಶಾಲಿಗಳ ವಿಚಾರಸರಣಿಯಾಗಿರುವದಿಲ್ಲ. ಕರ್ತೃತ್ವದ ಬಗ್ಗೆ ಅಭಿಮಾನವಿರುವ ಬಿಳಿಛಾಯದ ಸಮಾಜದ ಹೃದಯದಲ್ಲಿ ಈ ಸಾಮಾಜಿಕ ಅನ್ಯಾಯದ ವಿಷ ನೆಟ್ಟ ಘಾಯವು ಉರಿಯ ಹತ್ತಿರುತ್ತದೆ. ಅದನ್ನು ಸಕಾಲದಲ್ಲೇ ತೆಗೆದೊಗೆಯದಿದ್ದರೆ ಅದು ಒಮ್ಮಿಲ್ಲೊಮ್ಮೆ ಘಾತಮಾಡದಿರದು.

---

## ಹಸಗೆಟ್ಟ ಆಟ : : ೬

ಪಗಡೆಯ ಆಟದಲ್ಲಿ ಒಮ್ಮೊಮ್ಮೆ ಆಟವು ಹಸಗೆಡುತ್ತದೆ. ನಿಶ್ಚಿತ ಫಾಸಿ ಬಿದ್ದರೆ ಕಡಿತವಾಗಿ ಆಟ ಮುಗಿಯುವದು; ಇಲ್ಲದಿದ್ದರೆ ಕಾಯಿಗಳು ತಿರುಗ ಹತ್ತುತ್ತವೆ; ಹಾಗು ಸೋಲು ಬರುತ್ತದೆ. ಇದೇ ಪ್ರಕಾರವು ಬಿಳಿಛಾಯದ ಜನರ ಲಗ್ನ ಸಂಬಂಧದ್ದಾಗಿದೆ. ಬೇರೆ ವರ್ಣದ ಹಾಗು ಹಿಂದುಳಿದ ಜನರುಗಳಲ್ಲಿ ಲಗ್ನಸಂಬಂಧದಲ್ಲಿ ಇನ್ನೂ ವಿಶೇಷ ಅಡಚಣಿಗಳುಂಟಾಗುತ್ತಿರುವದಿಲ್ಲ. ಸಾರಡಾ ಕಾಯಿದೆಯಿಂದ ಗಂಡು ಹೆಣ್ಣುಗಳ ಲಗ್ನದ ವಯಸ್ಸು ತುಸ ಬಲವಂತರಿಂದ ಹೆಚ್ಚಿಸಿದ್ದರೂ ಕೂಡ ಆ ಕಾಯಿದೆಯು ಹಿಂದುಳಿದ ಜನರಿಗೆ ಲಗ್ನದ

ಬಾಬಿನಲ್ಲಿ ಹೆಚ್ಚಾಗಿ ಆ ದಂಡಕವನ್ನುಂಟುಮಾಡಿರುವುದಿಲ್ಲ. ಗಂಡು-ಹೆಣ್ಣು ಗಳ ವಯಸ್ಸು ತುಸ ಹೆಚ್ಚಿದ್ದರೂ ಸಹ ಅದನ್ನೇನೂ ತೀರ ಹೆಚ್ಚಿನ ವಯಸ್ಸಿಗೆ ತಲುಪಿಸಿಲ್ಲವಾದ್ದರಿಂದ ವಜ್ರಲೇಪವಾದ ಅವರ ಸ್ವಭಾವ ವಿಶೇಷದೊಳಗಿಂದ ಹೊರಡುವ ಕೂಡಿ ಬಾರದ ಕಿಡಿಗಳು ವೈವಾಹಿಕ ಆಯುಷ್ಯವನ್ನು ಕಮರಿಸಿಬಿಡವು. ಶಿಕ್ಷಣದ ಅಭಾವದಿಂದ ವಧೂವರರ ಮನಸ್ಸಿನೊಳಗಿನ ಆಕಾಂಕ್ಷೆಗಳು ತೀರ ಗಿಡ್ಡ ಹಾಗು ಅನುಕೂಲವಾದಂಥವುಗಳು. ಆರ್ಥಿಕ ಪರಿಸ್ಥಿತಿಯು ಲಗ್ನಗಳನ್ನು ಮಾಡಲಿಕ್ಕೆ ಅನುಕೂಲವೂ ಅಲ್ಲ-ಪ್ರತಿಕೂಲವೂ ಅಲ್ಲ, ಪ್ರತಿಯೊಬ್ಬ ಸ್ತ್ರೀ-ಪುರುಷರ ಹೊಟ್ಟೆಯು ಅವರವರರಟ್ಟೆಯ ಮೇಲೆಯೇ ಹೀಗೆ ಸ್ಥಿತಿಯಿರುತ್ತಿರುವದರಿಂದ ಯಾರಿಗೂ ಭಾರವೆನಿಸುವದಿಲ್ಲ. ಮನುಷ್ಯಸಂಖ್ಯೆಯಿಂದ ಆ ಕುಟುಂಬಕ್ಕೆ ನಿಜವಾಗಿಯೂ ಮನುಷ್ಯ ಬಲವು ಲಭಿಸುವದು. ಅವರ ಸಂಪಾದನೆಯ ಮಾರ್ಗಗಳೂ ಸಾಧನಗಳೂ ಹೆಚ್ಚುವವು ರೈತನ ಮನೆಗೆ ಹೊಸ ಸೊಸೆ ಬಂದರೆ ಒಂದು ಹೊಟ್ಟೆಯು ಹೆಚ್ಚಿತೇನೋ ನಿಜ; ಆದರೆ ಬರಿಯ ಹೊಟ್ಟೆ-ರಟ್ಟೆಗಳಿಗಾಗಿ ೨೪ ತಾಸು ಸಂತತವಾಗಿ ದುಡಿಯುವ ಮನೆಯವಳು ದೊರೆಯುವಳಲ್ಲವೆ? ಅಂತೆಯೇ ಸುಧಾರಿಸಿದ ಇಲ್ಲವೆ ಬಿಳಿಛಾಯದ ಜಾತಿಗಳ ಮಾನದಿಂದ ಹಿಂದುಳಿದ ಜಾತಿಗಳೊಳಗಿನ ಲಗ್ನಗಳು ಈಗಲೂ ಸಹಜವಾಗಿ ಆಗುವಂಥವೂ ಸುಖಕರಗಳೂ ಆಗಿವೆಯೆಂಬದು ಕಂಡುಬರುತ್ತದೆ

ಬಿಳಿಛಾಯದ ಜನರು ಮಾತ್ರ ಗಂಡು ಹೆಣ್ಣುಗಳ ವಯಸ್ಸು ಬೆಳೆಸಿ ಅವರ ಅಭಿರುಚಿಗಳನ್ನು ವಜ್ರಲೇಪ ಮಾಡಿಬಿಟ್ಟಿರುವರು. ಅವರಿಗೆ ಶಿಕ್ಷಣ ಕೊಟ್ಟು ಅವರ ಮನಸ್ಸುಗಳನ್ನು ಸಂಸ್ಕಾರಯುಕ್ತಗೊಳಿಸಿದರು; ಮತ್ತು ಆಕಾಂಕ್ಷೆಗಳನ್ನು ಹೆಚ್ಚಿಸಿದರು; ಹಾಗು ಇಡಿ ಜೀವನವೆಂದರೆ ಆರ್ಥಿಕ ಪರಿಸ್ಥಿತಿಯ ತಂತಿಯ ಮೇಲಿನ ಕಸರತ್ತೆಂದು ನಿರ್ಧರಿಸಿ, ಒಂದು ದೊಡ್ಡ ಜೀವಾಳದ ಬಾಬಿನಲ್ಲಿ ಅನೇಕ ಅಡಚಣಿಗಳನ್ನುಂಟು ಮಾಡಿರುತ್ತಾವೆ. ಅಭಿರುಚಿಗಳು ನಿರ್ಧರಿಸಲ್ಪಟ್ಟದ್ದರಿಂದ ವಧೂ-ವರ ಪರೀಕ್ಷೆಯ ಫಾರ್ಸು ಬೇಗನೆ ಕೊನೆಗಾಣುವದಿಲ್ಲ ಫಾರ್ಸು ಎಂದೆನ್ನುವ ಕಾರಣವೆಂದರೆ, ಅಪರಿಚಿತ ಊರಿಂದ ಬರುವ ವ್ಯಕ್ತಿಯು ಹತ್ತೆಂಟು ನಿಮಿಷಗಳಲ್ಲಿ ನೋಡುವುದು ಹಾಗು ಸಮ್ಮತಿಸುವದು ಇದು ಕೇವಲ ಫಾರ್ಸು ಎಂದಲ್ಲದಿದ್ದರೆ ಮನಸ್ಸನ್ನು ಸಂಪೂರ್ಣ ಮೋಸಗೊಳಿಸುವದೇ ಸರಿ! ಉಭಯತರ ಅಭಿರುಚಿಗಳು ಬದ

ಲಾಗದಂತೆ ಎರಕದಲ್ಲಿ ಕೇವಲ ಕಬ್ಬಿಣದ ರಸವನ್ನೇ ಸುರುವಿ ತೆಗೆದಂತಿರುತ್ತದೆ. ಅದರಿಂದ ಅವು ಒಂದಕ್ಕೊಂದು ಹೊಂದಬಹುದೆಂಬ ಬಗ್ಗೆ ಹೇಗೆ ನಿಶ್ಚಯ ವಿಲ್ಲವೋ ಅದರಂತೆಯೇ ಅವರು ಪರಸ್ಪರರಿಗೆ ಅನುಕೂಲರಾಗುವ ಹಾಗೆ ಸೌಮ್ಯರಾದಾರೆಂಬ ಖಾತ್ರಿಯಿರುವದಿಲ್ಲ ತಾಮ್ರದ ಎರಡು ಪಾತ್ರೆಗಳು ಒಂದರ ಮೇಲೊಂದು ಅಪ್ಪಳಿಸಹತ್ತಿದರೆ ನಿರಂತರ ಕೂಡಿ ನಡೆಯುದ ಧ್ವನಿ ಯು ಅವುಗಳೊಳಗಿಂದ ಹೊರಡುತ್ತಲಿರುವದೇ. ಶಿಕ್ಷಣದಿಂದ ಮನಸ್ಸು ಗಳು ಸುಸಂಸ್ಕೃತಗಳಾದುವು. ಶಾರೀರಿಕ ಆವಶ್ಯಕತೆಗಿಂತ ಹೆಚ್ಚು ಶ್ರೇಷ್ಠ ಮಾದಂಥ ಬೌದ್ಧಿಕ ಸ್ನೇಹದ, ಸಮಾಧಾನದ ಹಾಗು ಆನಂದದ ಯಾವ ಆಕಾಂಕ್ಷೆಗಳು ತರುಣ ಜನರ ಸಂಸ್ಕಾರೀ ಮನಸ್ಸಿನಲ್ಲಿ ನೆಲೆಗೊಂಡಿರುವವೋ, ಆ ಅಪೇಕ್ಷೆಗಳಿಗೆ ತಕ್ಕವರಾದಂಥ ಸಹಚರ ಅಥವಾ ಸಹಚಾರಿಣಿಯು ದೊರೆ ಯುವದು ದಿನದಿನಕ್ಕೂ ಕಠಿಣವಾಗಿದೆ. ಅಭಿರುಚಿಗಳು ಮತ್ತು ಆಕಾಂಕ್ಷೆ ಗಳು ಇವು ತೀರ ಅಸ್ಪಷ್ಟ ಅದೃಶ್ಯ ಸಂಗತಿಗಳಾಗಿರುವದರಿಂದ, ಆವರದವರಿಗೇ ಅವುಗಳನ್ನು ಸ್ಪಷ್ಟ ಶಬ್ದಗಳಲ್ಲಿ ವ್ಯಕ್ತಗೊಳಿಸಲಿಕ್ಕೆ ಬರುವದಿಲ್ಲ. ಅಂದ ಬಳಿಕ ಸಮಾನ ಗುಣಧರ್ಮದ ಜನರನ್ನು ಹುಡುಕಿ ತೆಗೆಯುವುದೆಂದರೆ ಯಾವಾಗಲೂ ಕಠಿಣವೇ ಆಗಿರುತ್ತದೆ. ಗುತಿಲ್ಲದ ಸ್ತ್ರೀ-ಪುರುಷರನ್ನು ಲಗ್ನದ ನೆವದಿಂದ ಹಾಗು ಲಗ್ನದ ದಿವಸವೇ ಮೊದಲ ಭೆಟ್ಟಿ ಮಾಡಿಸುವ ಇಂದಿನ ನಮ್ಮ ಲಗ್ನಪದ್ಧತಿಯು, ವಿವಾಹೋತ್ಸುಕರ ಆಕಾಂಕ್ಷೆ, ಅಭಿರುಚಿಗಳ ವಿರಿ ಸ್ಥಿತಿ ಇವುಗಳನ್ನು ಎಳ್ಳಷ್ಟೂ ಲೆಕ್ಕಿಸುವದಿಲ್ಲ.

ಮಧ್ಯಮ ವರ್ಗವು ತಕ್ಕಮಟ್ಟಿಗೆ ಜೋಲಿಹಿಡಿಯುತ್ತ ಹೇಗಾದರೂ ತೊಂದರೆಯಿಂದ ಆರ್ಥಿಕ ಜೀವನವನ್ನು ಕ್ರಮಿಸುತ್ತಿರುವದು. ಗಳಿಸುವವ ಒಬ್ಬ, ತಿನ್ನುವವರು ಹತ್ತುಜನ. ಅದರಿಂದ ಅವರ ದೈನ್ಯಾವಸ್ಥೆಯನ್ನೇನು ಹೇಳುವದಿದೆ? ದೊಡ್ಡ ಧನಿಕರು ರೂಪಾಯಿ-ಆಣೆ-ಪೈ ಇವುಗಳ ಬೆಲೆಯ ಮೇಲೆಯೇ ಮನುಷ್ಯತ್ವವನ್ನು ಅಳೆಯುತ್ತಾರೆ. ಹೀಗೆ ಒಟ್ಟಿನ ಪರಿಸ್ಥಿತಿಯಲ್ಲಿ ಹಲವು ಮಂದಿಗೆ ಲಗ್ನವೆಂಬದೊಂದು ಅನಿವಾರ್ಯಸಂಕಟವೆಂದು ಅನಿಸ ಹತ್ತಿದೆ. ಶರೀರಧರ್ಮಗಳು ವಯೋಮಾನದಿಂದ ಬೆಳವಣಿಗೆ ಹೊಂದ ತಕ್ಕವುಗಳು; ಅವುಗಳನ್ನು ಶರೀರಸೊಳಗಿಂದ ಅದಾರಿಗೂ ತೆಗೆಯದೊಗೆ ಲಿಕ್ಕೆ ಬರುವದಿಲ್ಲ; ಮರೆಯಲಿಕ್ಕೂ ಆಗುವದಿಲ್ಲ ಅಷ್ಟಕ್ಕಾಗಿಯೇ ಸ್ವಂತದ ಅಭಿರುಚಿ, ಆಕಾಂಕ್ಷೆ, ನಿರಾಶೆ, ಆರ್ಥಿಕ ಬಿಕ್ಕಟ್ಟು ಮುಂತಾದ ಎಲ್ಲ ಆಪತ್ತಿ

ಗಳ ಗುಡುಗಿನ ಅಂಜಿಕೆಯಿಂದ ಕಣ್ಣುಗಳನ್ನು ಗಟ್ಟಿಯಾಗಿ ಮುಚ್ಚಿಕೊಂಡ ನಮ್ಮ ತರುಣ ಜನರು ಗೃಹಸ್ಥಾಶ್ರಮದಲ್ಲಿ ಓಡುತ್ತೋಡುತ್ತ ಒಳನುಗ್ಗ ಹತ್ತಿದ್ದಾರೆ ಇದಕ್ಕೆಂದೇ ಸುಖೋತ್ಪಾದಕ ಮತ್ತು ಇದುವರೆಗೆ ಸರ್ವ ಸಾಧಾರಣ ಸುಖಮಯವಾಗಿದ್ದ ವೈವಾಹಿಕ ಜೀವನವು ಇತ್ತೀಚೆಗೆ ನಿರಾಶ ಯುಕ್ತವಾಗಹತ್ತಿದೆ. ಅವರೊಳಗಿಂದ ಸುಖಕ್ಕಿಂತ ದುಃಖದ, ಆನಂದಕ್ಕಿಂತ ನಿರಾಶೆಯ, ಸಮಾಧಾನಕ್ಕಿಂತ ಅಸಂತೋಷದ ಉಕ್ಕುಗಳು ಬಹು ಕಸುವಿ ನಿಂದ ಒಂದೇಸವನೆ ಬರತೊಡಗಿವೆ.

ಶಿಕ್ಷಣವು ಈ ಸಮಸ್ಯೆಯನ್ನು ಈ ಒಳಗಾಗಿಯೇ ಬಿಡಿಸಬೇಕಿತ್ತು; ಆದರೆ ಪರಿಣಾಮವಾದದ್ದು ಕಂಡುಬರುವದೇನಂದರೆ ಈ ಅಪಯಶದೊಳಗಿನ ಹೆಚ್ಚು ವಿಭಾಗವು ಶಿಕ್ಷಣದ ಕಡೆಗೇ ಹೋಗುತ್ತದೆ. ವರನಿಗೆ ಕಲಿತಂಥ ವಧುವು ಬೇಕಾಗುವಳು; ಇದರ ಅರ್ಥವು ಹೆಚ್ಚಾಗಿ ಕಲಿತಂಥ ಇಲ್ಲವೆ ಪದವಿ ಧರಳಾದವಳೆಂತಲ್ಲ. ಈ ಬಗ್ಗೆ ಅನುಭವವೆಂತೆಂದರೆ, ಮ್ಯಾಟ್ರಿಕ್‌ದ ವರ್ಗ ದೊಳಗಿಂದ ಹುಡುಗಿಯು ಹೇಗೆ ಹೇಗೆ ಮೇಲಿನ ಪರೀಕ್ಷೆಗಳಲ್ಲಿ ಉತ್ತೀರ್ಣ ಳಾಗುತ್ತ ಹೋಗುವಳೋ. ಹಾಗೆ ಹಾಗೆ ಅವಳನ್ನು ವರಿಸಬಪೇಕ್ಷಿಸುವವರು ಕಡಿಮೆ ಕಡಿಮೆಯಾಗಹತ್ತುತ್ತಾರೆ. ತೀರ ದೊಡ್ಡ ಪದವಿ ಪಡೆದ ಹಾಗು ಸುಸ್ಥಿತಿಯಲ್ಲಿರುವ ತರುಣರು ಕಾಲೇಜದೊಳಗೆ ಕಲಿಯುವ ಅಥವಾ ಬಿ ಏ ಪಾಸಾದ ಹುಡುಗಿಯೊಡನೆ ಲಗ್ನವಾಗಲಿಕ್ಕೆ ಧೈರ್ಯಪಡುವುದಿಲ್ಲ. ಅವ ರಿಗೆ ತಮ್ಮಷ್ಟು ಕಲಿತಂಥ ಹೆಂಡತಿಯು ಬೇಡಾಗಿರುತ್ತಾಳೆ. ಕಲಿತ ಹುಡುಗೆ ಯರಿಗೆ ಗೃಹಕೃತ್ಯದಲ್ಲಿ ಏನೂ ತಿಳಿಯುವದಿಲ್ಲವೆಂಬ ಮಾತು ಕೇವಲ ಸುಳ್ಳು ನೆವವಾಗಿದೆ ಹಾಗಿದ್ದರೆ ಗೃಹಕೃತ್ಯದಲ್ಲಿ ಸುಮಾತಾ, ಸುಗೃಹಿಣಿಯರಾದಂಥ ಗೃಹಿತಾಗಮಾ ವಿಧವೆಯರ ಲಗ್ನವೇ ಹೆಚ್ಚು ಸಂಭವನೀಯವೆಂದು ನಿರ್ಧರ ವಾಗುತ್ತಿತ್ತು. ಜಿ ಏ. ಏನು, ಬಿ. ಏ ಏನು? ಇವರಿಬ್ಬರೂ ಸಮಾನರೇ; ಮತ್ತು ಇವರಲ್ಲಿ ಯಾರೊಡನೆಯೂ ಲಗ್ನವಾಗಲಕ್ಕೆ ತರುಣರು ಸಿದ್ಧರಾಗುವ ದಿಲ್ಲ ತನ್ನ ಸರಿಜೋಡಿಯ ಸುಶಿಕ್ಷಿತ ಹೆಂಡತಿಯನ್ನು ನಡೆಸಿಕೊಳ್ಳುವ ಯೋಗ್ಯತೆಯು ನಮ್ಮ ತರುಣ ಜನರಲಿಲ್ಲ. ಅದರಿಂದ ಅವರಿಗೆ ತಮ್ಮ ಅಧೀನದಲ್ಲಿರುವ, ಮನೆಗೆಲಸಗಳನ್ನು ಮಾಡುವ ಹಾಗು ಶಾರೀರಿಕ ಅವಶ್ಯ ಕತೆಗಳನ್ನು ಪೂರೈಸುವಂತಹ ಯಾವಳೊಬ್ಬ ಸ್ತ್ರೀಯು ಬೇಕಾಗಿರುತ್ತಾಳೆ ಹೆಂಡತಿಯ ವಿಷಯದ ಅವರ ಆಕಾಂಕ್ಷೆಗಳು ಐಹಿಕಗಳೇ ಏಕಾಗಿರಲೊಲ್ಲವು

ಅವಾದ ಈ ಅಷ್ಟೊಂದು ಉಚ್ಚವಾಗಿರುವದಿಲ್ಲ. ಸಂಸಾರ ಸಂಬಂಧದ ಅವರ ದೃಷ್ಟಿಕೋನವೇ ಉದಾಸದ್ದಾಗಿರುತ್ತದೆ; ಅವರ ಪ್ರತ್ಯಕ್ಷ ದರ್ಶನ ಅಷ್ಟೊಂದು ಆಕರ್ಷಕವಾಗಿರುವದಿಲ್ಲ. ಇಂಥ ಉದಾಸೀನ ಹಾಗು ಕಷ್ಟದಾಯಕವಾದ ಸಂಸಾರಯಾತ್ರೆಗೆ ಹೊರಡುವಾಗ ಜೊತೆಗಿರಲು ಜೊತೆಗಾರ್ತಿಯೆಂದು ಯಾರನ್ನು ಅವರು ಆರಿಸಿಕೊಳ್ಳುವರೋ, ಅವಳು ಮನೆಗೆಲಸಗಳ ಎಲ್ಲ ಜೋಕೆ ಗಾರಿಕೆಯನ್ನು ಹೊತ್ತುಕೊಂಡು ಒಂದು ಕೂಗಿನ ಫಾಸಲೆಯಲ್ಲಿ ಹುಡುಗರು-ಹುಪ್ಪಡಿಗಳ ಸಂಸಾರವನ್ನು ಸಂಬಾಳಿಸುತ್ತ ತೊತ್ತಿನಂತೆ ನಡೆಯುತ್ತಿರ ಬೇಕೆಂಬದಿಷ್ಟೇ ಅವರ ಬಯಕೆಯು

ಆಯುಷ್ಯದಲ್ಲಿ ಧ್ಯೇಯವಿಲ್ಲ; ಸುಖದ ಸಂಸಾರ ಮಾಡೇವೆಂಬ ಧೈರ್ಯ ವಿಲ್ಲ ಇಂಥ ಇಂದಿನ ಕೈಲಾಗದ ತರುಣರು ಸುಶಿಕ್ಷಿತ ಹೆಂಡತಿಯನ್ನು ಲಗ್ನ ವಾಗಲಿಕ್ಕೆ ಧೈರ್ಯಪಡುವುದಾದರೂ ಹೇಗೆ? ಮನೆಯ ಹಿರಿಯರಾದರೂ ಕಲಿತ ಸೊಸೆಯನ್ನು ಮಾಡಿಕೊಳ್ಳುವ ಬಗ್ಗೆ ವಿರುದ್ಧರಿರುತ್ತಾರೆ. ಕಲಿಯು ದಿದ್ದ ಅತ್ತೆಗೆ ಮನೆಯೊಳಗಿನ ಹಿರಿಯತನವೆಲ್ಲ ಹೊರಟು ಹೋದೀತೆಂದು ಅವಳದವಳಿಗೇ ಅಂಜಿಕೆಯೆನಿಸುತ್ತದೆ. ಇಷ್ಟೇ ಅಲ್ಲ, ಅವಳ ಗಂಡನಾದರೂ ಆ ಸಂಗತಿಯು ಅನಿಷ್ಟವೇ ಆಗಿರುತ್ತದೆ. ಸುಶಿಕ್ಷಿತ ಹೆಂಡತಿಯ ಮಾನವನ್ನು ಹೇಗೆ ಕಾಯಬೇಕು; ಹಾಗು ಅವಳ ಭಾರೀ ಖರ್ಚು ನಡೆಸುವುದು ಹೇಗೆ ಶಕ್ಯವಾದೀತು? ಎಂಬ ಅಂಜಿಕೆಯು ತರುಣರಿಗೆ ಅನಿಸುತ್ತದೆ. ಕಲಿತ ಹುಡು ಗೆಯರು ಹೆಚ್ಚು ಖರ್ಚು ಮಾಡುವರು, ಹಾಳು ಮಾಡುವರು, ಡಾವು ಡೌಲಿನವರು, ಮನೆಯ-ದಾಸ ದಾಸಿಯರನ್ನವಲಂಬಿಸಿರತಕ್ಕವರು. ಸಂಕ್ಷಿಪ್ತ ವಾಗಿ ಅನ್ನುವುದೆಂದರೆ, ಐಷ-ಆರಾಮಿನವರೂ ಆಯತ ಕುಳಿತು ತಿನ್ನುವವರೂ ಆಗಿರುತ್ತಾರೆಂದು ಇಂದಿನ ನವತರುಣರ ತಿಳುವಳಿಕೆಯಾಗಿದೆ. ಆನೆಯು ದಾನವಾಗಿ ದೊರೆತಿತೆಂದು ಅದನ್ನು ಸ್ವೀಕರಿಸಿವರೂ, ಅದರ ನಿತ್ಯದ ಖರ್ಚು ಸಾಗಿಸಲಿಕ್ಕೆ ತೊಂದರೆಯೇ ಆಗುತ್ತದೆ. ಅಂತೆಯೇ ಈ ಬಿಳೀ ಆನೆಯ ಕನ್ಯಾ ದಾನವನ್ನು ಸ್ವೀಕರಿಸಲಿಕ್ಕೆ ಅದಾರೂ ಧೈರ್ಯತಾಳುವದಿಲ್ಲ ಕಲಿತ ತರುಣಿ ಯರ ಬಗ್ಗೆ ಕೆಲಸಗೇಡಿಗಳು ಯಾವ ಸಟೆ ದಿಟ ಹುಲುಬುಗಳನ್ನು ಹುಲುಬಿ ರುತ್ತಾರೋ ಅವುಗಳ ಸಲುವಾಗಿಯೂ ತರುಣರು ಅವರೊಡನೆ ಲಗ್ನವಾಗಲಿಕ್ಕೆ ಬೆದರುತ್ತಾರೆ. ಎಲ್ಲಿ ಲಗ್ನದ ಸಂತೆಗಳಿನ್ನೂ ನಡೆಯುವವೋ, ಅಲ್ಲಿ ಸಂತೆಯೊಳ ಗಿನ ಜೀನಸಿನಂತೆಯೇ ತಿಪ್ಪರನುಟ್ಟಿಗೆ ನೋಡಿ ಹೆಚ್ಚು ಲಾಭದ, ಲಾಂಛನ

ನಿಲ್ಲದ, ಬೆದರುವ, ಗಂಡನ ಆಧೀನದಲ್ಲಿರುವ ಇಂಥ ಹೆಂಡತಿಯನ್ನೇ ಪ್ರತಿ ಯೊಬ್ಬರೂ ಹುಡುಕಿಕೊಳ್ಳುತ್ತಿರುತ್ತಾರೆ.

ಶಿಕ್ಷಣಪಡೆಯುವ ಹುಡುಗಿಯರಾದರೂ ಅವರ ಬಗ್ಗೆ ಇರುವ ಅಪೇಕ್ಷೆ ಯಂತೆ ಇನ್ನೂ ಸಿದ್ಧರಾಗುವದಿಲ್ಲ. ಆಯ್. ಸಿ. ಎಸ್ ಗಂಡನ ಮೃಗಜಲ ಕ್ಕಾಗಿ ತೇಕುತ್ತ ಆಯುಷ್ಯವನ್ನು ಕಳೆಯುವ ಹರಿಣಾಕ್ಷಿಯರೇನೂ ಕಡಿಮೆ ಇರುವದಿಲ್ಲ. ಆಯ್ ಸಿ. ಎಸ್.ನು ಸಿಗದೇ ಇದ್ದರೆ ಪರದೇಶಕ್ಕೆ ಹೋಗಿ ಬಂದಿರುವ ದೊಡ್ಡ ಸಂಬಳದವನು; ಆತನೂ ದೊರಕದಿದ್ದರೆ ಸುಶಿಕ್ಷಿತ ಹಾಗು ಧನಿಕ ಹೀಗೆ ವರಾನ್ವೇಷಣದ ಮೆಟ್ಟಿಲುಗಳನ್ನು ಅವರು ನಿರ್ಧರಿಸಿರುತ್ತಾರೆ. ವಿಲಾಯತಿಗೆ ಹೋಗಿ ಬಂದವರ ಉಪಾಖ್ಯಾನಗಳು ಹೊರಬಿದ್ದ ಕೂಡಲೆ ಬಿಳೀ ಸವತಿಯರು ಮನೆಯಲ್ಲಿ ಕುಣಿಯಹತ್ತುತ್ತಾರೆ. ಪರದೇಶಗಳಿಗೆ ಹೋದ ವಿದ್ಯಾರ್ಥಿಯು ಬಹುತರವಾಗಿ ಆಚಾರದಲ್ಲಿ ಸ್ವೈರವೃತ್ತಿಯವನಾಗಿ ರುತ್ತಾನೆ. ಇವೆಲ್ಲ ಸಂಗತಿಗಳು ಗೊತ್ತಿದ್ದೂ ಇಂದಿನ ಕಲಿತ ಯುವತಿಯರು ಅಂಥ ವರ ನನ್ನು ವರಿಸುವ ಸಲುವಾಗಿ ಉತ್ಸುಕರಾಗಿರುತ್ತಾರೆ. ಇದರ ಮೇಲಿಂದ ಅನ್ನ ಬೇಕಾಗುವುದೇನಂದರೆ, ಅವರಿಗೆ ಗಂಡನ ಆಚಾರ-ವಿಚಾರಗಳೂ ಪೂರ್ವ ಚರಿತ್ರವೂ ಆತನ ದುಡ್ಡಿನ ಎದುರಿಗೆ ಕ್ಷಮ್ಯವಿರುತ್ತವೆ. ಕಲಿತ ಎಲ್ಲ ಹುಡು ಗಿಯರ ಆಕಾಂಕ್ಷೆಗಳು ಇದೇ ಬಗೆಯವಿರುವದಿಲ್ಲವೆಂದು ತಿಳಿದರೂ, ಒಂದು ಸಂಗತಿಯನ್ನು ಮಾತ್ರ ಒಪ್ಪದಿರಲಾಗುವದಿಲ್ಲ ಅದೇನಂದರೆ, ಸಾಲೆ-ಕಾಲೇಜುಗಳಲ್ಲಿರುವಾಗ ಜೊತೆಗೆ ಕಲಿಯುತ್ತಿರುವ ಗಂಡು ಹುಡುಗರ ಬಗ್ಗೆ ಅವರು ವಿಶೇಷ ತಿರಸ್ಕಾರ ಹಾಗು ತುಚ್ಛತೆಗಳನ್ನು ತೋರಿಸುತ್ತಿರುವದರಿಂದ ಆ ತರುಣರಿಗೆ ಅವರು ಎಂದಿಗೂ ಅಪ್ರಾಪ್ತರಷ್ಟೇ ಅಲ್ಲ, ಅಪ್ರಿಯರೂ ಆಗ ಹತ್ತುತ್ತಾರೆ. ಗಂಡು ಹುಡುಗರ ಕುಚೇಷ್ಟೆಯು ವರ್ತನೆಯು ಆ ಬಗೆಗೆ ಹೆಚ್ಚು-ಕಡಿಮೆ ಆಧಾರವಾಗಿರುತ್ತಾರೆಂಬದು ನಿಜ; ಆದರೆ ಹುಡುಗರಲ್ಲೂ ಸಜ್ಜನರೂ ದುರ್ಜನರೂ ಇರತಕ್ಕವರೇ. ಎಲ್ಲರನ್ನೂ ಒಂದೇ ಪ್ರಕಾರದ ತುಚ್ಛತೆಯ ಕೋಲಿನಿಂದ ದೂರ ಸರಿಸಹತ್ತುವದರಿಂದ ಇವರ ಪಕ್ಷವಹಿಸು ವರು ಇಡೀ ಕಾಲೇಜಿನಲ್ಲಿ ಒಬ್ಬ ವಿದ್ಯಾರ್ಥಿಯೂ ದೊರಕುವದಿಲ್ಲ ಆ ಹುಡುಗರೊಡನೆ ಬಂಧು ಭಾವದಿಂದ ಹೆಚ್ಚು ಆಸ್ಥೆಯಿಂದ ಮತ್ತು ಮನ ಬಿಚ್ಚಿ ನಡೆದರೆ ಇವರ ವಿಷಯದ ತಪ್ಪು ತಿಳುವಳಿಕೆಯು ಇಲ್ಲದಂತಾದೀತು. ಇವರ ವಿಷಯಕ ಹುಲುಬುಗಳು ಅಷ್ಟು ಹುಲುಬಲಿಕ್ಕಿಲ್ಲ ಚೇಷ್ಟೆ ಮಾಡುವ

ಹುಡುಗರನ್ನು ಪರಸ್ಪರ ದಂಡಿಸುವ ವಿದ್ಯಾರ್ಥಿಗಳು ಇವರ ಪಕ್ಷವಹಿಸಲಿಕ್ಕೆ ಮುಂದಾದಾರು,

ಹುಡುಗರು ಹಾಗು ಹುಡುಗೆಯರು ಒತ್ತಟ್ಟಿಗೆ ಕಲಿಯುವದಿಲ್ಲ ಅಂತೆಯೇ ಇಬ್ಬರೂ ದೂರಿನಿಂದಲೇ ಪರಸ್ಪರರ ಬಗ್ಗೆ ತಮ್ಮಗಳ ತಪ್ಪು ತಿಳುವಳಿಕೆಯನ್ನು ಸುಮ್ಮ ಸುಮ್ಮನೆ ಮಾಡಿಕೊಳ್ಳುತ್ತಾರೆ ಅದರಿಂದ ಇಂದಿನ ಕಾಲೇಜುಗಳಲ್ಲಿ ಸಹ ಶಿಕ್ಷಣವಿರುತ್ತಿದ್ದರೂ ಪ್ರಾಮಾಣಿಕಗಳಾದ ಪ್ರಣಯ ವಿವಾಹಗಳು ಇನ್ನೂ ಕೂಡಿಬರುವದಿಲ್ಲ. ಕಲಿತ ಹುಡುಗೆಯರ ವಯಸ್ಸು ಹೆಚ್ಚಿರುತ್ತದೆ. ಕೌಮಾರ್ಯದ ಮೋಹಕತೆಯು ಲುಪ್ತವಾಗಿ, ಅವರು ನಿಸ್ತೇಜರೂ ಒರಟರೂ ಸೌಂದರ್ಯವಿಹೀನರೂ ಕಾಣತೊಡಗುವರು. ಅದರಿಂದ ಅವರು ತರುಣರ ಮನಸ್ಸನ್ನು ಆಕರ್ಷಿಸಿಕೊಳ್ಳಲಾರದಾಗುವರು. ಅವರು ಸ್ವಂತ ಮಾತ್ರ ತನ್ನ ಸೌಂದರ್ಯದ ಬಗ್ಗೆ ಎಷ್ಟು ಗರ್ವಿಷ್ಠರೋ ಅಷ್ಟೇ ಬೇಫಿಕೀರರೂ ಆಗಹತ್ತಿರುತ್ತಾರೆ ನಿಯಮಿತ ವ್ಯಾಯಾಮವು ಶರೀರಸ್ವಾಸ್ಥ್ಯಕ್ಕೂ ಸೌಂದರ್ಯವರ್ಧನಕ್ಕೂ ಅವಶ್ಯವಿರುತ್ತದೆಂಬ ತಿಳುವಳಿಕೆಯು ಅವರಿಗೆ ಕ್ವಚಿತ್ತಾಗಿಯೇ ಇರುತ್ತದೆ ಬೆಲೆಯುಳ್ಳ ವಸ್ತ್ರಾಭರಣಗಳಿಗಿಂತ ದೇಹದ ಸೌಷ್ಟವವೇ ಹೆಚ್ಚು ಆಕರ್ಷಕವಾಗಿ ಕಾಣುತ್ತದೆ ಡೂಗು ಹಾಯಿಸಿಕೊಂಡು ಹ್ಯಾಟಿಗಾಲು ಹಾಕುತ್ತ ಊನ ಮನುಷ್ಯರಂತೆ ಕೈಕಾಲುಗಳನ್ನು ಸಾವರಿಸಿಕೊಳ್ಳುತ್ತ ನಡೆಯುವ ಇಂದಿನಸುಶಿಕ್ಷಿತ ಕುಮಾರಿಕೆಯರನ್ನು ನೋಡಿದರೆ, ಸಂಸಾರಕ್ಷಮತೆಯು ಅವರ ಆಯೋಗ್ಯತೆಯು ಪ್ರತಿಯೊಬ್ಬರ ಮನಸ್ಸಿನಲ್ಲಿಯೂ ಹೊಳೆಯದಿರಲಾರದು.

ಸೌಂದರ್ಯವೇ ಸ್ತ್ರೀಯರ ಬಂಡವಾಳವು; ಅವಳು ಚಿಕ್ಕವಳಿರಲಿ, ತರುಣಿಯಾಗಿರಲಿ, ಪ್ರೌಢಳಿರಲಿ ಇಲ್ಲವೆ ವೃದ್ಧಳಾಗಿರಲಿ ಅವಳು ತನ್ನ ಮನ್ನಣೆಯ ಸ್ಥಾನವನ್ನು ಅಚಲವಾಗಿರಿಸಿಕೊಳ್ಳಬೇಕಾಗಿದ್ದರೆ ಆ ಬಂಡವಾಳದ ಸಂರಕ್ಷಣವನ್ನು ಅವಳು ಸಂತತವಾಗಿ ಮಾಡಲೇಬೇಕು. ಕಲಿತ ಹುಡುಗೆಯರ ಆಕಾಂಕ್ಷೆಗಳಾದರೂ ಐಷ-ಆರಾಮದ ಆಚೆಗೆ ಹೋಗಿರುವದಿಲ್ಲ. ಅದರಿಂದ ಸಹಚರನನ್ನು ಆರಿಸುವಾಗ ಅವರ ದೃಷ್ಟಿಯು ಹೆಚ್ಚು ವಿಕಾಸವಾಗಿರುವದಿಲ್ಲ. ಯಾವ ಧ್ಯೇಯವೂ ಇಲ್ಲ, ಇಂತಿಂಥ ಗುಣವುಳ್ಳವನೇ ತನ್ನ ಗಂಡನಾಗಬೇಕೆಂಬ ಮನಸ್ಸಿನ ದೃಢನಿಶ್ಚಯವಿಲ್ಲ; ಹಾಗು

ಖದಿದ್ದರೂ ಆಡಿತೋರಿಸುವ ಧೈರ್ಯವಿಲ್ಲ. ಆ ಅಪರಿಚಿತ ತರುಣನ ಸ್ವಭಾವವು ತನ್ನ ಸ್ವಭಾವಕ್ಕೆ ಕೂಡಿಯೇ ಕೂಡೀತೆಂಬ ಖಾತ್ರಿಯಿಲ್ಲ; ಹಾಗು ಗೃಹಸ್ಥಾಶ್ರಮಕ್ಕಾಗಿ ಆತುರರಾದವರೊಡನೆ ಅದಕ್ಕಾಗಿ ಮನಸ್ಸಿನಲ್ಲಿ ಮಾಡಬೇಕಾದ ಸ್ವಾರ್ಥತ್ಯಾಗದ ಸಿದ್ಧತೆಯಿಲ್ಲ. ಈ ಎಲ್ಲ ಸಂಗತಿಗಳಿಂದ ಕಲಿತ ಹುಡುಗೆಯರು ಲಗ್ನದ ಮಾತೆತ್ತಿದ ಕೂಡಲೆ ಅಂಜಿಕೆಯಿಂದ ಗುಂಗಾಗಿ ಹೋಗುತ್ತಾರೆ. ಅದೃಷ್ಟದಲ್ಲಿ ಹಾರಿಕೊಳ್ಳುವಂತೆ ಅವರಿಗೆ ಲಗ್ನವಾಗುವದು ಅಂಜಿಕೆಯಂತೆನಿಸುತ್ತದೆ. ಈ ಅಂಜಿಕೆಯಿಂದ ಅವರು ಸಾಯುವವರೆಗೆ ಅವಿವಾಹಿತರಾಗಿರಲಿಕ್ಕೂ ಕೂಡ ಒಪ್ಪುತ್ತಾರೆ.

ಕಾಲೇಜದೊಳಗಿನ ನಾಲ್ಕು ವರ್ಷಗಳು ಯಾವಾಗಲೋ ಹೊರಟು ಹೋಗುತ್ತವೆ. ಹಾಗು ಬಿ. ಎ. ಇಲ್ಲವೆ ಜಿ. ಎ. ಆದಂಥ ಹುಡುಗೆಯರೂ ಸಮವಯಸ್ಸಿನ ತರುಣರ ಸಂಗತಿಗೂ ಎರವಾಗುತ್ತಾರೆ. ತರುಣಿಯರು ತರುಣರಿಂದ ವಿಂಗಡವಾದ ಬಳಿಕ ಅವರು ಪ್ರೌಢ ಹೆಂಗಸರಲ್ಲಿ ಗಣಿಸಲ್ಪಡುತ್ತಾರೆ. ತರುಣರು ಈ ಮೊದಲೇ ಅವರನ್ನು ಮರೆತು ಬಿಟ್ಟು ತಂತಮ್ಮ ಪ್ರಪಂಚಗಳಲ್ಲಿ ದಂಗಾಗಿ ಹೋಗಿರುತ್ತಾರೆ; ಮತ್ತು ಹೀಗಾಯಿತೆಂದರೆ, ಆ ಕುಮಾರಿಕೆಯರ ಲಗ್ನಗಳು ಎಂದಾದರೂ ಕೂಡುವವೋ ಇಲ್ಲವೋ ಎಂಬ ಬಗ್ಗೆ ಸಂದೇಹವೇ ಉಂಟಾಗುತ್ತದೆ. ಕಾಲೇಜಿನಲ್ಲಿ ಕಲಿಯುವಾಗ ಮಾಡಿದ್ದ ಹುಂಬತನವು ಶೂನ್ಯವಾಗುತ್ತದೆ. ಅಲ್ಲಿ ತೋರಿದ ದಿಟ್ಟತನವು ಹುಡುಗಾಟವೆಂದು ತಿಳಿಯುತ್ತಾರೆ; ಹಾಗು ಅಂಥ ಆ ದಿಟ್ಟ-ಹುಂಬತನದಲ್ಲಿ ಯಾವಳೊಬ್ಬಳ ಲಗ್ನವು ಸಹಜವಾಗಿ ಕೂಡಿಯೇ ಬಿಡುತ್ತದೆ. ತದ್ವಿರುದ್ಧವಾಗಿ ಆ ಪ್ರೌಢ ಕುಮಾರಿಕೆಗೆ ಸಂಭಾವಿತತನದ ವೇಷಧರಿಸಬೇಕಾಗುತ್ತದೆಂಬದೇನೋ ನಿಜವೇ; ಅದರಿಂದ ಆವಳು ಹುಮ್ಮಸ್ಸಿನಿಂದಿರದೆ ಹೆಚ್ಚು ನಿಸ್ತೇಜಳಾಗಿ ಕಾಣಹತ್ತುತ್ತಾಳೆ. ಬಿ. ಎ. ಆಗುವ ವರೆಗೆ ನೌಕರಿಯ ಉಬ್ಬಿನಿಂದ ಹಾರಾಡುತ್ತಿದ್ದ ತರುಣನು ಪರೀಕ್ಷೆ ಪಾಸಾದೊಡನೆ ಸ್ವಂತದ ಕಾಸಿನ ಬೆಲೆಯನ್ನು ತಿಳಿದು ಹೇಗೆ ನಿರಾಶೆಗೊಳ್ಳುವನೋ, ಅದರಂತೆಯೇ ಕಲಿಯುತ್ತಿದ್ದ ತರುಣಿಯೂ ಕಾಲೇಜದಲ್ಲಿರುವವರೆಗೆ ಧನಿಕ ಹಾಗು ಸುಸ್ವರೂಪ ಗಂಡನ ಮೋಟರಿನಲ್ಲಿ ಹಾಗು ಲೋಡು-ತೆಕ್ಕೆಗಳ ಮೇಲೆ ಹೊರಳಾಡುವ ಸವಿಗನಸುಗಳನ್ನು ಮನದಲ್ಲೇ ಕೂಡಿಸುತ್ತಿರುತ್ತಾಳೆ. ಅದೇ ಅವಳು ಬಿ. ಎ. ಆದ ಕೂಡಲೆ ಹತಾಶಳೂ ಮನನೊಂದವಳೂ ಆಗಿಬಿಡುತ್ತಾಳೆ.

ಯುವಕರೇನು, ಯುವತಿಯರೇನು? ಸ್ವಂತದ ಲಗ್ನದ ಬಗ್ಗೆ ಉಚ್ಚ ಮಹತ್ವಾಕಾಂಕ್ಷೆಯು ಅವರಲ್ಲಾವದೂ ಇರುವುದಿಲ್ಲ. ಈ ಮಹತ್ವದ ಪ್ರಶ್ನೆಯ ಬಗ್ಗೆ ಉಭಯ ವಧೂವರರ ಆಚಾರ ವಿಚಾರಗಳಲ್ಲಿ ಗಾಂಭೀರ್ಯವೇ ಇರುವುದಿಲ್ಲ; ಮತ್ತು ಹೊಣೆಗಾರಿಕೆಯನ್ನಂತೂ ಯಾರೂ ಪರಿವೆ ಮಾಡುವದಿಲ್ಲ. ಹೆಚ್ಚುತ್ತಿರುವ ಯೌವನಾವಸ್ಥೆಯು ಐಹಿಕ ಅವಶ್ಯಕತೆಗಳನ್ನು ಪೂರ್ತಿಗೊಳಿಸುವದು ಲಗ್ನಸಂಸ್ಥೆಯ ಗೌಣ ಹೇತುವಾಗಿದ್ದು, ಇಂದಿಗೆ ಅದೇ ಪ್ರಧಾನ ಉದ್ದೇಶವಾಗಿದೆ. ಬೌದ್ಧಿಕ ಒಕ್ಕಟ್ಟಿನ ಪ್ರಮಾಣಸೂತ್ರವನ್ನು ಯಾರೂ ತಕ್ಕೊಳ್ಳುವದಿಲ್ಲ. ಆದರೆ ಶಾರೀರಿಕ ಸಲುವಿಕೆಯ ಪ್ರಮಾಣಸೂತ್ರಗಳನ್ನು ಮಾತ್ರ ಇನ್ನೂ ತಕ್ಕೊಳ್ಳುತ್ತಲೇ ಇದ್ದಾರೆ. ಸ್ತ್ರೀಯಳಿಗೆ ಯಾವ ಒಗೆಯ ಸ್ಥಾನವನ್ನು ನಾವು ಇಂದಿಗೆ ಕುಟುಂಬದಲ್ಲಿ ಇತ್ತಿರುವೆವೋ ಅದೇ ಬಗೆಯ ಆಕಾಂಕ್ಷೆಗಳ ಅಂತರವಿರತಕ್ಕದ್ದು. ಮನೆಯೊಳಗಿನ ಕೆಲಸ-ಬೊಗಸೆ ಮಾಡುವುದು, ಮಕ್ಕಳನ್ನು ಹೆರುವುದು ಹಾಗು ಅವುಗಳ ಪಾಲನ-ಪೋಷಣೆ ಮಾಡುವುದು ಇದಕ್ಕಿಂತ ಹೆಚ್ಚಿನ ಯೋಗ್ಯತೆಯು ಅವರದಿದೆ ಎಂದು ನಾವು ತಿಳಿಯುವೆವೋ? ಮತ್ತು ಇಡೀ ನಮ್ಮ ಸಂಸಾರಚಿತ್ರದ ಪ್ರತಿಬಿಂಬವು ನಮ್ಮ ಆಕಾಂಕ್ಷೆಗಳಲ್ಲಿ ಸ್ಪಷ್ಟವಾಗಿ ಕಾಣಿಸುತ್ತವೆ. ನಮ್ಮಗಳ ಆಕಾಂಕ್ಷೆಗಳೆಂದರೆ ಉತ್ಸಾಹಹೀನ, ವಿಕೃತ ಹಾಗು ಹೀನ ಸಂಸಾರ ದೃಶ್ಯಗಳ ಚಿತ್ರಸೃಷ್ಟಿಯೇ ಸರಿ! ಆದರಿಂದ ಲಗ್ನಾನಂತರ ಬಹ ಜನರು ದೊಡ್ಡ ದೊಡ್ಡ ನಿರಾಶೆಗಳನ್ನು ಅನುಭವಿಸಬೇಕಾದರೆ ಅದರಲ್ಲಿ ದೋಷವಾರದು?

ಇನ್ನು ಇಂಥ ನಿರಾಶೆಗಳ ತೀವ್ರತೆಯೂ ವಿಪುಲತೆಯೂ ಹೆಚ್ಚಾಗಿಬಿಟ್ಟಿರುವದು ಇಂದಿಗೆ ಕಾಣಿಸುತ್ತದೆ. ಲಗ್ನಸಂಸ್ಥೆಯು ಸಂಸ್ಕೃತಿಯ ಚಿಹ್ನವಾಗಿದೆ. ಅದು ಸಮಾಜ ಸ್ಥೈರ್ಯದ ಮಾತೃಸ್ವರೂಪವಾಗಿದೆ; ಆದರ ಸಂವರ್ಧನ ಹಾಗು ರಕ್ಷಣೆಯನ್ನು ಅವಶ್ಯವಾಗಿ ಮಾಡಬೇಕು; ಆದರೆ ನಮ್ಮಗಳಲ್ಲಿ ಲಗ್ನ ಕೂಡಿಸುವ ಯಾವ ಪದ್ಧತಿಗಳಿರುವವೋ ಅವುಗಳ ಮೂಲಕ ಲಗ್ನಸಂಸ್ಥೆಯು ಆನಂದಕ್ಕಿಂತ ನಿರಾಶೆಯು, ಸುಖಕ್ಕಿಂತ ದುಃಖದ್ವೇಷವೆ ಇಳಿಸುತ್ತದೆ. ನಮ್ಮಗಳ ಲಗ್ನಕೂಡಿಸುವ ಪದ್ಧತಿಗಳಲ್ಲಿ ಆಮೂಲಾಗ್ರ ಹೆಚ್ಚುಕಡಿಮೆಯಾಗಲಿಕ್ಕೆಬೇಕು. ಅದು ಮೊದಲೇ ಪ್ರೀತಿವಿವಾಹವಿರಲಿ; ಇಲ್ಲವೆ ಲಗ್ನೋತ್ತರದಲ್ಲಿ ಪ್ರೀತಿ ವಿಕಾಸವಾಗಲಿ. ಸಹವಾಸೋತ್ತರ ವಿವಾಹವಿರಲಿ ಇಲ್ಲವೆ ಇಂದಿನ ಹಿರಿಯರ ಇಚ್ಛೆಯನ್ನವಲಂಬಿಸಿರುವ, ಅಪ್ರೀತಿಯನ್ನುಂಟು

ಮಾಡುವ ವಿವಾಹವಿರಲಿ ಇಂದಿಗೆ ಲಗ್ನಸಂಸ್ಥೆಯು ಆಟವು ಹಸಗೆಟ್ಟಿರುವುದೇನೋ ನಿಜ! ನಿಶ್ಚಿತ ಗುಣಗಳ ಖಾತ್ರಿಯು ಫಾಸಿಗಳು ವಧು-ವರರಿಗೆ ಬೀಳುವದಿಲ್ಲ. ಅವರ ಕಾಯಿಗಳು ಒಳಸೇರುವದಿಲ್ಲ-ಮಲಗುವದಿಲ್ಲ. ಅದೆಷ್ಟೋ ಗುಣಗಳ ಫಾಸಿಗಳನ್ನು ಇಡದಲೆ ಪುಕ್ಕಟೆ ಕಳೆದುಕೊಳ್ಳಬೇಕಾಗುತ್ತದೆ! ಎಷ್ಟೋ ಪಗಡೆಗಳು ವರ್ಷಾನು ವರ್ಷಗಟ್ಲೆ ನಿಶ್ಚಿತ ಫಾಸಿ ಬಿದ್ದೀತು; ಹಾಗು ಬೇರೆ ಪಗಡೆಯೊಂದಿಗೆ ಒಳಸೇರಿ ಮಲಗೇವು ಎಂದು ಕಾದು ಕುಳಿತಿರುತ್ತವೆ! ದೈವದ ಫಾಸಿಗಳನ್ನು ಅವರು ಒಂದೇಸವನೆ ಆಡುತ್ತಿರುತ್ತಾರೆ! ಆಟವು ಹಸಗೆಟ್ಟಕಾಲಕ್ಕೆ ನಿಶ್ಚಿತ ಫಾಸಿ ಹಾಕುವವನದೇ ಆವಶ್ಯಕತೆಯಿರುತ್ತದೆ; ಅಥವಾ ಬಿದ್ದ ಫಾಸಿಯಲ್ಲಿ ಬೇರೆ ಬೇರೆ ಪಗಡಿಗಳನ್ನಿಟ್ಟು ಅವುಗಳಿಗೆ ದಾರಿ ಮಾಡಿಕೊಡುವ ಕಲ್ಪಕನಾದರೂ ಬೇಕಾಗುತ್ತಾನೆ ಪಗಡೆಗಳನ್ನು ಹೇಗಾದರೂ ಹಾಗು ಯಾವಾಗಾದರೂ ಒಯ್ದು ಮನೆಯಲ್ಲಿ ಮಲಗಿಸುವದಿರುತ್ತದೆ ಅದರ ಹೊರತು ಆಟವು ಯಶಸ್ವೀ ರೀತಿಯಿಂದ ಮುಗಿಯುವದಿಲ್ಲ. ಯುವಕ-ಯುವತಿಯರನ್ನು ಭೋರ್ಜಗುಲಿಯ ಮೇಲಂತೂ ತಂದು ನಿಲ್ಲಿಸುವುದೇ; ಆದರೆ ಅವರು ಪರಸ್ಪರರ ಮೇಲೆ ಮೊದಲೇ ಅನುರಕ್ತರಾಗಿರಬೇಕೆಂಬ ಹಟವನ್ನು ಹಿಡಿಯದಿದ್ದರೂ ಸ್ವಭಾವ, ಆಕಾಂಕ್ಷೆ, ಶಿಕ್ಷಣ ಇತ್ಯಾದಿ ಬಾಬುಗಳಲ್ಲಿ ಅವರು ಅನುರೂಪವಾದರೂ ಇರಬೇಕು. ಹಾಗೆ ಸಾಧಿಸದಿದ್ದರೆ ಲಗ್ನದ ಭೋರ್ಜಗುಲಿಗಳು ಬರಬರುತ್ತ ಹಾಳುಬಿದ್ದಾವು. ಮಂಗಳಾಷ್ಟಕಗಳನ್ನು ಕೇಳುತ್ತಿರುವಾಗ ನೂರಕ್ಕೆ ತೊಂಬತ್ತೊಂಬತ್ತರಂತೆ ವಧೂ-ವರರ ಅಂತಃಕರಣಗಳು ನಡುಗುತ್ತಿರುತ್ತವೆಂಬ ಅನುಭವವಿದೆ. ಅವರ ಆಗಿನ ಅಂಜಿಕೆಯ ಕಾರಣವಿಷ್ಟೇ, ಪ್ರತಿಯೊಬ್ಬರಿಗೂ ತಾವು ಕತ್ತಲಲ್ಲಿ ಹಾರಿಕೊಳ್ಳುತ್ತೇವೆಂದು ಅನಿಸುತ್ತಿದ್ದು, ತಮ್ಮ ಕಾಲುಗಳು ನೆಲಕ್ಕೆ ಹತ್ತಿದರೇ ವಿಹಿತವು. ಈ ನಮ್ಮ ವಿಕೃತ ಪದ್ಧತಿಯ ಅಂಜಿಕೆಯು ನಿತ್ಯವೂ ಯುವಕ ಜನರ ಮನಸಿನಲ್ಲಿ ವೈವಾಹಿಕ ಜೀವನದ ಭಯಪ್ರದ ಚಿತ್ರಗಳನ್ನು ಚಿತ್ರಿಸುತ್ತಿರುತ್ತದೆ.



# ಪ್ರೀತಿ ವಿವಾಹ :: ೭

ಸರಾಸರಿ ನಾಲ್ಕು ವರ್ಷಗಳ ಹಿಂದಿನ ಸಂಗತಿ. ನನ್ನ ಒಬ್ಬ ಬಾಲ್ಯ ಸ್ನೇಹಿತನ ಅಭ್ಯಾಗತನೆಂದು ನಾನು ಫರ್ಗ್ಯುಸನ್ ಕಾಲೇಜದ ರೆಸಿಡೆನ್ಸಿಯಲ್ಲಿ ಎರಡು ದಿವಸ ಇರಲಿಕ್ಕೆಂದು ಹೋಗಿದ್ದೆನು. ನನಗೆ ಆ ಸ್ಥಳಾಂತರವು ಒಳ್ಳೇ ಆಹ್ಲಾದಕರವೆನಿಸಿತು. ತಾರುಣ್ಯದ ಮೋಜು ವಿಶೇಷವೇ ಇರುತ್ತದೆ. ಅರಳುತ್ತಿರುವ ಹೂವುಗಳು ಆನಂದದಿಂದ ಸ್ವಂತ ಅಲ್ಲಾಡುತ್ತಲೇ ಇರುವವು; ಆದರೆ ತಮ್ಮಗಳ ಉಗ್ರವಾದ ಸುಗಂಧದಿಂದ ಅವು ಹಣ್ಣು-ಎಲೆಗಳನ್ನು ಕೂಡ ಅಲ್ಲಾಡಹಚ್ಚುತ್ತವೆ. ಶಿಕ್ಷಣಸಂಸ್ಥೆಗಳೊಳಗಿನ ಜನರು ಸಾಯುವವರೆಗೂ ಆಶಾವಾದಿಗಳೂ ಉಲ್ಲಸಿತರೂ ಏಕಿರುತ್ತಾರೆ? ಮತ್ತು ಆದಾದರೂ ಸ್ವಾರ್ಥ ತ್ಯಾಗದ ಭಾರೀ ಬೆಲೆ ತೆತ್ತು ಏಕಿರುತ್ತಾರೆಂಬ ಎಲ್ಲದರ ಕಾರಣವು ನನಗೆ ತಿಳಿಯಿತು. ಸಾಲೆ ಕಾಲೇಜುಗಳಲ್ಲಿ ತುಂಬಿರುತ್ತಿರುವ ತಾರುಣ್ಯದ ಉನ್ಮಾದಕ ವಾತಾವರಣವೇ ಆ ಕಾರಣವಾಗಿರುತ್ತದೆ. ನನ್ನ ಆ ದಿನಗಳು ಹಾ ಹಾ ಅನ್ನುವಷ್ಟರಲ್ಲಿ ಕಳೆದು ಹೋದುವು. ಅಂಥ ದೊಡ್ಡ ಆಶಾವಾದೀ ವಾತಾವರಣವು ಅಲ್ಲಿರುತ್ತದೆ. ಬೆಳಿಗ್ಗೆ ಎದ್ದಾಗಿನಿಂದ ಅಪರಾತ್ರಿಯಲ್ಲಿ ಮಲಗುವವರೆಗೂ 'ನಾವು ಹೀಗೆ ಮಾಡೋಣ, ನಾವು ಹಾಗೆ ಮಾಡೋಣ; ನನ್ನ ನಿಶ್ಚಯವಿದೇ ಇದೆ, ನನ್ನ ಧ್ಯೇಯವು ಹೀಗಿದೆ' ಎಂಬ ಆವೇಶದ ಉದ್ಗಾರಗಳನ್ನು ಆಗಾಗ್ಗೆ ಹೊರಡಿಸುತ್ತಿರುವವರ ಮನಸ್ಸಿನಲ್ಲಿ ಮಾನವೀ ಕರ್ತೃತ್ವದ ಎಂಥ ದೊಡ್ಡ ಅಭಿಮಾನವು ತಿಳಿಯದ ಹಾಗೆ ವಾಸಿಸುತ್ತಿದ್ದೀತು! ನಾನು ಅವರ ಆ ಗೊಂದಲದಲ್ಲಿ, ವಾದವಿವಾದಗಳಲ್ಲಿ, ಆಣೆಚೂರಿಗಳಲ್ಲಿ ಬೆರೆತು ಬಿಡುತ್ತಿದ್ದೆನು. ನಾನು ಯಾರಿದ್ದೇನೆಂಬದನ್ನು ನನಗೆ ಬಚ್ಚಿಡಬೇಕಾಗಿತ್ತು. ನಿಜವಾಗಿ ಹೇಳುವದೆಂದರೆ, ನನಗೆ ನನ್ನ ಪ್ರೌಢಾವಸ್ಥೆಯನ್ನು ಮರೆತು, ಮನಸ್ಸಿಗೆ ಹಳಹಳಿಯನ್ನುಂಟು ಮಾಡಿ ಹೊರಟುಹೋಗಿದ್ದ ರಮ್ಯವಾದ ಬಾಲ್ಯತ್ವದಲ್ಲಿ ಮುಳುಗುವ ಮೋಹವು ಆವರಿಸದಾಗಿತ್ತು.

ಕಾಲೇಜದೊಳಗಿನವರಾದರೂ ಅವರು ಹುಡುಗರೇ! ನನ್ನ ಹಾಸ್ಯ-ವಿನೋದಗಳಿಂದ ನಾನು ಅವರನ್ನು ಕೂಡಲೆ ಒಲಿಸಿಕೊಂಡೆನು. ಬಳಿಕ ಅವರು ತಮ್ಮ ಮನೋಗತಗಳನ್ನು ನಿಧಾಸ್ತತೆಯಿಂದ ನನ್ನೆದುರು ಬಿಚ್ಚಿಟ್ಟು ಮಾತಾಡಹತ್ತಿದರು. ಸ್ವತಂತ್ರ ವಿಚಾರದ ಚೀಲಗಳನ್ನೇ ಆ ಭಾವನಾಪರ ಕುಬೇರರು ನನ್ನೆದುರು ಸುರುವಹತ್ತಿದರು. ಅವುಗಳ ಹೊಳಪಿನಿಂದ ನಾನು

ಕ್ಷಣಕಾಲ ಬೆರಗಾದೆನು. ಅವುಗಳೊಳಗಿನ ಒಂದಾನೊಂದು ಚೀಲವನ್ನು ತುಂಬಿ ನನ್ನೊಡನೆ ಸಾಗಿಸಬೇಕೆಂಬ ಮೋಹವೂ ಉಂಟಾಯಿತು; ಆದರೆ ಕೂಡಲೆ ಮನಸ್ಸಿನಲ್ಲಿ ಬಂದದ್ದೇನಂದರೆ, ಈ ಚೀಲಗಳ ಭಾರವನ್ನು ಹೊರು ವಷ್ಟು ನನ್ನ ಬೆನ್ನೆಲುವು ಬಲವಾಗಿಲ್ಲುಳಿದಿದೆ? ಇಲ್ಲದಿದ್ದರೆ ಇದೇ ಸ್ಥಳದಲ್ಲಿ ಇಪ್ಪತ್ತು ವರ್ಷಗಳ ಮುಂಚೆ ಮಾಡಿದ್ದ ಇದೇ ದ್ರವ್ಯದ ವ್ಯಾಪಾರದಿಂದ ನಾನು ಧನಾಢ್ಯನಾಗುತ್ತಿರಲಿಲ್ಲವೇ? ಅದಿರಲಿ. ನನಗೆ ತರುಣರ ಮನಸ್ಸುಗಳನ್ನು ಪರೀಕ್ಷಿಸುವದಿದ್ದಿತು; ಅವರ ಆಕಾಂಕ್ಷೆಗಳ ಮೇಲಾಟವನ್ನು ನೋಡತಕ್ಕ ದ್ದಿತ್ತು. ಪ್ರಸ್ತುತದ ಸಾಮಾಜಿಕ ಸಮಸ್ಯೆಯು ಬಗ್ಗೆ ಅವರ ಒಲವನ್ನು ತಿಳಕೊಳ್ಳಬೇಕಾಗಿತ್ತು; ಮತ್ತು ಸ್ವಂತದ ನಿಶ್ಚಯದ ಸಲುವಾಗಿ ಎಷ್ಟು ಸ್ವಾರ್ಥತ್ಯಾಗ ಮಾಡಲಿಕ್ಕೆ ಅವರು ಸಿದ್ಧರಿರುವರೆಂಬದನ್ನೂ ನೋಡತಕ್ಕ ದ್ದಿತ್ತು. ಅವರ ಜೀವಾಳದ, ಹಗಲಿರುಳಿನ ಚರ್ಚೆಯು ಮತ್ತು ತೀರ ಕ್ರೀಡೆಯು ಗುಪ್ತ ಸಂಗತಿಯು ಯಾವುದಾದರೂ ಇದ್ದರೆ ಅವರೊಡನೆ ಕಲಿಯುತ್ತಿದ್ದ ಹುಡುಗೆಯರದೇ ಆದಾಗಿತ್ತೆಂಬದು ನನಗಾಗಲೇ ಹೊಳೆದುಬಿಟ್ಟಿತು. ಇಪ್ಪತ್ತು ವರ್ಷಗಳ ಮುಂಚೆ ಕಾಲೇಜುಗಳೊಳಗಿನ ಅರ್ಧಕ್ಕಿಂತ ಹೆಚ್ಚು ಮಂದಿ ವಿದ್ಯಾರ್ಥಿಗಳು ವಿವಾಹಿತರಿರುತ್ತಿದ್ದರು; ಮತ್ತು ಆಗ ಹುಡುಗೆಯರ ಸಂಖ್ಯೆಯು ತೀರ ಕೈಬೆರಳಿನಿಂದ ಎಣಿಸಬಹುದಾದಷ್ಟು ಅಲ್ಪವಿರುತ್ತಿದ್ದು, ಅವರಲ್ಲಿಯೂ ವಿವಾಹಿತರ ಪ್ರಮಾಣವೇ ಹೆಚ್ಚಿರುತ್ತಿತ್ತು. ಆದರಿಂದ ನಮ್ಮ ಕಾಲಕ್ಕೆ ವೈಷಯಿಕ ಭಾವನೆಗಳ ನಾಚು ಈಗಿನಂತೆ ದಿಗಂಬರ ಸ್ವರೂಪದಲ್ಲಿ ತೋರು ತ್ತಿರಲಿಲ್ಲ. ನಾನು ಆ ತರುಣರಲ್ಲಿಯ ಒಬ್ಬೊಬ್ಬರನ್ನೇ ಮರೆಗೆ ಕರೆದೊಯ್ದು ಮೆಲ್ಲನೆ ಕೇಳುತ್ತಿದ್ದೇನೆಂದರೆ:—“ಈ ಹುಡುಗೆಯರಲ್ಲಿ ಯಾವಳನ್ನು ನೀನು ಮನಸಾ ಮೆಚ್ಚಿರುವೆಯೋ, ಅವಳು ಒಂದುವೇಳೆ ನಿನ್ನೊಡನೆ ಲಗ್ನ ವಾಗಲಿಕ್ಕೆ ಒಪ್ಪಿದರೆ ನೀನು ಅವಳನ್ನು ಮಡದಿಯಾಗಿ ಮಾಡಿಕೊಳ್ಳಲಿಕ್ಕೆ ಸಿದ್ಧನಿರುವೆಯಾ?” ನನ್ನ ಆ ಪ್ರಶ್ನೆಯಿಂದ ಅವರಲ್ಲಿಯ ಹಲವರು ನಾಲಿಗೆ ಕಚ್ಚಿಕೊಂಡರು; ಕೆಲವರು ಎಂದಿಗೂ ಸಿದ್ಧರಾಗೆವೆಂದು ಗೋಣು ಅಲ್ಲಾಡಿಸಿ ಹೇಳಿದರು; ಮತ್ತು ಕೆಲವರು ನಿಶ್ಚಯದ ಮುಖಚರ್ಯೆಯಿಂದ ‘ಸಾಧ್ಯ ವಿಲ್ಲೆ’ಂದು ಸ್ಪಷ್ಟವಾಗಿ ಆಡಿತೋರಿಸಿದರು. ಅವರು ಯಾವ ಕಾರಣಗಳನ್ನು ಮುಂದೆ ಮಾಡಿದರೋ ಅವು ವಿವಿಧಗಳಾಗಿದ್ದುವು. ಪ್ರತಿಯೊಬ್ಬನ ಸ್ಥಿತಿಯು ಅಗತಿಕವೂ, ಅವನಿಗೆ ದುರ್ಲಂಘ್ಯನೀಯಗಳಾದಂಥ ಅಡಚಣೆಗಳೂ ಇದ್ದವು.

ಅವರೆಲ್ಲರ ಅಭಿಪ್ರಾಯವೂ 'ನಾವು ಆ ಹುಡುಗೆಯರೊಡನೆ ಲಗ್ನವಾಗಲಾರೆವು' ಎಂಬದೊಂದೇ ಆಗಿತ್ತು.

ಅವರುಗಳ ಆ ಉತ್ತರದಿಂದ ನನ್ನ ಮನಸ್ಸಿಗೆ ಪೆಟ್ಟಾಯಿತು ಈ ವಸ್ತುಸ್ಥಿತಿಯು ಹಲವು ಮಂದಿ ತರುಣಿಯರ ಮನಸ್ಸಿಗೆ ಪೆಟ್ಟು ಕೊಡುವಂತಹದಂತೂ ಇದ್ದೇ ಇದೆ; ಆದರೆ ತೇಜಸ್ವೀ ಹಾಗು ವೈಯ್ಯಾರದ ವಿದ್ಯಾರ್ಥಿನಿಯರ ಮನಸ್ಸಿನಲ್ಲಿ ಇಂದಿನ ತರುಣರ ಬಗ್ಗೆ ಸಂಪೂರ್ಣ ಬೇಜಾರನ್ನುಂಟುಮಾಡುವಂಥದಿದೆ. ಅಂದಬಳಿಕ ಆ ಹೆಣ್ಣು ಹುಡುಗೆಯರ ಬಾಲ ಹಿಡಿದು ತಿರುಗುವ ಆ ಕಾಲೇಜಿಯನ್ ಹುಡುಗರು ಕೇವಲ ಬೇಜಬಾಬುದಾರರೂ ಉಲ್ಲುಗಳೂ ಆಗಿರುತ್ತಾರೇನು? ಅಥವಾ ಅವರುಗಳಿಗೆ ಸುಶಿಕ್ಷಿತ ತರುಣಿಯರ ಸಹವಾಸವು ಲೋಭನೀಯವೆನಿಸುತ್ತಿದ್ದರೂ ಕೂಡ ಲಗ್ನದ ಜಬಾಬುದಾರಿಕೆಯನ್ನು ಹೊರಲಿಕ್ಕೆ ಅವರು ಸಿದ್ಧರಿರುವುದಿಲ್ಲವಷ್ಟೆ? ವಸ್ತುಸ್ಥಿತಿಯೇನೋ ಹೀಗಿರುವುದೇ ನಿಜ. ಇಂದಿನ ತರುಣನು ತರುಣಿಯರಲ್ಲಿ ಪ್ರೇಮವಿಟ್ಟಾನು; ಆದರೆ ಅದನ್ನು ಕೇವಲ ಮೋಜಿಗೆಂದು ಇಟ್ಟಾನು! 'ಲಗ್ನದ ಹೊಣೆ' ಎಂಬ ಭಾರೀ ಶಬ್ದವನ್ನು ನಾವು ಬದಿಗಿರಿಸೋಣ; ಆದರೆ ಆ ತರುಣಿಯ ಸಹವಾಸದಲ್ಲಿ ತಾನು ಆಜನ್ಮವಿರಬೇಕೆಂದು ಆ ಭೃಂಗಿಗಳಿಗೆ ಎಂದೂ ಅನಿಸುವದಿಲ್ಲ. ಪ್ರೇಮದ ಜನರ ಅಧಃಪಾತವನ್ನು ಇವರು ಪ್ರಸಂಗಬಿದ್ದಾಗ ಸಹಜವಾಗಿ ಮಾಡುವರು ಇಷ್ಟೇ ಅಲ್ಲ, ಹಾಗೆ ತಾವು ಉಂಟುಮಾಡಿದ ಅಧಃಪತನದ ಕಡೆಗೆ ಅವರು ತಿರುಗಿ ಸಹ ನೋಡಲಿಕ್ಕಿಲ್ಲ! ಇದು ಏತರ ದ್ಯೋತಕವಾಗಿರುತ್ತದೆ? ಶಿಕ್ಷಣದಿಂದ ನಮ್ಮ ತರುಣರ ಸ್ತ್ರೀ-ದಾಕ್ಷಿಣ್ಯವು ಉಕ್ಕೇರಹತ್ತಿದೆ; ಆದರೆ ಸ್ತ್ರೀಯರನ್ನು ಸಂರಕ್ಷಿಸಿ ಅವರನ್ನು ಉಚ್ಚಸ್ಥಿತಿಗೆ ತಲುಪಿಸುವ ಅದೆಷ್ಟು ಪ್ರಯತ್ನಗಳು ಆ ತರುಣರ ನಡೆವಳಿಕೆಯಲ್ಲಿ ತೋರುವವು? ಪಾಶ್ಚಾತ್ಯ ದೇಶಗಳಲ್ಲಿ ತರುಣ-ತರುಣಿಯರು ಮನಬಿಚ್ಚಿ ಪ್ರೇಮದ ಕೊಡ ಕೊಳ್ಳಿಗಳನ್ನು ನಡೆಸುವರು; ಮತ್ತು ಮುಗ್ಧ ಮಿಲನದೊಳಗಿನ ಮೊಟ್ಟಮೊದಲಿನ ಹಾಗು ಕಟ್ಟಕಡೆಯ ಶಬ್ದಗಳು ಲಗ್ನವಾಗುವ ವಿಷಯದವೇ ಆಗಿರುತ್ತವೆ ಅಭಿವಚನಗಳನ್ನು ಕೊಟ್ಟರೂ ಅವರು ಲಗ್ನವಾಗುವ ಬಗ್ಗೆ: ಹಾಗು ಹಾಗೆ ಕೊಟ್ಟ ವಚನಗಳನ್ನು ಪಾಲಿಸಲಿಕ್ಕೆ ಅತ್ತಣದ ತರುಣರು ಎಂದಿಗೂ ಹಿಂದುಮುಂದೆ ನೋಡುವದಿಲ್ಲ. ಪಾಶ್ಚಾತ್ಯರ ಅನುಕರಣಮಾಡಲಿಕ್ಕೆ ಹಾತೊರೆಯುತ್ತಿರುವ ನಮ್ಮ ತರುಣರು ಅವರ ಈ

ನೀತಿಮತ್ತೆಯನ್ನು ಕಂಡು ನಾಚಬೇಕು.

ಇಂದಿನ ತರುಣರಲ್ಲಿ ಭಾವನೆಯ ಉತ್ಕಂಠತೆ ಇಲ್ಲ, ನಿಶ್ಚಯದ ನಿರ್ಧರವಿಲ್ಲ, ಧ್ಯೇಯದ ನಿಕಟವಿಲ್ಲ; ಅದರಿಂದ ಅವರು ತಮ್ಮ ಹಾಗು ಬೇರೆಯವರ ಆಯುಷ್ಯವನ್ನು ಸ್ವಂತದ ತಾಳಗೆಟ್ಟ ವರ್ತನದಿಂದ ಹಾಳುಮಾಡಿಬಿಡುತ್ತಾರೆ. ಮಿತ್ರ-ಸ್ನೇಹಿತರ ಸವಿಮಾತುಗಳಿಂದ ಮೋಸಪಟ್ಟ ತರುಣಿಯರ ಸಂಖ್ಯೆಯು ದಿನದಿನಕ್ಕೆ ಹೆಚ್ಚುತ್ತಲಿದೆ ಎಂಬ ನೋಟವು ತರುಣರಿಗೆ ನಿಜವಾಗಿಯೂ ಒಪ್ಪತಕ್ಕದ್ದಲ್ಲ, ಇಂದಿನ ಯುವಕರ ವೃತ್ತಿಯನ್ನು ಪರೀಕ್ಷಿಸಿಕೊಳ್ಳದೆ ಅವರಿಗೆ ಸರ್ವಸ್ವವನ್ನೂ ಅರ್ಪಣಮಾಡುವ ಭೋಳೇ ಕುಮಾರಿಕೆಯರ ಬಗ್ಗೆ ಎಷ್ಟು ಹಳಹಳಿಸಿದರೂ ಅಲ್ಪವೇ ಸರಿ! ಹಿರಿಯರು ಪ್ರೀತಿವಿವಾಹಕ್ಕೆ ತತ್ವತಃ ವಿರುದ್ಧರಾಗಿಲ್ಲ ಎಂಬ ವಿಧಾನವನ್ನು ನೂರಕ್ಕೆ ಎಪ್ಪತ್ತೈದು ಜನ ತಂದೆ-ತಾಯಿಗಳ ಪರಿಯಿಂದ ನಾನು ಜಾಹೀರಪಡಿಸುತ್ತೇನೆ ಯಾವನೊಬ್ಬ ತರುಣನು ಹುಡುಗೆಯ ತಂದೆಯ ಬಳಿಯಲ್ಲಿ ಅವಳನ್ನು ತನಗೆ ಕೊಡಬೇಕೆಂದು ಕೇಳಿದರೆ, ಅದು ಸಾಧ್ಯವಾಗದಿದ್ದರೂ ಅವನು ಸಂಭಾವಿತತನದಿಂದಲೇ ಇಲ್ಲೆಂದು ಹೇಳಬಹುದು. ಹಿರಿಯರು ಪ್ರೀತಿ ವಿವಾಹಕ್ಕೆ ಇಂದಿಗೆ ಅಷ್ಟು ಹೆಚ್ಚು ವಿರೋಧ ಮಾಡುತ್ತಿರುವುದಾದರೂ ಅದರಿಂದ ಉತ್ಪನ್ನವಾಗುವ ಆಪತ್ತಿಗಾಗಿಯೇ. ಆಪತ್ತಿಯುಂಟಾದರೂ ಲಗ್ನವಾಗಿಬಿಟ್ಟರೆ ಎಲ್ಲ ವ್ಯವಹಾರವೂ ಸರಳೀಕ ಬಗೆಹರಿಯುತ್ತದೆ; ಆದರೆ ವಿಪರೀತ ಪ್ರಸಂಗವೊದಗಿದರೆ, ತರುಣನು ಆ ತರುಣಿಯೊಡನೆ ಲಗ್ನವಾಗಲಿಕ್ಕೆ ಒಪ್ಪದಿದ್ದರೆ ಆ ತರುಣಿಯ ಆಯುಷ್ಯವದೆಂತಾದೀತೆಂಬ ವಿಚಾರದಿಂದಲೇ ಹುಡುಗಿಯ ತಂದೆ-ತಾಯಿಗಳಿಗೆ ನಡುಗು ಹುಟ್ಟುತ್ತದೆ

ಇನ್ನು ತರುಣರಾದರೂ ಪ್ರೀತಿವಿವಾಹಕ್ಕದೆಷ್ಟು ಅನುಕೂಲರಿರುವರೆಂಬದನ್ನು ನೋಡೋಣ. ಧನವಂತನ ಒಬ್ಬೊಂಟಿಗ ಸುಂದರಿಯಾದ ಮಗಳ ಮೇಲೆ ಪ್ರಾಣಗಳನ್ನು ನೀವಾಳಿಸಿ ಚೆಲ್ಲಲಿಕ್ಕೆ ಎಲ್ಲ ತರುಣರೂ ಸಿದ್ಧರಾದಾರು; ಆದರೆ ಅದರಲ್ಲಿ ದುಡ್ಡಿನ ಪ್ರೇಮವು ಹೆಚ್ಚೋ, ರೂಪದ ಪ್ರೇಮವು ಹೆಚ್ಚೋ ಅಥವಾ ಅವಳಲ್ಲಿಯ ಗುಣಗಳ ಪ್ರೇಮವು ಹೆಚ್ಚೋ ಇದಾವುದರ ನಿರ್ಣಯವೂ ಆಗುವದಿಲ್ಲ. ಪ್ರೀತಿ ವಿವಾಹವೆಂಬುದೊಂದು ಸಾಹಸವೇ ಇದೆ; ಮತ್ತು ಅದಕ್ಕಾಗಿ ತರುಣರು ಬಹು ದೊಡ್ಡ ಸ್ವಾರ್ಥತ್ಯಾಗ ಮಾಡಬೇಕಾಗುವದು. ವರದಕ್ಷಿಣೆಯ ರಕಮಿಗೆ ಎರವಾಗಬೇಕಾದೀತೆಂಬದೊಂದೇ ಭೀತಿಯು ತರುಣರ ಮೋರೆಗಳನ್ನು ಒಮ್ಮೆಲೆ ಬತ್ತಿಸಿಬಿಟ್ಟೀತು. ಯಾವ ಸುಶಿಕ್ಷಿತ ತರುಣರಿಗೆ ತಮ್ಮ

ಲಿಲಾವು ಆಗಬೇಕೆಂದೆನಿಸುತ್ತದೋ, ಅವರುಗಳು ಕನ್ಯಾಪರೀಕ್ಷೆಯ ಸ್ವಾತಂತ್ರ್ಯದ ಬಗ್ಗೆ ಬೇಕಾದಷ್ಟು ಬೊಗಳಬೇಕು. ಪ್ರೇಮ, ದಿವ್ಯ ಪ್ರೇಮ, ಬೌದ್ಧಿಕ ಸ್ನೇಹ, ಸ್ತ್ರೀದಾಕ್ಷಿಣ್ಯ ಮುಂತಾದ ಭಾವನೆಗಳು ಜಲ, ಸ್ಥಳ, ಕಾಷ್ಠ, ಪಾಷಾಣಗಳಲ್ಲಿ ಯಾರಿಗೆ ಕಾಣಿಸುವವೋ ಅಂಥ ಇಂದಿನ ಯುವಕರು ಲಗ್ನಕ್ಕೆ ಸಿದ್ಧರಾಗುವುದು ಪ್ರೇಮಕ್ಕಾಗಿಯೋ ಅಥವಾ ದುಡ್ಡಿಗಾಗಿಯೋ ಇಲ್ಲವೆ ಶರೀರ ಧರ್ಮದ ಆವಶ್ಯಕತೆಗಾಗಿಯೋ? ಇಂದಿನ ಲಗ್ನಸಂಸ್ಥೆಯ ಸಂತೆಯ ಸ್ವರೂಪವನ್ನು ನಿರೀಕ್ಷಿಸಿದರೆ, ತರುಣರಿಗೆ ಪ್ರೀತಿವಿವಾಹವಿರಬೇಕೆಂಬ ಹಟಹಿಡಿಯುವ ಹಕ್ಕು ಕೊಂಚವೂ ಲಭಿಸಲಾರದು. ಕಾಮಿನಿಯು ಧೀರೋದಾತ್ತರಿಗಷ್ಟೇ ದೊರಕುತ್ತಿರುತ್ತಾಳೆ. ಯಾವನಿಂದ ದ್ರವ್ಯದ ಲೋಭವನ್ನು ಸಂಯಮನಗೊಳಿಸಲಿಕ್ಕಾಗುವುದಿಲ್ಲವೋ ಅಂಥವನ ಆ ಭಾವನೆಗಳು ಅದೆಷ್ಟು ಬೆಲೆಬಾಳುವವು? ಮತ್ತು ಅಂಥವನ ಭಾವು ಅದೆಷ್ಟು ಬಿದ್ದೀತು? ಹಾಗು ಪ್ರೀತಿವಿವಾಹದ ಡಂಗುರಸಾರುವ ಇಂದಿನ ತರುಣರ ಮನಸ್ಸಿನೊಳಗಿನ ಸಾತ್ವಿಕತೆಯ ಅಂಶವು ಲೋಪವಾಗಿಬಿಟ್ಟಿದ್ದು, ಅವರ ಕಾಮುಕ ಭಾವನೆಯು ಮಾತ್ರ ಉಚ್ಛೃಂಖಲವಾಗಿ ಕುಣಿಯುತ್ತಿರುವದು ಕಂಡುಬಂದೀತು.

ವಿಪರೀತ ಪರಿಣಾಮದ ಮೂಲಕ ವಿರೋಧೀ ವೃದ್ಧಜನರು; ಹೊಣೆಗಾರಿಕೆಯನ್ನು ಹೊರಲಾರದ ಹೇಡಿವೃತ್ತಿಯ ತರುಣರು; ಅನಭ್ಯಸ್ತರೂ ಭಿಡಸ್ತರೂ ಮತ್ತು ಇಕ್ಕಟ್ಟಿನ ವಾತಾವರಣದಲ್ಲಿ ಬೆಳೆದುದರಿಂದ ಅಪ್ರಬುದ್ಧರೂ ಆದ ತರುಣಿಯರು. ಹೀಗೆ ಸ್ಥಿತಿಯಿರಲು ನಿಜವಾಗಿ ಹೇಳುವದೆಂದರೆ, ಪ್ರೀತಿವಿವಾಹದ ಹೆಸರು ಕೂಡ ಕೇಳಬರಬಾರದು. ವಸ್ತುಸ್ಥಿತಿಯಾದರೂ ಹಾಗೆಯೇ ಇದೆ. ಅದಕ್ಕೆ ಬೇರೆ ಆನುಷಂಗಿಕ ಕಾರಣಗಳೂ ಬಂದು ಕೂಡಿರುತ್ತವೆ. ಆರ್ಥಿಕ ದೈನ್ಯದಿಂದ ಇಂದಿನ ತರುಣರು ಹೇಗೆ ಎಲ್ಲ ಬಗೆಯಿಂದಲೂ ಗೊಂದಲಕ್ಕೀಡಾಗಿರುವರೋ ಅದರಂತೆ ಎಂದೂ ಯಾರದೂ ಸ್ಥಿತಿಯಾಗಿರಲಿಲ್ಲ ಶಕ್ತಿ. ಯುಕ್ತಿ. ವಿದ್ಯೆ, ಇಚ್ಛೆ, ಆವಶ್ಯಕತೆ ಇವುಗಳೆಲ್ಲವೂ ಇರುತ್ತಿರಲು, ಇಂದಿನ ತರುಣನು ಬರಬರುತ್ತ ಹಿಡಿ ಅನ್ನಕ್ಕೆ ಕೂಡ ಗತಿಯಿಲ್ಲದವನಾಗಹತ್ತಿದ್ದಾನೆ ಸ್ವಂತದ ಹೊಟ್ಟೆಗಾಗಿ ಆತನು ಬೇರೆಯವರ ಮೋರೆಯನ್ನು ನೋಡಬೇಕಾಗುವದು ಆತನು ಮನಸ್ಸಿನಲ್ಲಿ ಆಕಾಂಕ್ಷೆಗಳನ್ನಾದರೂ ಯಾವವನ್ನು ಹಿಡಿಯಬೇಕು? ಮತ್ತು ಅವು ಈಡೇರುವ ಬಗೆಯಾದರೂ ಹೇಗೆ? ಹಿರಿಯರನ್ನವಲಂಬಿಸಿರುವ ಸ್ಥಿತಿಯು ದಿನದಿನಕ್ಕೆ ಅಪರಿಹಾರ್ಯವಾಗುತ್ತಲಿದೆ;

ಆದರಿಂದ ಹಿರಿಯರು 'ಇಂಥವಳೊಡನೆ ಲಗ್ನವಾಗು' ಎಂದು ಹಟಹಿಡಿದರೆ. ಕಾಲೇಜಿನೊಳಗಿನ ಗೆಳತಿಗೆ ಕೊಟ್ಟ ವಚನವನ್ನು ಗಾಳಿಯ ಪಾಲುಮಾಡಿ, ಹಿರಿಯರು ಹೇಳಿದವಳೊಡನೆ ಆತನು ಲಗ್ನವಾಗಬೇಕಾತ್ತದೆ. ಇಪ್ಪತ್ತೈದು-ಮೂವತ್ತು ವರ್ಷಗಳ ಮುಂಚಿನ ಪದವೀಧರರಲ್ಲಿ 'ಒದೆದಲ್ಲಿ ನೆಲದೊಳಗಿಂದ ನೀರು ಹೊರಡಿಸೇನೆ'ಂಬ ಹೆಮ್ಮೆಯಿರದಿದ್ದರೂ ಸಾಹೇಬನಿಂದ ತಿಂಗಳವರೆಗೆ ಒದೆಸಿಕೊಂಡು ಕನಿಷ್ಟಪಕ್ಷ ಐವತ್ತು ರೂಪಾಯಿಗಳನ್ನಾದರೂ ಒಂದನೇ ತಾರೀಖಿಗೆ ಎಣಿಸಿ ಪಡೆದೇನೆಂಬ ಯೋಗ್ಯತೆಯಿದ್ದಿತು ಆ ಕಾಲಕ್ಕೆ ಆತನಿಗೆ ಒಮ್ಮೊಮ್ಮೆ ತನ್ನ ಮನದಿಚ್ಛೆಯನ್ನು ಪೂರೈಸಿಕೊಳ್ಳಲಿಕ್ಕೂ ಬರುತ್ತಿತ್ತು. ಯಾವಳೊಬ್ಬ ಹುಡುಗೆಯನ್ನು ಇಂದಿನ ತರುಣನು ವರಿಸಬೇಕೆಂದು ಕೇಳಿದರೆ, ಹಾಗು ಆಕೆಯ ತಂದೆಯು 'ನೀವೇನು ಗಳಿಸುತ್ತೀರಿ?' ಎಂದು ಸಹಜವಾಗಿ ಕೇಳಿದರೆ ಕೂಡಲೆ ಅವನ ವ್ಯಕ್ತಿತ್ವವೇ ನೆಲಪಟ್ಟಾಗಿ ಬಿಡುವುದು ಇನ್ನು ಆತನು ಲಗ್ನದ ಅಭಿವಚನವನ್ನಾದರೂ ಅದಾವ ಆಧಾರದಿಂದ ಕೊಡಬೇಕು? ಆದರ ಪರಿಣಾಮವು ಆಗಿರುವುದೇನಂದರೆ, ಪರಕೀಯ ಸತ್ತೆಯ ಸಂಕಟವನ್ನು ನಾವು ಹೇಗೆ ರೂಢಿಯ ಮೂಲಕ ಬೊಬ್ಬಾಟವಿಲ್ಲದಂತೆ ಸಹಿಸುತ್ತಿರುವೆವೋ, ಅದರಂತೆಯೇ ಪ್ರಣಯುಹೀನ ಪ್ರೌಢವಿವಾಹಗಳನ್ನೂ ನಾವು ವಹಿಸುತ್ತೇವೆ. ಹುಡುಗೆಯು ಇಪ್ಪತ್ತೈದು ವರ್ಷದವಳು; ಹಾಗು ವರನು ಮೂವತ್ತೈದು ವರ್ಷದವನು. ಇಂಥವರ ಲಗ್ನಗಳನ್ನು ಹೊಂದಿಸುವ ಇಂದಿನ ಪದ್ಧತಿಯು ತೀರ ತೊಟ್ಟಿಲದೊಳಗಿನ ವಧೂ-ವರರ ಲಗ್ನ ಕೂಡಿಸುವ ಪದ್ಧತಿಗಿಂತ ವಿಶೇಷ ಸುಧಾರಿಸಿದ್ದಿಲ್ಲ. ಅವರು ಪರಸ್ಪರರನ್ನು ಪರೀಕ್ಷಿಸಿ ಒಪ್ಪಿರುತ್ತಾರಲ್ಲವೆ? ಎಂದು ಯಾರಾದರೂ ಪ್ರಶ್ನೆ ಮಾಡಬಹುದು; ಆದರೆ ಅಷ್ಟರಿಂದ ಅವರಲ್ಲಿ ಪ್ರೀತಿವಿವಾಹವಾಗುವದೆಂದು ಅನ್ನುವದು ತೀರ ತಪ್ಪಾಗುವದು. ತಿಳುವಳಿಕೆಯುಳ್ಳವನ ನೈಸರ್ಗಿಕ ಪ್ರವೃತ್ತಿಯೆಂದರೆ, ಯಾವದೊಂದು ಒಡವೆಯ ಬಗ್ಗೆ ಆತನ ಮನಸ್ಸಿನಲ್ಲಿ ಪ್ರೇಮವುಂಟಾಗಬೇಕು; ಹಾಗು ಬಳಿಕ ಆತನಿಗೆ ಅನಿಸಬೇಕೇನೆಂದರೆ, ಆ ಒಡವೆಯು ತನ್ನಲ್ಲಿ ನಿರಂತರವಾಗಿರಬೇಕು; ಆ ಮೇಲೆ ಅದೊಂದು ಸಾಧಾರಣವಾದ ಸೂಜಿಯೇ ಆಗಿರಲಿ; ಇಲ್ಲವೆ ಸಹಚಾರಿಣಿಯೇ ಇರಲಿ! ಅಂದ ಮೇಲೆ ಇಂಥ ಭಾವನಾಶೂನ್ಯ ಪ್ರೌಢವಿವಾಹವು ಪ್ರಣಯವಿವಾಹವನ್ನೇ ಏಕೆ, ಆದರೆ ಮಾನವೀ ಪ್ರವೃತ್ತಿಯನ್ನೂ ಕೂಡ ತೀರ ಉಪಹಾಸಗೊಳಿಸುತ್ತದೆ. ಇದೆಲ್ಲ ಅನರ್ಥಕ್ಕೆ ಭಾವನೆ

ಯನ್ನು ಕೊಲೆಗೆಯ್ದು ಬಿಡುವ ಆರ್ಥಿಕ ದೈನ್ಯವೇ ಕಾರಣವಾಗಿರುತ್ತದೆ.

ಪ್ರೀತಿವಿವಾಹದ ಕಡೆಗೆ ಸಮಾಜವಾದರೂ ಅಷ್ಟೊಂದು ಸಹಾನುಭೂತಿಯಿಂದ ನೋಡತೊಡಗಿರುವದಿಲ್ಲ. ಉಭಯ ಸ್ತ್ರೀ-ಪುರುಷರ ಮನಸ್ಸಿನಲ್ಲಿ ಅಂಥ ಕೆಲ ವಿಚಾರವುಂಟಾಗುವ ಮೊದಲೇ ಸಮಾಜವು ಅವರುಗಳ ಅನಿಷ್ಟ ಸಂಬಂಧವನ್ನು ಜೋಡಿಸಿ ಬಿಟ್ಟು ಹುಲುಬಿನ ಡಂಗುರವನ್ನು ಸಾರಹತ್ತುತ್ತದೆ. ಆ ಡಂಗುರದ ಭೀಕರ ನಿನಾದದ ಮೂಲಕ ಉಭಯತರು ಡಾಣಾಡಂಗುರವಾಗಿ ಒಬ್ಬರೊಬ್ಬರ ಮೋರೆ ನೋಡುವದನ್ನು ಕೂಡ ವರ್ಜ್ಯಮಾಡಬೇಕಾಗುತ್ತದೆ ಲಗ್ನದಲ್ಲಿ ಪ್ರೇಮವೆಂಬುದೇನು ಗೌಡಬಂಗಾಲ ವಿದೆ? ಎಂಬದರ ಕಲ್ಪನೆಯೂ ಇರದ ನಮ್ಮಗಳ ಕಗ್ಗ ಸಮಾಜವು ಪ್ರೀತಿವಿವಾಹದ ಬಗ್ಗೆ ಕುತ್ಸಿತ ಟೀಕೆಯನ್ನು ಮಾಡುತ್ತ ಏರಿ ಹೋಗುತ್ತದೆ. ತಮ್ಮ ಮನಸ್ಸಿನಲ್ಲಿ ಏನೂ ಇರದಾಗ ಯಾವ ಸಮಾಜವು ತಮ್ಮ ಮೇಲೆ ಕೆಂಡಕಾರುವದೋ, ಅಂಥ ಸಮಾಜವು ನಿಜವಾಗಿಯೂ ಪ್ರೀತಿವಿವಾಹ ಮಾಡಿದರೆ ಅದು ಭ್ರಷ್ಟವಾದ ಕಾಗೆಯ ಮರಿಯಂತೆ ತಮ್ಮನ್ನು ಚುಚ್ಚಿ-ಚುಚ್ಚಿ ಕೊಂದು ಬಿಟ್ಟೀತೆಂಬ ಅಂಜಿಕೆಯು ತರುಣರಿಗೆ ಅನಿಸುತ್ತಿರುತ್ತದೆ ಆ ಸಮಾಜದ ಪೊಳ್ಳು ಬೆದರಿಕೆಯು ವಿಶೇಷವಾಗಿ ಹೆಂಗಸರನ್ನು ಹೆಚ್ಚು ಹೆದರಿಸುತ್ತದೆ. ಗಂಡಸು ತನ್ನ ಕೆಲಸದಲ್ಲಿ ನಿಮಗ್ನವಾಗಿರುತ್ತಾನೆ. ಆತನ ಗಳಿಕೆಯಂತೆ ಹಾಗು ಕಚೇರಿಯೊಳಗಿನ ದರ್ಜೆಯಂತೆ ಆತನ ಮನ್ನಣೆಯು ಸ್ವತಂತ್ರವಾಗಿಯೇ ಇರುತ್ತದೆ; ಮತ್ತು ಅದು ಲೋಕನಿಂದೆಯ ಮಂಜಿನಲ್ಲಿ ಕಣ್ಮರೆಯಾಗುವುದು ಶಕ್ಯವಿರುವುದಿಲ್ಲ. ತದ್ವಿರುದ್ಧವಾಗಿ ಸ್ತ್ರೀಯರಿಗೆ ಸ್ವತಂತ್ರ ಮಹತ್ವವಿರುವದಿಲ್ಲ; ಪ್ರತಿಷ್ಠೆಯಿಲ್ಲ; ಮತ್ತು ಅವರಿಗೆ ಭೆಟ್ಟಿಯಾಗುವವರೆಂದರೆ, ಮಂದಿಯನ್ನಾಡಿಕೊಳ್ಳುವ ಕೆಲಸವಲ್ಲದೆ ಬೇರೆ ಉದ್ಯೋಗವಿರದಂತಹ ಸ್ತ್ರೀಜನರು ರೂಢಿಯ ವಿರುದ್ಧವಾಗಿ ಲಗ್ನವಾಗಲಿಕ್ಕೆ ಸ್ತ್ರೀಯರು ಸಿದ್ಧರಾಗಿರುವದಿಲ್ಲ. ಯಾಕಂದರೆ ಅವರಿಗೆ ಆ ಸಾಮಾಜಿಕ ಬಹಿಷ್ಕಾರದ ಅಂಜಿಕೆಯು ಭಯಂಕರವೆನಿಸುತ್ತದೆ. ಪ್ರತಿಷ್ಠೆಗಾಗಿ ಹಪಾಪಿಸಿದ್ದ ಸ್ತ್ರೀಸ್ವಭಾವಕ್ಕೆ ಸಾಮಾಜಿಕ ಅವಹೇಲನೆಯೆಂದರೊಂದು ವಿದ್ಯುತ್ ತಾಡನವೇ ಎಂದೆನಿಸುತ್ತದೆ ಪ್ರಣಯವಿವಾಹ-ಮಿಶ್ರ ವಿವಾಹಗಳಷ್ಟೇ ಏಕೆ, ಅತ್ಯಂತ ಆವಶ್ಯಕವಾದಂಥ ಪುನರ್ವಿವಾಹವೂ ಕೂಡ ಘಟಿಸದಿದ್ದ ಕಾರಣವು ಪುರುಷರಿಗಿಂತ ಸ್ತ್ರೀಯರೇ ರೂಢಿಯ ವಿರುದ್ಧವಾಗಿ ಲಗ್ನವಾಗಲಿಕ್ಕೆ ಸಿದ್ಧರಾಗದಿರುವರು.

ಕನ್ಯೆಯಲ್ಲಿ ವಿಪರೀತ ನಾಚುವದು; ಇಲ್ಲಲ್ಲ ಭಿಡೆಯು ಇರುತ್ತದೆ; ಅವಳಿಂದ ತನ್ನ ಮನೋಗತವನ್ನು ತರುಣನೆದುರಿಗೆ ಆಡಿತೋರಿಸುವದಾಗುವದಿಲ್ಲ. ಆಗ ತರುಣನು ನಿರಾಶೆಗೊಂಡು ಅವಳ ದಾರಿಯನ್ನು ಬಿಟ್ಟುಬಿಡುತ್ತಾನೆ; ಹಾಗು ತನ್ನ ಹಿರಿಯರು ನಿಶ್ಚಿತಗೊಳಿಸಿದ ಲಗ್ನಕ್ಕೆ ಸಿದ್ಧವಾಗುತ್ತಾನೆ. ಅದರಿಂದ ಆತನ ವಿವಾಹವಾಗಿ ಹೋಗುತ್ತದೆ. ಬಳಿಕ ಕೆಲ ದಿನಗಳ ಮೇಲೆ ಆ ಮೊದಲಿನ ತರುಣಿಯು ವಿಚಾರಗಳು ಅವಳ ಬಾಯಿಂದ ಹೊರಬಿದ್ದರೆ ಬೀಳುತ್ತವೆ; ಆದರೆ ಆಗ ಅವುಗಳ ಪ್ರಯೋಜನವೇನು? ಸ್ತ್ರೀಸ್ವಭಾವವು ಭ್ರಮರವೃತ್ತಿಯದಿರುವದಿಲ್ಲ. ಒಳಿತಾಗಲಿ ಕೇಡಾಗಲಿ ಅವರು ಒಮ್ಮೆ ಯಾವನನ್ನು ಮನಸ್ಸಿನಿಂದ ವರಿಸುವರೋ, ಅದಕ್ಕೆ ಅವರು ಕೊನೆಯವರೆಗೂ ಅಂಟಿಕೊಂಡಿರುತ್ತಾರೆ. ಅಚಲನಿಷ್ಠೆಯೆಂಬುದು ಸ್ತ್ರೀಯರ ಸ್ವಭಾವದೊಳಗಿನದೊಂದು ದೋಷವಾಗಿದೆ; ಹಾಗು ಅದು ಸರ್ವಸಾಧಾರಣವಾಗಿ ಪ್ರತಿಯೊಬ್ಬ ಹೆಂಗಸರಲ್ಲಿಯೂ ಇದ್ದೇ ಇರುತ್ತದೆ. ಆದರಿಂದ ಅವರು ವ್ಯಸನಗ್ರಸ್ತ, ದುಷ್ಟ, ಕುರೂಪಿ, ವ್ಯಾಧಿಷ್ಟ, ಪಶುವೃತ್ತಿ ಪುರುಷನನ್ನು ಆಪತ್ಕಾಲದಲ್ಲಿ ಕೂಡ ತ್ಯಜಿಸುವದಿಲ್ಲ. ಅವರ ಆ ಅಚಲ ನೈಸರ್ಗಿಕ ನಿಷ್ಠೆಗೇ ಪತಿವ್ರತಾಧರ್ಮ ಎಂಬ ಹೆಸರು. ಅವರ ಆ ಭಿಡಸ್ತ ಸ್ವಭಾವದ ಮೂಲಕ ಪರಿಣಾಮವಾಗುತ್ತದೇನಂದರೆ, ಅವರು ಸ್ವಂತದ ಸುಖಕ್ಕೆ ನಿರಂತರವೂ ಎರವಾಗಬೇಕಾಗುತ್ತದೆ. ಬೇರೆಯವನೊಡನೆ ಆಕೆಯು ಲಗ್ನವಾದರೆ, ನಾಲ್ಕಾರು ಮಕ್ಕಳು-ಮರಿಗಳಾಗಿ ಆತನೊಡನೆ ಲೌಕಿಕ ದೃಷ್ಟಿಯಿಂದ ಅವಳ ಸಂಸಾರವು ಯಶಸ್ವೀಯಾದರೂ ಕೂಡ ಅವಳು ಅನನ್ಯನಿಷ್ಠ ಶುದ್ಧವಾದ ಆನಂದಕ್ಕೆ ಎರವಾಗಬೇಕಾಗುತ್ತದೆ. ಅವರ ಭಿಡಸ್ತನದ ಮೂಲಕ ಅವರು ತಮ್ಮ ದುಃಖದಾಯಕ ಮನಃಸ್ಥಿತಿಯನ್ನು ಹೆರವರೆದುರು ಆಡಿತೋರಿಸುತ್ತಿರದಿದ್ದರೂ ತಾರುಣ್ಯದಲ್ಲಿ ಪ್ರೇಮದ ವಿಷಯದಲ್ಲಾದ ನಿರಾಶೆಯು ಅವರ ಎಲ್ಲ ಆನಂದದ ಮೇಲೂ, ಹುಮ್ಮಸದ ಮೇಲೂ ಒಂದೇಸವನೆ ಹೆಪ್ಪುಹಾಕುತ್ತಿರುತ್ತದೆ. ಇತ್ತೀಚೆಗೆ ಕನ್ಯೆಯರ ವಯುಸ್ಸು ಹೆಚ್ಚಿರುತ್ತದೆ ಅವರ ಮನೋಬಯಕೆಗಳು ಸ್ಥಿರಗೊಂಡಿರುತ್ತವೆ. ಇಷ್ಟೇ ಅಲ್ಲ, ಅವರ ಮನಸ್ಸು ಒಬ್ಬಿಲ್ಲೊಬ್ಬನ ಮೇಲೆ ಕುಳಿತಿರತ್ತದೆ. ಇಂಥ ಸ್ಥಿತಿಯಲ್ಲಿ ಕೇವಲ ಅವರುಗಳ ಭಿಡಸ್ತತನದ, ಶಾಲೀನತೆಯ ಹಾಗು ತಮ್ಮ ಹಿರಿಯತನದ ಅಧಿಕಾರದ ಲಾಭಪಡೆದು ಅವರ ಇಚ್ಛೆಯ ವಿರುದ್ಧವಾಗಿ ತಂದೆ-ತಾಯಿ-ಪಾಲಕರು ಜೊತೆಗೂಡಿಸಿದ ಅವರ

ಲಗ್ನಗಳು ಸುಖದ ಭಾಗವನ್ನು ಅವರ ಉಡಲಿಗೆ ಬೀಳಗೊಡುವದಿಲ್ಲವೆಂಬು
ದೊಂದು ಮಹತ್ವದ ಬಾಬು ಆಗಿದ್ದರೂ ಪಾಲಕರ ಲಕ್ಷ್ಯವು ಅದರ ಕಡೆಗೆ
ಹೋಗುವದಿಲ್ಲ. ಭಿಡಸ್ತತನದಿಂದ ತಾವು ಸ್ವಂತದ ಮೇಲೆ ಎಂಥ ಘೋರ
ಅನರ್ಥವನ್ನೆಳೆದುಕೊಳ್ಳುತ್ತಿರುತ್ತೇವೆಂಬ ಕಲ್ಪನೆಯು ಯುವತಿಯರಿಗುಂಟಾ
ಗುವದಿಲ್ಲ; ಹಾಗು ಅವರಿಗೆ ತಮ್ಮ ಅಭಿಪ್ರಾಯವನ್ನು ಬಿಚ್ಚಿಹೇಳುವ ನಿಕ
ರದ ಧೈರ್ಯವೂ ಆಗುವುದಿಲ್ಲ.

ಇನ್ನು ಯಾವಳೊಬ್ಬ ತರುಣಿಯು ತನ್ನ ಮನೋಗತವನ್ನು ತರುಣ
ನಿಗೆ ತಿಳಿಸಿದರೂ ಕೂಡ ಆ ತರುಣನದಾದರೂ ಪ್ರೀತಿವಿವಾಹವಾಗುವ ಸಿದ್ಧತೆ
ಎಲ್ಲಿರುತ್ತದೆ? ಇದಕ್ಕೊಂದು ಪ್ರತ್ಯಕ್ಷ ನಡೆದ ಉದಾಹರಣೆಯನ್ನೇ ಹೇಳುತ್ತೇನೆ:
ನನ್ನೊಬ್ಬ ಗೆಳೆಯನ ಮಗಳು ದಿನಾಲು ನಾರಾಯಣ ಪೇಟೆಯ ದಾರಿಯಿಂದ
ಫರ್ಗ್ಯೂಸನ್ ಕಾಲೇಜಿಗೆ ಹೋಗುತ್ತಿದ್ದಳು. ದಾರಿಯಲ್ಲಿ ವಾಸಿಸುತ್ತಿದ್ದ
ಅವಳ ವರ್ಗದೊಳಗಿನ ಒಬ್ಬ ತರುಣನ ಮೇಲೆ ಅವಳ ಮನಸ್ಸು ಕೂತಿತು.
ಅವನಾದರೂ ಪಾಳತಿಯಿಟ್ಟು ಆಕೆ ಬರುವ ಹೊತ್ತಿಗೆ ದಿನಾಲು ತನ್ನ ಮನೆಯ
ಬಾಗಿಲಲ್ಲಿ ನಿಂತಿರುತ್ತಿದ್ದನು; ಅವಳೊಡನೆ ಕಾಲೇಜಿಗೆ ಹೋಗಿ-ಬರುವದನ್ನೂ
ಮಾಡುತ್ತಿದ್ದನು. ಆ ಹುಡುಗೆಯು ಸ್ವರೂಪದಿಂದ ಕೇವಲ ಸುಂದರಿ;
ಸಾವಿರರಲ್ಲೊಬ್ಬ ಹುಡುಗೆಯಾಗಿದ್ದಳು. ಅಲ್ಲದೆ ನಿರೋಗಿಯೂ ಹುಮ್ಮಸಿ
ನವಳೂ ಆಗಿದ್ದಳು. ಆ ತರುಣನು ತನ್ನಲ್ಲಿ ಅನುರಕ್ತನಾಗಿರುವನೆಂದು ಆಕೆಗೆ
ತಿಳಿಯಿತು. ಅವಳ ಹಿರಿಯರು ಅವಳಿಗೆ ಸಂಪೂರ್ಣ ಸ್ವಾತಂತ್ರ್ಯವೀಯ
ತಕ್ಕಂಥವರಿದ್ದರು. ಅದರಿಂದ ಅವಳು ದಿಟ್ಟತನದಿಂದ ಆ ತರುಣನ ಹೆಸರು-
ದೆಸೆಗಳನ್ನು ದೊರಕಿಸಿ, ತೀರ ಮಾಮೂಲಿನ ಆದರೆ ಸ್ವಂತದ ಮನೋಗತ
ವನ್ನು ಪ್ರಕಟಿಸುವಂತಹ ಪತ್ರವನ್ನು ಅವನಿಗೆ ಕಳಿಸಿದಳು. ಆತನು ಆ ಪತ್ರ
ಕ್ಕೆ ಸಮ್ಮತಿ-ಅಸಮ್ಮತಿ ಪ್ರಕಟಿಸುವ ಬದಲು ಇಲ್ಲವೆ ಆ ಪತ್ರವನ್ನು ಹರಿದೊಗೆ
ಯುವ ಬದಲು, ತನ್ನ ಪಿತೃಭಕ್ತಿಯನ್ನು ಬಡಿದೆಬ್ಬಿಸಿ ಅದನ್ನು ತನ್ನ ತಂದೆಗೆ
ಒಯ್ದು ಕೊಟ್ಟನು. ಆ ತರುಣನಿಗೆ ತನ್ನ ಸಂಯಮದ ಹಾಗು ನೀತಿಯ
ಹೆಚ್ಚಳವನ್ನು ತೋರಬೇಕಿತ್ತಿತೋ ಇಲ್ಲವೆ ಅನಾಯಾಸವಾಗಿ ಕುಚೇಷ್ಟೆ
ಮಾಡುವ ಸಾಧನವು ಕೈಗೆ ಬಂದಿರಲು ಆ ಯುವತಿಯ ಚೇಷ್ಟೆಮಾಡುವ ತನ್ನ
ಮನೋವೃತ್ತಿಯನ್ನು ತೃಪ್ತಿಗೊಳಿಸುವದಿದ್ದಿತೋ ಅದನ್ನು ಹೇಳುವದು ಕಠಿಣ
ವಿದೆ; ಆದರೆ ಆ ಪತ್ರದಿಂದ ಅನರ್ಥವುಂಟಾದುದೇನೋ ನಿಜವು ಆ ಯುವಕನ

ತಂದೆಯು ನನ್ನ ಗೆಳೆಯನಿಗೆ "ನಿಮ್ಮ ಹುಡುಗೆಯು ನಮ್ಮ ಬಂಗಾರೆಪ್ಪನನ್ನು ಕೆಡಿಸಿಬಿಡುವ ಬೇತುಮಾಡಿದ್ದಳು; ಆದರೆ ಆತನು ನನ್ನ ಮಗನೇ ಎಂದು ನಿಸ್ಪೃಹನಾಗುಳಿದನು. ನೀವು ನಿಮ್ಮ ಹೆಣ್ಣುಮಕ್ಕಳನ್ನು ಬೆಳಿಸುತ್ತಿದ್ದರೆ ಅವಶ್ಯ ಬೆಳಿಸಿರಿ; ಆದರೆ ಅವರು ಯುವಕರನ್ನು ಕೆಟ್ಟದಾರಿಗೆ ಎಳೆಯದಂತೆ ಜಾಗ್ರತೆ ವಹಿಸುವ ಕರ್ತವ್ಯವು ನಿಮ್ಮದಾಗಿದೆ!' ಇತ್ಯಾದಿ ಇತ್ಯಾದಿ ಬೀಜಕ್ಕೆ ಆರಿಸಿಟ್ಟ ಶಬ್ದಗಳಿಂದ, ಜಮದಗ್ನಿಯ ಸಿಟ್ಟಿನಿಂದ, ರಾಮಶಾಸ್ತ್ರಿಯ ನಿಃಸ್ಪೃಹತೆಯಿಂದ ಅಂದನು. ಹುಡುಗೆಯ ತಂದೆಯ ಹಾಜರಿಯನ್ನು ಚೆನ್ನಾಗಿ ತಕ್ಕೊಂಡನು. ಇನ್ನು ಆ ಹುಡುಗೆಯ ಪತ್ರದಲ್ಲಿ 'ನೀವು ಲಗ್ನವಾಗುತ್ತಿದ್ದರೆ ನನ್ನ ಹಿರಿಯರಿಗೆ ತಿಳಿಸುತ್ತೇನೆ' ಎಂದಿಷ್ಟೇ ಶಬ್ದಗಳಿದ್ದವು; ಆದರೆ ಎಷ್ಟು ದೊಡ್ಡ ದೊಡ್ಡ ಹಾಗು ಎಂಥೆಂಥ ವಿಪರೀತ ಆರೋಪಗಳನ್ನು ಅವಳ ಮೇಲೆ ಹೊರಿಸಲಾಯಿತಲ್ಲ! ಸ್ತ್ರೀದಾಕ್ಷಿಣ್ಯದ, ಸ್ತ್ರೀಸ್ವಾತಂತ್ರ್ಯದ ಪಕ್ಷವಹಿಸುವ ಯುವಕ ಜನರೊಳಗಿನವನೇ ಆ ತರುಣ ಶಿಖಾಮಣಿಯು! ಆತನು ಕೇವಲ ತಂದೆ-ತಂದೆಗಳಲ್ಲಿ ಬಡಿದಾಟ ಹಚ್ಚಿ ಸುಮ್ಮನೆ ಕೂಡ್ರಲಿಲ್ಲ. ಕಾಲೇಜಿನೊಳಗಿನ ಪ್ರತಿಯೊಬ್ಬರ ಬಾಯಲ್ಲೂ ಅದೇ ಮಾತಾಯಿತು ಅವಳು ಹೋಗುವಾಗ, ಬರುವಾಗ, ನಡುವಿನ ಬಿಡುವಿನಲ್ಲಿ ತೀರ ಬೀಭತ್ಸವಾದ ಟೀಕೆಯನ್ನು ಬಾಯಿ ಮುಚ್ಚಿಕೊಂಡು ಸಹಿಸಬೇಕಾಯಿತು.

"ಅಜ್ಞಾನ ಕುಲಶೀಲೇಷು ವೈರೀ ಭವತಿ ಸೌಹೃದಮ್"

ಕುಲ-ಶೀಲಗಳ ಪರಿಚಯವಿಲ್ಲದ ಗೊತ್ತಿರದ ಸ್ಥಳದಲ್ಲಿ ಅನುರಕ್ತವಾದ ಪ್ರೇಮವು ಕೊನೆಗೆ ಹಗೆತನವನ್ನುಂಟು ಮಾಡುವದು, ಎಂಬ ಕವಿಕುಲತಿಲಕ ಕಾಲಿದಾಸನ ಉಕ್ತಿಯು ನಿಜವಾದದ್ದನ್ನು ಅವಳು ಕಂಡಳು. ಉಳಿದಿದ್ದ ಕಾಲೇಜಿನ ವರ್ಷಗಳನ್ನು ಅವಳು ಉದಾಸತೆಯಿಂದ ಕಳೆದಳು. ಇಂದಿಗೆ ಅವಳು ಅನುರೂಪನಾದ ಸುಶಿಕ್ಷಿತ ಗಂಡನೊಡನೆ ಆನಂದದಿಂದ ಸಂಸಾರ ಸಾಗಿಸುತ್ತಿರುವಳೆಂಬದಾದರೂ ಅವಳ ಸುದೈವವೇ ಸರಿ. ಇಲ್ಲದಿದ್ದರೆ ಹುಡುಗೆಗಾದ ಅವಮಾನವು ಬಹುಶಃ ತೊಳೆದು ಹೋಗುವದಿಲ್ಲ ಹುಡುಗೆಯು ಅವಮಾನದ ಗಂಟನ್ನು ಸಂಗಡ ತಕ್ಕೊಂಡು ಕಾಲೇಜಿನಿಂದ ಹಿಂತಿರುಗಿ ಬಂದಿದ್ದ ವಿದ್ಯಾರ್ಥಿಗಳು ಹುಲುಬಿನ ಎಕದಾರಿಯನ್ನು ಹಳ್ಳಿಯೂರ ಸಂದಿ ಮೂಲೆಗಳಲ್ಲೂ ಬಾರಿಸುತ್ತ ಸಾಗುತ್ತಾರೆ. ಈ ಉದಾಹರಣೆಯಿಂದ ಇಂದಿನ ತರುಣನು ಎಷ್ಟು ಸಹಾನುಭೂತಿಶೂನ್ಯನೂ ಚೈಷ್ಟಾಪ್ರಿಯನೂ, ಸ್ತ್ರೀಶತ್ರುವೂ ಆಗಿರುವ

ನೆಂಬದು ಸಿದ್ಧವಾಗುವುದು. ಹುಡುಗೆಯರಿಗೆ ತಮ್ಮ ಹೆಸರು ಹಾಕಿಕಳಿಸಿದ ಕಾಗದಗಳು ಕೂಡ ನೂರುಗಟ್ಲೆ ಬರುತ್ತಿರುತ್ತಿರಲು, ಹೆಸರು-ದೆಸೆಗಳಿಲ್ಲದ ಮೂಕ ಪತ್ರಗಳ ಬರುವಿಕೆಯು ಲೆಕ್ಕವೇ ಇರುವುದಿಲ್ಲ; ಆದರೆ ಈ ಬಾಯಿ ಮುಚ್ಚಿ ಕುಚೇಷ್ಟೆಯು ಗುದ್ದಿನ ಪೋಷ್ಟ ಪತ್ರಗಳ ಪೋಲೀಸೀ ಗುಪ್ತ ಹೊಡೆತವನ್ನು ಕುಮಾರಿಕೆಯರು ಎಷ್ಟು ಸಹನಶೀಲತೆಯಿಂದ ಸಹಿಸುತ್ತಿರುವರೆಂಬದನ್ನು ಅದಾ ರಾದರೂ ಯೋಚಿಸಿ ನೋಡುತ್ತಿರುತ್ತಾರೇನು? ಒಟ್ಟಿನಲ್ಲಿ ಪ್ರೀತಿವಿವಾಹಕ್ಕೆ ಸದ್ಯಃಕಾಲವು ತೀರ ಪ್ರತಿಕೂಲವಾಗಿದೆ; ಆದರೆ ಪ್ರೀತಿವಿವಾಹವೇ ನಿಜವಾದ ಶ್ರೇಷ್ಠ ಬಗೆಯ ವಿವಾಹವು. ಅದರಿಂದ ಅದನ್ನು ಬಳಿಕೆಯಲ್ಲಿ ಹೇಗೆ ತರಬೇ ಕೆಂಬ ಸಮಸ್ಯೆಯು ಪ್ರತಿಯೊಬ್ಬರೆದುರೂ ಬಂದು ನಿಲ್ಲುತ್ತದೆ. ಯುವಕರು ಹೆಚ್ಚು ಉದಾರಿಗಳು ಹೆಚ್ಚು ಭಾವನಾಶೀಲರು, ವಿಶೇಷ ನಿಶ್ಚಯಿಗಳು, ಸಾಕಷ್ಟು ದಿಟ್ಟರು ಮತ್ತು ಕರಾರೀ ಸ್ವಭಾವದವರಾದರೆ ಈ ಪ್ರಶ್ನೆಯು ಬಹು ಮಟ್ಟಿಗೆ ಬಗೆಹರಿಯತಕ್ಕದ್ದಾಗಿದೆ ಪುರುಷಜಾತಿಗೆ ಉಂಟಾಗಿರುವ ಸಾಮಾ ಜಿಕ ಮತ್ತು ಕೌಟುಂಬಿಕ ಪ್ರತಿಷ್ಠೆಯ ಪುಣ್ಯವು ಬಹು ದೊಡ್ಡದಿರುವದರಿಂದ, ತರುಣ ಪೀಳಿಗೆಯು ಮನಸ್ಸು ಮಾಡಿದರೆ, ವಿರುದ್ಧ ರೂಢಿಯು ಮತ್ತು ಪರಿ ಸ್ಥಿತಿಯು ಗೋಣನ್ನು ಮುರಿದು ಚಲ್ಲಲು ಅವರು ಶಕ್ತರಾದಾರು ಅನಿಷ್ಟ ಪರಿಣಾಮದ ಅಂಜಿಕೆಯಿಂದ ಗಾಬರಿಗೊಂಡ ವಿರೋಧೀ ವೃದ್ಧರೂ ಕೂಡ ಪ್ರೀತಿ ವಿವಾಹವನ್ನು ತಮ್ಮ ಮೇಲ್ವಿಚಾರಣೆಯಲ್ಲಿ ತಮ್ಮ ಕಣ್ಣೆದುರು ಮಾಡಿ ಬಿಡುವ ಪದ್ಧತಿಯನ್ನು ಹಾಕಿಕೊಡಬೇಕು ಹುಡುಗೆಯರಿಂದ ಕದ್ದು ಸಂಬಂಧವಾಗುವದು, ಅನಿಷ್ಟನೊಡನೆ ಅವಳು ಆಣೆ ಚೂರಿ ಮಾಡುವದು; ಹಾಗು ಬಳಿಕ ರೇಗಿಗೆದ್ದು ಬಲರಾಮನಂತೆ ಧಡಪಡಿಸುವ ಪ್ರಸಂಗವುಂಟಾಗು ವುದು. ಇದಕ್ಕಿಂತ ಯಾವುದು ನೈಸರ್ಗಿಕವಿದೆಯೋ ಅದನ್ನು ತಮ್ಮ ಮೇಲ್ವಿಚಾರಣೆಯಲ್ಲಿ ಮರ್ಯಾದಿತ ಮಾರ್ಗದಿಂದ ಮಾಡಗೊಟ್ಟರೆ ಪಶ್ಚಾ ತ್ತಾಪಪಡುವ ಪ್ರಸಂಗನಾದರೂ ಒದಗಲಿಕ್ಕಿಲ್ಲ. ಇಂದು ಅಪರಿಚಿತ ದೂರಿ ನೂರಿನ ಯುವಕನಿಗೆ ಮಗಳನ್ನು ಕೊಟ್ಟುಬಿಡುವ ತಂದೆಯು, ಅವಳ ವೈವಾ ಹಿಕ ಸೌಖ್ಯದ ಯೋಗ್ಯ ದಕ್ಷತೆ ವಹಿಸಿದನೆಂದು ಹೇಗೆ ಹೇಳಬಂದೀತು? ಮತ್ತು ಕೂಡಿ ನಡೆಯುದ, ಮೋಸಗಾರಿಕೆಯು, ಕ್ರೂರತೆಯು, ದುಷ್ಟ, ಪಶು ವೃತ್ತಿಯ ಪ್ರಕಾರಗಳು ಬೈಲಿಗೆ ಬಂದು ಹಾಯು! ಹಾಯು! ಎಂದೆನ್ನುವ ಪ್ರಸಂಗ ಗಳನ್ನು ಎಷ್ಟೋ ಮಂದಿ ಹುಡುಗೆಯರೂ ಅವರ ತಂದೆ-ತಾಯಿಗಳೂ ಅನು

ಭವಿಸಬೇಕಾಗುವದಲ್ಲವೇ? ಮನೆತನಗಳನ್ನು ಶೋಧಿಸುವುದು, ಜಾತಕಗಳನ್ನು ಕೂಡಿಸುವುದು, ವರದಕ್ಷಿಣೆ ನಿರ್ಧರಿಸುವದು ಈ ಎಲ್ಲ ಒಂದಕ್ಕಿಂತೊಂದು ಕಠಿಣವಾದ ಘಟ್ಟಗಳನ್ನೇರಲಿಕ್ಕೆ ಹುಡುಗೆಯು ತಂದೆಗೇನು ಸ್ವಲ್ಪ ಶ್ರಮ ಹಿಡಿಯುವದೇ? ಆ ಸ್ಥಾನದಿಂದ ಯೋಗ್ಯ ತರುಣರನ್ನಾರಿಸಿ ಅವರ ಹಾಗು ಹುಡುಗೆಯರ ಗುರ್ತು ಪರಿಚಯು ಮಾಡಿಕೊಡುವದು; ಅವರೊಳಗಿನ ಅನುರೂಪ ವರನನ್ನು ಆರಿಸಿಕೊಳ್ಳುವ ಬಗ್ಗೆ ಆ ಹುಡುಗೆಯರಿಗೆ ನೆರವಾಗುವದು ಮುಂತಾದ ಕೇವಲ ಹೊಣೆಗಾರಿಕೆಯು ಕೆಲಸಗಳು ಅದೆಷ್ಟೋ ಸುಲಭ. ಯುವತಿಯರಾದರೂ ಇನ್ನು ಮೇಲೆ ತಮ್ಮ ಮನೋಗತವನ್ನು ತಮ್ಮ ಪಾಲಕರೆದುರು ಸ್ಪಷ್ಟವಾಗಿ ಆಡಿ ತೋರಿಸಬೇಕು; ಸಾಮಾಜಿಕ ವಿರೋಧದ ಬೆದರಿಕೆಯನ್ನು ಬದಿಗೊತ್ತಬೇಕು; ಅಂದರೇ ತವರಿಂದ ತಮ್ಮ ಧ್ಯೇಯವು ಸಹಜವಾಗಿ ಸಾಧಿಸಲಾದೀತು. ಸಮಾಜವಾದರೂ ಬದಲಾದ ಪರಿಸ್ಥಿತಿಯನ್ನು ಮನದಂದು ಇಂಥ ಬಗೆಗಳ ಬಗ್ಗೆ ಸಹಾನುಭೂತಿ ತೋರಿಸಬೇಕು; ಅದಿಲ್ಲದಿದ್ದರೆ ಆ ಕಡೆಗೆ ದುರ್ಲಕ್ಷ್ಯವನ್ನಾದರೂ ಮಾಡಹತ್ತಿದರೆ ಅದೆಷ್ಟೋ ವಿಹಿತವಾದೀತು

ಪ್ರೀತಿವಿವಾಹದ ನೆಲಗಟ್ಟಿನ ಮೇಲೆ ನಿಲ್ಲಿಸಿದ ಲಗ್ನಸಂಸ್ಥೆಯು ಜೊತೆಗಾರರ ವೈವಾಹಿಕ ಸುಖಸಂಸಾರಗಳಿಂದ ಕಿಕ್ಕಿರಿದಂತಹದೂ ಐಹಿಕ ಆನಂದದ ಕಾರಂಜಿಗಳಿಂದ ಎರೆಕೊಂಡಂತಹದೂ ಕಂಡು ಬಂದೀತು. ಸದ್ಯದ ತರುಣರು, ಮಧ್ಯಮ ವಯಸ್ಸಿನವರು, ವೃದ್ಧ ಸ್ತ್ರೀಪುರುಷರು ಇವರೆಲ್ಲರು ವೈವಾಹಿಕ ಜೀವನದ ಬಗ್ಗೆ ಮನಸ್ಸಿನಲ್ಲಿ ಅಸಂತುಷ್ಟರೇ ಆಗಿರುತ್ತಾರೆ ಅದಕ್ಕೆ ಕಾರಣವೆಂದರೆ, ಅವರ ಹಸಿವುಗಳ ಬಗ್ಗಾದ ಉಪವಾಸವೇ ಸರಿ. ಆ ಹಸಿವೆಯು ಹರೆಯದ ಕಾಲದಲ್ಲಿ ಒಳ್ಳೇ ಪ್ರಖರವಾಗಿರುತ್ತದೆ. ಅದೇ ಕಾಲಕ್ಕೆ ಪ್ರತಿಯೊಬ್ಬರೂ ತಮ್ಮ ತಮ್ಮ ಇಚ್ಛೆಗಳಂತೆ ಮಿತ್ರರನ್ನು ಹುಡುಕಿಕೊಂಡರೆ ಅವರಿಗೆ ಲೋಭನೀಯ ವಸ್ತುಪ್ರಾಪ್ತಿಯು ಸಂತೋಷವು ಆಜನ್ಮಪರ್ಯಂತ ಸಮಾಧಾನದ ಸೆಲೆಯನ್ನು ಪೂರೈಸುತ್ತಿದ್ದೀತು.



ವಿವಾಹದ ಭಿನ್ನ ಭಿನ್ನ ಪ್ರಕಾರಗಳಲ್ಲಿ ಕೊನೆಗೆ ಪ್ರೀತಿ ವಿವಾಹವೇ ವಿಜಯ ಪಡೆದೀತೆಂಬ ಸತ್ಯಸಿದ್ಧಾಂತವನ್ನು ಸಹಜ ಮಾಡಬಂದೀತು. ವಿವಾಹ ತೀರಿಸಿಕೊಳ್ಳುವ ಪದ್ಧತಿಯು ಹಳೇ ತರಹದ್ದು--ಸದ್ಯದ ಬ್ರಾಹ್ಮೀ ಪದ್ಧತಿಯೇ--ಇನ್ನೂ ಬಹು ದಿನಗಳ ವರೆಗೆ ತಾಳೀತು; ಆದರೆ ಪಾಲಕರು ಲಗ್ನ ಹೊಂದಿಸುವ ಈಗಿನ ರೀತಿಯು ಮಾತ್ರ ಹೆಚ್ಚು ದಿನ ಬಾಳಲಿಕ್ಕಿಲ್ಲ. ಹಿರಿಯರು ಗೊತ್ತುಮಾಡಿದ ವಿವಾಹಗಳಲ್ಲಿ ಹೆಚ್ಚು ವಿವಾಹಗಳು ಅಯಶಸ್ವಿಗಳಾದವು. ಕನಿಷ್ಠಪಕ್ಷ ಬಹುತರ ಎಲ್ಲ ಅಯಶಸ್ವೀ ವಿವಾಹಗಳ ಹೊಣೆಯನ್ನು ಸಕಾರಣವೇ ಇರಲಿ-ಅಕಾರಣವೇ ಇರಲಿ, ಪಾಲಕರ ತಲೆಯ ಮೇಲೆಯೇ ಹೊರಿಸಲಾಗುತ್ತದೆ. ಆದರಿಂದ ಪಾಲಕರಾದರೂ ಇತ್ತೀಚೆಗೆ ತಾಟಸ್ಥ್ಯದಿಂದ ವರ್ತಿಸಹತ್ತಿರುವರು. ಯುವಕ-ಯುವತಿಯರಿಗೆ ಲಗ್ನದ ಬಾಬಿನಲ್ಲಿ ಅವರು ಸಂಪೂರ್ಣ ಸ್ವಾತಂತ್ರ್ಯ ಕೊಟ್ಟಿರುವಂತೆ ಕಾಣುತ್ತದೆ; ಮಾತ್ತ ಹಾಗೆ ನೋಡಿದರೆ ಲಗ್ನಸಂಸ್ಥೆಯ ಪರಮೋತ್ಕರ್ಷದ ಬಿಂದುವೆಂದರೆ ಪ್ರೀತಿವಿವಾಹವೇ ಸರಿ ಆ ಬಿಂದುವನ್ನು ಸೇರುವದರಿಂದ ಸಮಾಜದ ಉತ್ಕ್ರಾಂತಿಯಾಗುತ್ತದೆ; ಹಾಗು ಆ ಬಿಂದುವನ್ನು ದಾಟಿ ಕೆಳಗಿಳಿಯುತ್ತಿರುವ ಸಮಾಜವು ಸಂಸಾರಸುಖದ ಅಪಕರ್ಷದ ಇಳುಕಲಿನಲ್ಲಿ ವೇಗದಿಂದ ಜಾರುತ್ತಿರುವುದು ಕಾಣಿಸೀತು. ಈ ಅತ್ಯಂತ ಶ್ರೇಷ್ಠವಾದಂಥ ಪ್ರಣಯವಿವಾಹದ ಮಾರ್ಗವು ಇರತಕ್ಕಷ್ಟು ಸರಳವೂ ಸುರಕ್ಷಿತವೂ ಆಗಿರುವವಿಲ್ಲ ಆ ಮಾರ್ಗದೊಳಗಿನ ಇಕ್ಕಟ್ಟಿನ ಸ್ಥಳಗಳಷ್ಟು ಗೊತ್ತಿದ್ದರೆ, ಹೆಚ್ಚಾಗಿ ಆಗುವ ಅಪಘಾತಗಳನ್ನು ನಿವಾರಿಸಲಾದೀತು.

ತರುಣ ಸ್ತ್ರೀ-ಪುರುಷರು ಮೊದಲೇ ಅವಿಚಾರಿಗಳಿರುತ್ತಾರೆ; ಮತ್ತು ಅವರು ಒಟ್ಟುಗೂಡುತ್ತಲೆ ಅವರುಗಳ ಉಲ್ಲೂತನವು ಮರ್ಯಾದಿತವಾಗುಳಿದೀತೆಂದು ಹೇಳಲಿಕ್ಕೆ ಬರುವದಿಲ್ಲ. ಎಂದೂ ಅನುಭವಿಸದಿದ್ದ ಅನುಭವದ ಧುಂದು ಮನುಷ್ಯನ ವಿಚಾರ ಶಕ್ತಿ ಮತ್ತು ಶರೀರದ ಮೇಲಿನ ಆತಂಕ ಇವುಗಳನ್ನು ತೀವ್ರವೇ ಕಿತ್ತೊಗೆಯುತ್ತದೆ. ಅಂಡಬಳಿಕ ಅಂಥ ಆ ಸ್ಫೋಟಕ ದ್ರವ್ಯಗಳು ಒಂದೇಂದೇ ಆಗಿ ಉಭಯತರ ಸಹವಾಸದಲ್ಲಿ ಬಂದರೆ, ಪ್ರತಿಯೊಂದು ಕಾಲಕ್ಕೂ ಅವುಗಳ ಸಿರ್ಲೇಪಸ್ಥಿತಿಯಲ್ಲಿ ಪಾರಾದೇವೆಂಬದರ ನಿಯಮವಿರುವದಿಲ್ಲ ಹಿರಿಯರ ನಜರಿನಲ್ಲಿ ಮತ್ತು ಬೆದರಿಕೆಯಲ್ಲಿ ಇಲ್ಲವೆ ಚಿಕ್ಕ ಬಂಧು-ಭಗಿನಿಯರ ಗುಂಪಿನಲ್ಲಿ ಎವಾಗ ನಡೆದ ಪ್ರಣಯ ಚೇಷ್ಟೆಯ ಕೊಡ-

ಕೊಳ್ಳಿಯು ಅಷ್ಟೊಂದು ಒಮ್ಮೆಲೆ ಸ್ಫೋಟಗೊಳ್ಳುವದಿಲ್ಲ; ಅಂತೆಯೇ ಘಾತುಕವಾಗಿರುವದಿಲ್ಲ. ಮತ್ತು ಇಷ್ಟಕ್ಕಾಗಿಯೇ ಪ್ರಣಯ ವಿವಾಹಕ್ಕೆ ಚಾಲನೆ ಹಾಗು ಪ್ರೋತ್ಸಾಹನ ಕೊಡುವ ಹಿರಿಯರು ಯೋಗ್ಯ ಕಟ್ಟಿನಲ್ಲೇ ವಿವಾಹೇಚ್ಛು ಸ್ತ್ರೀ-ಪುರುಷರನ್ನು ಒತ್ತಟ್ಟಿಗೆ ವ್ಯವಹರಿಸಗೊಡಬೇಕು. ಯುರೋಪಿಯನ್ ಶಿಷ್ಟ ಸಮಾಜದಲ್ಲಿ ಹಿರಿಯರ ಮೇಲ್ವಿಚಾರಣೆಯಲ್ಲೇ ಪ್ರೀತಿ ವಿವಾಹಗಳು ಕೂಡಿ ಬರುತ್ತಿರುತ್ತವೆ. ವಿಶೇಷವಾಗಿ ಹುಡುಗೆಯ ತಾಯಿಯು ಹೆಣ್ಣುಬೆಕ್ಕಿನ ದಕ್ಷತೆಯಿಂದ ತನ್ನ ಮಗಳನ್ನು ಒಂದೇಸವನೆ ಬೆಂಗಾವಲ ಮಾಡುತ್ತಿರುತ್ತಾಳೆ. ಆ ಯುವಕ-ಯುವತಿಯರು ಸಿನೇಮಾ-ನಾಟಕಗಳಿಗ ಹೋದರೂ ಅವರೊಡನೆ ಇವಳು ತನ್ನ ಯಾವುದೊಂದು ತಿಳುವಳಿಕೆಗೆ ಬಂದ ಮಗುವನ್ನು ಕಳಿಸಿಕೊಡಲಿಕ್ಕೆ ಮರೆಯುವದಿಲ್ಲ.

ಖುದ್ದ ತರುಣ ಜನರೂ ದಕ್ಷತೆವಹಿಸುವದವಶ್ಯವಿರುತ್ತದೆ. ಪ್ರಿಯಾರಾಧನೆಯ ಜಾದೂ ಆಟದ ಕಾಲವು ವಿಲಕ್ಷಣ ಕಣ್ಮುಚ್ಚಿನಾಟವನ್ನು ತೋರಿಸ ತಕ್ಕದ್ದಾಗಿರುತ್ತದೆ ಪರಸ್ಪರರ ಸ್ವಭಾವ ಹಾಗು ದೇಹಗಳು ತೋರಿಕೆಯ ಅಸ್ಪಷ್ಟ ಗುರ್ತಿನ ಮೂಲಕ ವಿಪರೀತ ಮೋಹಕಗಳಾಗಿ ತೋರಹತ್ತುತ್ತವೆ. ಅದು ತೀರ ಹೆಚ್ಚಲು, ಅವುಗಳೊಳಗಿನ ವೈಗುಣ್ಯದ ಕಡೆಗೆ ಯಾರ ಲಕ್ಷ್ಯವೂ ಹೋಗುವದಿಲ್ಲ. 'ದೂರಿನ ಗುಡ್ಡ ನುಣ್ಣಗೆ' ಎಂಬ ನಾಣ್ಣುಡಿಯೊಳಗಿನ ಸತ್ಯತೆಯು ದೂರಿನಿಂದ ಒಬ್ಬರನ್ನೊಬ್ಬರು ಆರಾಧಿಸುತ್ತಿರುವ ಸ್ತ್ರೀ-ಪುರುಷರ ಬಗ್ಗೆ ಎಷ್ಟು ಅನುಭವಕ್ಕೆ ಬರುವದೋ, ಅಷ್ಟು ಅದು ಬೇರೆ ಕಡೆಗೆ ಇಲ್ಲೆಲ್ಲೂ ಕಂಡುಬರುವುದಿಲ್ಲ. ಒಬ್ಬನು ಇನ್ನೊಬ್ಬನನ್ನು ಎಷ್ಟು ಒಳ್ಳೆಯುವನೆಂದು ತಿಳಿಯುವನೋ, ಅವನು ಎರಡನೆಯುವನೆದುರಿಗೆ ಅಷ್ಟೇ ಶರಣಾಗತನೆಂದು ಮನ್ನಿಸಹತ್ತುತ್ತಾನೆ. ವೈಷಯಿಕ ಉನ್ಮಾದದಿಂದ ಇಲ್ಲವೆ ಧ್ಯೇಯದ ಮಬ್ಬಿನಿಂದ ವ್ಯಕ್ತಿತ್ವವನ್ನು ಮರೆತುಬಿಟ್ಟಿರುವವರ ಮನಸ್ಸಿನಲ್ಲಿ ಗುಣಾವಗುಣಗಳ ವಿಚಕ್ಷಣತೆಯು ಅದೆಲ್ಲಿರಬೇಕು? ಮತ್ತು ಶರೀರ-ಮನಗಳನ್ನು ಅಂಕಿತದಲ್ಲಿಟ್ಟುಕೊಳ್ಳುವ ತಾರತಮ್ಯ ಬುದ್ಧಿಯು ಅದೆಲ್ಲಿ ಬಾಕಿ ಉಳಿಯಬೇಕು? ಇವೆಲ್ಲ ನಿಜವೂ ಅನಿವಾರ್ಯವೂ ಆಗಿದ್ದರೂ ಕೂಡ ಈ ಅವಿಚಾರದ ಗೊಂದಲದೊಳಗಿಂದುಂಟಾಗುವ ದುಃಖಗಳನ್ನು ಕಣ್ಣೆದುರು ತರದಿದ್ದರೆ ಹುಲ್ಲ ಕೆಳಗೆ ಮರೆಯಾಗಿದ್ದ ಹಾಳ ಬಾವಿಯಲ್ಲಿ ಆ ತರುಣ ಜನರು ಹೋಗಿ ಬೀಳುವರು; ಹಾಗು ಅಲ್ಲಿ ಅವರು ಆಜನ್ಮ ಗುಟುಕು ನೀರು ಕುಡಿಯುತ್ತ ಇರಬೇಕಾ

ದೀತೆಂದು ಅನಿಸುತ್ತದೆ. ಆದರ ಭಯಂಕರ ಪರಿಣಾಮವನ್ನು ಅನುಭೋಗಿಸುವ ಸರತಿಯು ವಿಶೇಷವಾಗಿ ಹೆಂಗಸಿನ ಮೇಲೆಯೇ ಬರುತ್ತದೆ. ಪ್ರಣಯ ವ್ಯಾಪಾರದಲ್ಲಿ ಗಂಡಸು ಯಾವಾಗಲೂ ದಿಟ್ಟತನದಿಂದ ಮುಂದೊರೆಯುವ ಪ್ರಾಣಿಯು. ಆತನು ಕಾಣಾಕಾಣ ಖೊಟ್ಟಿ ಆಶ್ವಾಸನಗಳನ್ನೀಯುತ್ತಿರುತ್ತಾನೆ; ಮತ್ತು ಆ ಆಶ್ವಾಸನಗಳನ್ನು ನಂಬಿ ಯಾವ ಭೋಳೇ ಯುವತಿಯು ಆತನ ದಿಟ್ಟತನದ ಸಲಗಿಯನ್ನು ಸಾಕಷ್ಟು ಬಲಪೂರ್ವಕವಾಗಿ ಪ್ರತೀಕಾರ ಮಾಡುದಿಲ್ಲವೋ ಅವಳು ಸಂಪೂರ್ಣ ಮೋಸಗೊಳ್ಳುತ್ತಾಳೆ. ತನ್ನ ಮರ್ಯಾದೆ ಕಾಯ್ದುಕೊಳ್ಳುವ ಬುದ್ಧಿಯು ಸರ್ವ ಸಾಧಾರಣವಾಗಿ ಪ್ರತಿಯೊಬ್ಬ ಹೆಂಗಸಿಗೂ ಇದ್ದೇ ಇರುತ್ತದೆ. ನಿಸರ್ಗದ ವಿಶೇಷ ಘಟನೆಗಳ ಮೂಲಕ ಸಣ್ಣ-ಪುಟ್ಟ ತಪ್ಪುಗಳ ಭಯಂಕರ ಪರಿಣಾಮಗಳನ್ನು ನಾವು ಪ್ರತಿದಿನವೂ ಭೋಗಿಸಬೇಕಾಗುತ್ತದೆ. ಮಾನ ಕಾಯ್ದುಕೊಳ್ಳುವದು ಅವಳಿಗೆ ತನ್ನ ಜೀವಕ್ಕಿಂತಲೂ ಹೆಚ್ಚು ಬೆಲೆಯುಳ್ಳದ್ದೆಂದು ತೋರುತ್ತಿರುತ್ತದೆ; ಮತ್ತು ವೈಷಯಿಕ ಬಾಬಿನಲ್ಲಿ ಅವಳು ಪ್ರಾರಂಭದಲ್ಲಿ ಸ್ವಾಭಾವಿಕವಾಗಿಯೇ ಉದಾಸೀನಳಾಗಿರುತ್ತಾಳೆ. ಅಂತೆಯೇ ಅವಳ ರಕ್ಷಣವು ಹಲವು ಪ್ರಸಂಗಗಳಲ್ಲಿ ತಾನಾಗಿ ಆಗುತ್ತಿರುವದೆಂಬದೇನೋ ನಿಜವು; ಆದರೆ ಕೇವಲ ಮನ ನೋಯ್ಯಿಸಬಾರದೆಂದೇ ಅವಳು ಹಲವು ವೇಳೆ ಪುರುಷನ ವೈಷಯಿಕ ಕಕ್ಕುಲಾತಿಗೆ ಬಲಿಬೀಳುತ್ತಾಳೆ. ಅವಳ ಪ್ರಿಯಕರನು ಸತ್ಯನಿಷ್ಠನಾಗಿದ್ದರೆ, ಉಭಯ ಪಕ್ಷದ ಹಿರಿಯರು ಅವರ ಆ ಲಗ್ನಕ್ಕೆ ಯಾವ ಬಗೆಯಿಂದಲೂ ಅಡ್ಡಿ ಮಾಡುತ್ತಿರದಿದ್ದರೆ ಅಂಥ ಸ್ಥಿತಿಯಲ್ಲಾದ ಮರ್ಯಾದೆಯ ಅತಿಕ್ರಮಣವು ಲಗ್ನವಿಧಿಯ ಮೋಹರಿನ ಛಾಪಿನಿಂದ ಕ್ಷಮ್ಯವಾಗಿಬಿಡುತ್ತದೆ. ಖುದ್ದ ಆ ಯುವಕ-ಯುವತಿಯರಿಗೂ ಅದು ಕೌತುಕಾಸ್ಪದವೆನಿಸುತ್ತದೆ; ಆದರೆ ಆ ಪ್ರಿಯಕರನು ಠಕರ ಮೋಸಗಾರನಾಗಿದ್ದರೆ ಇಲ್ಲವೆ ಆ ಲಗ್ನದಬಗ್ಗೆ ಹಿರಿಯರ ವಿರೋಧವು ಲೋಪವಾಗದಿದ್ದರೆ ಆ ಮೋಸಿನ ಎಲ್ಲ ದುಷ್ಟ ಪರಿಣಾಮಗಳನ್ನು ಆ ಯುವತಿಯೇ ಅನುಭವಿಸಬೇಕಾಗುತ್ತದೆ. ಮಾತೃಪದವೆಂಬುದು ಸ್ತ್ರೀ-ಪುರುಷರು ಜೊತೆಗೂಡುವದರಿಂದುಂಟಾಗುವ ಅನಿವಾರ್ಯ ಘಟನೆಯು. ಇವಳು ವಿವಾಹಿತಳು ಅಥವಾ ಇವಳು ಅವಿವಾಹಿತಳು, ಎಂಬ ಭೇದವು ನಿಸರ್ಗದ ನಿಯಮದಲ್ಲಿರುವದಿಲ್ಲ. ಅವಿವಾಹಿತ ಮಾತೃಪದವು ಸ್ತ್ರೀಯ ತನ್ನ ಸಮಾಜದೊಳಗಿಂದ ನಿರಂತರ ಹೊರದೂಡುತ್ತದೆ. ಇದೊಂದು ಬಹು

ದೊಡ್ಡ ಅನ್ಯಾಯವೆಂಬುದೇನೋ ನಿಜವು. ಅದು ಹುಡುಗ ವಯಸ್ಸಿನೊಳಗಿನ ದೆಂದು ಕ್ಷಮ್ಯವು; ಮತ್ತು ಕ್ವಚಿತ್ತಾಗಿ ಆಗುವ ಆ ತಪ್ಪಿನ ಬಗ್ಗೆ ಭೋಗಿಸ ಬೇಕಾದ ಆ ಶಿಕ್ಷೆಯು ಬಹು ಭಯಂಕರವಿರುವದರಿಂದ, ಅದರ ಮುಂದೆ ಗಲ್ಲಿನ ಶಿಕ್ಷೆಯೂ ಸೌಮ್ಯವಾದೀತೆಂಬ ಭಯಂಕರ ಪರಿಣಾಮವನ್ನು ಕಣ್ಣೆದು ರಿಗಿಟ್ಟುಕೊಂಡೇ ಸ್ತ್ರೀಯು ವರ್ತಿಸಬೇಕು. ಇಂಥ ಆ ಅವಿವಾಹಿತ ಮಾತೃ ಪದದ ತರುಣಿಗೆ ಮತ್ತೆ ಲಗ್ನವಾಗುವ ಆಶೆಯೇ ಇರುವದಿಲ್ಲ; ಆದರೆ ಕುಮಾರೀ ವಿಧವೆಯು ಆಯುಷ್ಯವನ್ನು ಅವಳು ಕಳೆವುದೆಂದರೂ ಸುತ್ತ ಲಿನ ಸಮಾಜವು ಅವಳ ಆ ಹುಣ್ಣಿನ ಮೇಲೆ ಪ್ರಾಣಘಾತಕ ಚುಂಚಿನಿಂದ ಒಂದೇಸವನೆ ಚುಚ್ಚುತ್ತಿರುತ್ತದೆ; ಹಾಗು ಆ ಗಾಯದೊಳಗಿಂದ ಆಜನ್ಮ ಪ್ರಾಣಾಂತಿಕ ವೇದನೆಗಳ ನೆತ್ತರವು ಒಂದೇಸವನೆ ಶ್ರವಿಸುತ್ತಿರುತ್ತದೆ.

ಲಗ್ನವಾಯಿತು; ಎಲ್ಲವೂ ಸುರಳೀತ ಸಾಗಿತು. ಅಂದರೂ ಬೇಗನೆ ವಶವಾಗುವ ಸ್ತ್ರೀಯ ವಿಷಯಕ್ಕೆ ಅವಳ ಗಂಡನ ಮನಸ್ಸಿನಲ್ಲಿ ಒಂದು ವಿಪರೀತ ಚಿಂತೆಯೇ ಉಳಿಯುತ್ತದೆ. ವಸ್ತುವಿನ ಬೆಲೆಯು ಅದನ್ನು ದೊರಕಿಸ ಲಿಕ್ಕೆ ಪತ್ತ್ರ ಕಷ್ಟವನ್ನವಲಂಬಿಸಿರುತ್ತದೆ. ಕಷ್ಟವು ಕಡಿಮೆಯೆಂದರೆ ಆ ವಸ್ತುವಿನ ಬೆಲೆಯೂ ಕಡಿಮೆಯೇ. ಈ ತ್ರೈರಾಶಿಕವು ಪತಿ-ಪತ್ನಿಯರಲ್ಲಿ ಹೇಗೆ ಸರಿಹೋದೀತು? ಅದು ಅಲ್ಲಿ ಸರಿಹೋಗಬೆಂದು ನಾವು ಬೇಕಾದರೆ ಮನ್ನಿ ಸೋಣ; ಆದರೆ ಲಗ್ನಕ್ಕೆ ಮೊದಲು ಮೂರನೆಯವನೆಂದು ತನ್ನ ಪತ್ನಿಯ ಬಗ್ಗೆ ತನಗೆ ಯಾವ ಒಳಿತು-ಕೆಡಕುಗಳ ಅನುಭವವು ಬಂದಿರುತ್ತದೋ, ಅದರ ಮೇಲಿಂದಲೇ ಲಗ್ನದ ನಂತರವೂ ಆಕೆಯ ನಡತೆಯ ಬಗ್ಗೆ ಗಂಡನು ತ್ರಯ ಸ್ಥನಾತೆರಿಯದಲೇ ಕಾಯಾಸಕಟ್ಟತಕ್ಕವನು. ಅವಳು ತನ್ನ ಖೊಟ್ಟಿ ಆಶ್ವಾ ಸನಗಳಿಗೆ ಎಷ್ಟು ಬೇಗನೆ ಹಾಗು ಎಷ್ಟರವರೆಗೆ ವಶಳಾದಳೆಂಬದರ ಚಿತ್ರಪಟವು ಆತನ ಕಣ್ಣೆದುರಿಗೆ ಸಂತತವಾಗಿರುತ್ತದೆ; ಮತ್ತು ಇಂಥದೇ ಪ್ರಸಂಗವು ಮತ್ತೆ ಉಂಟಾದರೆ, ಈಕೆಯು ಭೋಳೆತನದಿಂದ ಮತ್ತೆ ಸಹಜವಾಗಿ ಮೋಸ ಗೊಳ್ಳುವ ಸ್ವಭಾವದವಳೆಂಬದೇ ಆತನ ಅಂಜಿಕೆಯು; ಹಾಗು ಇದೇ ಬೆದ ರಿಕೆಯು ಆತನನ್ನು ಹಗಲಿರುಳೂ ತಳಮಳಗೊಳ್ಳಹಚ್ಚುತ್ತದೆ. ಪುರುಷನ ಉಲ್ಲೂತನವಾದರೂ ಅವನ ಪತ್ನಿಯನ್ನು ಅಷ್ಟೇ ಅಸ್ವಸ್ಥಗೊಳಿಸುತ್ತಿರುತ್ತದೆ. ಹೆಂಗಸರು ಗಂಡನ ಕಡೆಗೆ ಯಾವಾಗಲೂ ಮತ್ಸರದೃಷ್ಟಿಯಿಂದ ನೋಡುತ್ತಿರು ತ್ತಾರೆ. ಬೇರೆ ಹೆಂಗಸಿನ ಕವಿನೆಳಲು ಕೂಡ ತನ್ನ ಗಂಡನ ಸುತ್ತುಮುತ್ತು

ಬೀಳುವದು ಆಕೆಗೆ ಸಹನವಾಗುವದಿಲ್ಲ; ಮತ್ತು ಅಂಥದರಲ್ಲಿ ತನ್ನ ಗಂಡನ ಉಲ್ಲೂತನದ ಬಗ್ಗೆ ಅನುನಯಕಾಲದೊಳಗಿನ ಅನುಭವದಿಂದ ಆಕೆಯು ಖಾತ್ರಿಯಾಗಿಬಿಟ್ಟಿದ್ದರಂತೂ ಆಕೆಯು ಸಂಶಯಕ್ಕೆ ಮೇರೆಯೇ ಉಳಿಯುವುದಿಲ್ಲ ಉಭಯ ಸ್ತ್ರೀ-ಪುರುಷರು ಸುಲಭ ಸ್ಪ್ರಸ್ಯರೂ ಉಲ್ಲೂವೃತ್ತಿಯವರೂ ಆಗಿದ್ದರೆ ಅವರುಗಳ ವಿವಾಹವು ಚುಟಿಕಿ ಹೊಡೆಯುವಷ್ಟರಲ್ಲಿ ಕೂಡಿ ಬಂದೀತೆಂಬುವೇನೋ ನಿಜವು; ಆದರೆ ಅದು ಅಷ್ಟೇ ನಿಶ್ಯಕ್ತವೆಂದೂ ಕಂಡು ಬಂದೀತು

ಚಂಚಲ ಪ್ರವೃತ್ತಿಯು ಪ್ರಾಪ್ತ ಪರಿಸ್ಥಿತಿಯಲ್ಲಿ ಮನುಷ್ಯನಿಗೆ ಕೂಡಲೆ ಅಸಂತೋಷವನ್ನು ತೋರಹತ್ತುತ್ತದೆ. ಸುತ್ತಲೂ ಕಾಣುವ ಜೀನಸುಗಳ ಮೇಲೆ ಆತನು ಮೋಹಿತನಾಗುತ್ತಾನೆ; ಮತ್ತು ಎಚ್ಚರಗೆಟ್ಟು ಅತ್ತ ಧಾವಿಸುತ್ತ ಹೋಗುವಾಗ ಆತನು ಮೊದಲು ತನ್ನ ಆಟಿಗೆಗಳನ್ನೇ ಎಡವುತ್ತಿರುತ್ತಾನೆ. ಈ ಉಲ್ಲೂವೃತ್ತಿಯು ವೈವಾಹಿಕ ಸುಖದ ದೃಷ್ಟಿಯಿಂದ ಅತ್ಯಂತ ಹಾನಿಕಾರಕವಾಗಿದೆ ವಿಚಾರಸ್ವಾತಂತ್ರ್ಯದ ಅನುಯರ್ಾದ ಮಹತಿಯನ್ನು ಹೊಗಳುವ ತರುಣರು ಪ್ರತಿಯೊಂದು ಬಾಬಿನಲ್ಲೂ ಉಲ್ಲೂತನವು ಅವಶ್ಯಮೇವ ಗುಣವೆಂಬುದನ್ನು ಹೆಚ್ಚಾಗಿ ತಿಳಿದುಕೊಳ್ಳಕೊಲ್ಲರೇಕೆ? ಆದರೆ ಕೇವಲ ಮೋಜಿಗಾಗೆಂದು ಅವರು ಎಲ್ಲಿಯುವರೆಗೆ ಅಲ್ಪ-ಸ್ವಲ್ಪ ಉಲ್ಲೂತನವನ್ನು ತಮ್ಮ ಹತ್ತರಿರಿಸಿಕೊಂಡಿರುತ್ತಾರೆಯೋ ಅಷ್ಟೇ ವಿಹಿತವು; ಆದರೆ ಎಚ್ಚರಗೇಡಿ ಉಲ್ಲೂವೃತ್ತಿಯ ಹಂದರದ ಮೇಲೆ ಅವರು ತಮ್ಮ ಸಂಸಾರವನ್ನು ನಿರಂತರವಾಗಿ ಹೂಡಹತ್ತಿದರೆ, ಅದು ಆ ಸಂಸಾರವನ್ನು ಚೆಲ್ಲಿಕೊಟ್ಟು ಅವರನ್ನು ಬೇರೆ ಬೇರೆಯಾಗಿ ವಿಂಗಡಿಸಿ ದೇಶಾಂತರದಲ್ಲಿ ತಿರುಗಾಡ ಹಚ್ಚೀತು; ಅಂತೆಯೇ ಆ ಉಲ್ಲೂತನದಿಂದ ಉಭಯತರೂ ತಮ್ಮ ಸಂರಕ್ಷಣ ಮಾಡಿಕೊಳ್ಳಬೇಕು.

ಇದರ ಅರ್ಥವು ತರುಣರು ಹೆಚ್ಚು ನಾಚಿಕೊಳ್ಳಬೇಕೆಂದಲ್ಲ. ನಾಚಿಕೆಯೆಂಬುದು ಸ್ತ್ರೀಯರಲ್ಲಿಯು ನೈಸರ್ಗಿಕ ಗುಣವು; ಮತ್ತು ಕೆಲವೊಂದು ಮರ್ಯಾದೆಯುವರೆಗೆ ಅದು ಅವರಿಗೆ ಶೋಭಿಸಿಯೂ ಶೋಭಿಸುವುದು. ಸೌಂದರ್ಯವನ್ನು ಆವಿರ್ಭಾವದೊಳಗಿನ ಮಾರ್ದವವು ಹೇಗೆ ಮೋಹಕವಾಗಿ ಮಾಡುವುದೋ ಅದರಂತೆಯೇ ಈ ನಾಚಿಕೊಳ್ಳುವದು ಅವರ ಸ್ವಭಾವಕ್ಕೆ ಆಕರ್ಷಕತನದ ಹೊಳಪನ್ನೇ ಉಂಟು ಮಾಡುತ್ತಿರುತ್ತದೆ. ಸ್ತ್ರೀಯರಿಗೆ ಹುಟ್ಟಾ ತಮ್ಮ ಭಾವನೆಗಳನ್ನು ಆಡಿ ತೋರಿಸುವ ಧೈರ್ಯವಾಗುವದಿಲ್ಲ. ಸ್ವಂತದ ಭಾವನೆಗಳು ಸ್ಪಷ್ಟವಾಗಿ ತಿಳಿಯುವದಿಲ್ಲ; ಮತ್ತು ಸ್ವಲ್ಪದರಲ್ಲಿ ಅವುಗಳನ್ನು

ನ್ಯಕ್ತಗೊಳಿಸಲಿಕ್ಕೆ ಬರುವದಿಲ್ಲ. ಅವರ ಮನಸ್ಸಿನಲ್ಲಿ ನಡೆದಿರುವ ಕಲಕಲಾಟವನ್ನು ನುಖದ ಮೇಲೆ ಆಗುಬಗನೆ ಕಂಡುಬರುವ ವಿಚಾರ ಮೇಘಗಳ ಕವಿನೆಳಲಿನಿಂದ ತಿಳಿದುಕೊಳ್ಳುವದಿರುತ್ತದೆ. ಅವರ ಅನುಮತಿಯನ್ನು ಉತ್ತರ ಕೊಡದಿರುವುದರಿಂದಲೇ ನಿರ್ಧರಿಸಿಕೊಳ್ಳುವುದಿರುತ್ತದೆ; ಮತ್ತು ಅವರ ಪ್ರೇಮವನ್ನಾದರೂ ಅವಾಂತರ ಸಂಗತಿಗಳಲ್ಲಿ ಕಂಡುಬರುವ ತನ್ನತನದ ಆಸ್ಥಾಪೂರ್ವಕ ವರ್ತನದಿಂದ ತಿಳಕೊಳ್ಳತಕ್ಕದ್ದಿರುತ್ತದೆ. ಅಂದಮೇಲೆ ತರುಣಿಯರಲ್ಲಿ ಅಲ್ಪಸ್ವಲ್ಪ ನಾಚಿಕೆಯಿರುವದು ಸ್ವಾಭಾವಿಕವೇ ಆಗಿದೆ; ಆದರೆ ತರುಣರ ದೃಷ್ಟಿಯನ್ನು ನಿಟ್ಟುಬೆಸಿಗೆಯಂತೆ ತಿಳಿದು, ಕುಮಾರಿಕೆಯರು ತೀರ ಕಾರ್ಗತ್ತಲೆಯ ಕೋಣೆಯಲ್ಲಿ ಹುದುಗಿಕೊಂಡು ಕೂದ್ರಹಚ್ಚಲು ಹೇಳುವ ನಾಚಿಕೊಳ್ಳೋಣವು ವಿನಯದ ಘಾತುಕ ಅತಿರೇಕವೇ ಸರಿ. ಇಂಥ ನಾಚಿಕೊಳ್ಳೋಣವು ಅವಳಲ್ಲಿದ್ದರೆ ಅವಳು ಇತರರ ಮನಸ್ಸುಗಳನ್ನು ತನ್ನ ಕಡೆಗೆ ಕ್ವಚಿತ್ತಾಗಿಯೇ ವೇಧಿಸಿಕೊಳ್ಳತಕ್ಕವಳು; ಮತ್ತು ಕ್ವಚಿತ್ತಾಗಿ ವೇಧಿಸದ ಯಾವನೊಬ್ಬನ ಮನಸ್ಸನ್ನು ಸಂಪೂರ್ಣ ಸ್ವಾಧೀನಪಡಿಸಿಕೊಳ್ಳಲಿಕ್ಕೆ ಆವಶ್ಯಕವಾದ ಪ್ರಣಯಚೇಷ್ಟೆಗಳ ಕೊಡ-ಕೊಳ್ಳಿ ನಡೆಸುವ ಧೈರ್ಯವು ಅವಳಲ್ಲಿ ಇರದ್ದರಿಂದ, ಅವಳು ಪ್ರೀತಿವಿವಾಹದ ಬಾಬಿನಲ್ಲಿ ಅಯಶಸ್ವಿಯೇ ಆದಾಳು ಹಲವು ವ್ಯಕ್ತಿಗಳಲ್ಲಿ ಒಂದಾನೊಂದು ವ್ಯಕ್ತಿಯನ್ನು ಮನಸ್ಸಿನಿಂದ ಆರಿಸಿಕೊಂಡರೂ ಅದನ್ನು ಅವಳು ಬಹಿರಂಗದಲ್ಲಿ ತೋರಿಸುವದಾದರೂ ಹೇಗೆ? ಹಾಗು ಅದನ್ನು ಆ ವ್ಯಕ್ತಿಯ ಮನಸ್ಸಿನ ನಜರಿಗೆ ತರುವುದಾದರೂ ಹೇಗೆ? ಒಟ್ಟಿನಲ್ಲಿ ನಾಚಿಕೊಳ್ಳೋಣದರ ಅತಿರೇಕವಾದರೂ ತರುಣಿಗೆ ತ್ಯಾಜ್ಯವೇ ಸರಿ; ಆದರೆ ಅದರೊಡನೆಯೇ ಅವಳ ದಿಟ್ಟತನದ ಅತಿರೇಕವಾದರೂ ಒಂದು ಬಗೆಯಿಂದ ತರುಣರ ಮನಸ್ಸಿನಲ್ಲಿ ಅವಳ ಬಗ್ಗೆ ಅವಿಶ್ವಾಸದ ತಿರಸ್ಕಾರವನ್ನೇ ಉಂಟು ಮಾಡೀತು; ಇಲ್ಲದಿದ್ದರೆ ಅದು ಅವಳನ್ನು ಒಳ್ಳೇ ಇಕ್ಕಟ್ಟಿನ ಸ್ಥಳಕ್ಕೆ ಒಯ್ದುಬಿಟ್ಟು, ಅಲ್ಲಿಂದ ಹೇಗಾದರೂ ಮರ್ಯಾದೆಯಿಂದ ಹೊರಬೀಳುವುದೇ ಅವಳಿಗೆ ಅತ್ಯಂತ ಕಠಿಣವಾದೀತು ಗಂಡಸು ಹುಟ್ಟಾ ದಿಟ್ಟನೂ ಪ್ರೇರಕನೂ ಆಗಿರುತ್ತಾನೆ; ಮತ್ತು ತರುಣಿಯಾದರೂ ದಿಟ್ಟಳೇ ಆಗಿದ್ದರೆ ಆತನು ಅವಳ ಗೈರ ಲಾಭ ಪಡೆಯದೆ ಎಂದಿಗೂ ಬಿಡಲಿಕ್ಕಿಲ್ಲ. ಗಂಡಸಿನಲ್ಲಿ ನಾಚಿಕೊಳ್ಳೋಣವು ಎಷ್ಟೇ ಅಲ್ಪಪ್ರಮಾಣದಲ್ಲಿರಲೊಲ್ಲದೇಕೆ, ಅದು ಮಹತ್ತರವಾದ ದುರ್ಗುಣವೇ ಆದೀತು; ಮತ್ತು ಪ್ರೀತಿವಿವಾಹದಲ್ಲಿ

ಯಾವ ಕುಲ-ಶೀಲವಂತ ಸಂಭಾವಿತ ತರುಣರು ಯಾವಾಗಲೂ ಅಪಯಶಿ ಗಳೆಂದು ಕಾಣಿಸುವರೋ, ಅದಾದರೂ ಅವರ ಆ ನಾಚಿಕೊಳ್ಳೋಣದರಿಂದಲೇ! ಸ್ತ್ರೀಯು ದಿಟ್ಟತನದ ಮಿತಿಮೀರಿದ ಸಲಿಗೆಯಿಂದಲೇ ವಶಳಾಗತಕ್ಕ ವಸ್ತು ವಾಗಿದ್ದಾಳೆ; ಮತ್ತು ವಿಸ್ಮಯವನ್ನುಂಟುಮಾಡುವ ವಿಧರ್ಮೀಯ ಇಂವೆ ವಿಜಾತೀಯ ವಿವಾಹಗಳು ಎಲ್ಲೆಲ್ಲಿ ಆಗಿರುವವೋ, ಅಲ್ಲಲ್ಲಿ ಗಂಡಸರ ಅ ಮಿತಿಯಿಲ್ಲದ ಸಲಿಗೆಯೇ ಪ್ರಾಮುಖ್ಯವಾದ ಕಾರಣವೆಂದು ತಿಳಿಯಬರು ವದು. ಪ್ರೀತಿವಿವಾಹ ಮಾಡಿಕೊಳ್ಳುವ ಮಹತ್ವಾಕಾಂಕ್ಷೆಯು ಗಂಡಸಿಗ ದಿದ್ದರೆ ಆತನಲ್ಲಿ ತುಸ ಸಾಹಸವೂ, ಉಲ್ಲೂತನದಲ್ಲಿ ಸಮಾವೇಶವಾಗದಂತ ತುಸ ದಿಟ್ಟತನವೂ ಬೇಕೇಬೇಕು. ವಿನಯಶೀಲ ವರ್ತನದಲ್ಲಿ ವಿಕಾರಗ ಬಗ್ಗೆ ದೊರಕಿಸಿದ ವಿಜಯದ ಅನುಭವವು ಕಂಡುಬರುತ್ತದೆ; ಮತ್ತು ಯಾವನು ಸ್ವಂತದ ವಿಕಾರಗಳನ್ನು ತಡೆಗಟ್ಟಬಲ್ಲನೋ ಅಂಥ ಪರಾಕ್ರಮಿ, ಸಂಯಮಿ ಹಾಗು ಧೀರೋದಾತ್ತ ಪುರುಷನ ಸ್ವಾಧೀನದಲ್ಲೇ ಸ್ತ್ರೀಯು ತನ್ನ ಜೀವನಸರ್ವಸ್ವವನ್ನರ್ಪಿಸಲಿಕ್ಕೆ ಸಿದ್ಧಳಾಗುವಳು.

ಗಂಡಸಿಗೆ ಪತ್ನಿಯು—ತನ್ನ ಚಿಂತೆ ಮತ್ತು ಕ್ರೀಡೆ ಇವೆರಡು ದ್ವಂದ್ವ ಗಳಲ್ಲಿ ಸರಿಜೋಡಿಯಿಂದ ವರ್ತಿಸುವ ಹಾಗು ಉತ್ತೇಜನ ಕೊಡುವ ಜೀವಶ್ಚ ಕಂಠಶ್ಚ ಸಖಿಯು—ಬೇಕಿರುತ್ತಾಳೆ. ಅವಳ ಮನದ ಪ್ರೇಮಲತನ ಮತ್ತು ದೇಹದ ಮೋಹಕತನ ಇವುಗಳ ಬಗ್ಗೆಯೇ ಆತನಿಗೆ ವಿಶೇಷವೆನಿಸುತ್ತದೆ. ಗಂಡಸು ಒಬ್ಬ ಆಧಾರವೆಂದೇ ಸ್ತ್ರೀಯು ಆತನನ್ನು ಅಂಗೀಕರಿಸುತ್ತಿರುತ್ತಾಳೆ ಆದರಿಂದ ಆತನು ಎಷ್ಟು ಹೆಚ್ಚು ಸಂಯಮಿ, ಎಷ್ಟು ಧೀರೋದಾತ್ತ, ತನ್ನ ಬಗ್ಗೆ ಎಷ್ಟು ಹೆಚ್ಚು ಚಿಂತೆ ವಹಿಸತಕ್ಕವನಿರುವನೋ ಅಷ್ಟು ಅವಳಿಗೆ ಬೇಕೇ ಬೇಕೆನಿಸುತ್ತಾನೆ ಈ ಪರಸ್ಪರ ವಿರುದ್ಧವಾದ ಮನೋರಚನೆಯನ್ನು ಮನ ದಂದೇ ಯುವಕ ಯುವತಿಯರು ಪ್ರೀತಿವಿವಾಹದ ಪ್ರಾಥಮಿಕ ಉಪಾಯ ಗಳನ್ನು ಮಾಡಹತ್ತಬೇಕು; ಅಂದರೆ ನಿಶ್ಚಿತ ಘಾಶಿಯು ಬಿದ್ದು, ಅವರ ಆಟವು ಬೇಗನೆ ಯಶಸ್ವಿಯಾದೀತು.

ಅನುನಯದ ಕಾಲವು ಉಭಯತರನ್ನು ಬೇರೆ ಬೇರೆ ಬಗೆಯಿಂದ ಪರೀಕ್ಷೆಯನ್ನೇ ಮಾಡುತ್ತಿರುತ್ತವೆ 'ಅಹುದು, ಇಲ್ಲ' ಗಳನ್ನು ದೀರ್ಘಕಾಲದ ವರೆಗೆ ಅನ್ನುವುದರಿಂದ ಸತ್ಯನಿಷ್ಠೆಯ ಹಗ್ಗವು ಜಗ್ಗಿ ಜಗ್ಗಿ ಗಟ್ಟಿಯಾಗಿರು ವುದೋ ಇಲ್ಲವೋ ಎಂಬದು ತನ್ನಷ್ಟಕ್ಕೆ ತಾನೇ ಕಂಡುಬರುತ್ತಿರುತ್ತದೆ.

ಅದೊಂದೇ ಘಟದೊಳಗಿಂದ ಪ್ರೇಮದ ಉತ್ಕಟತೆ ಹಾಗು ಅಗತಿಕತೆ ಇವು ಗಳು ಸ್ಪಷ್ಟವಾಗುತ್ತಿರುತ್ತವೆ.

ಹಿರಿಯರು ತಕ್ಕ ಸ್ಥಳವಲ್ಲವೆಂದು ದೀರ್ಘಕಾಲದ ವರೆಗೆ ಲಗ್ನವನ್ನು ಮುಂದೂಡುವುದರಿಂದ ವಾಸನೆಗಳ ಉಪಾಸದ ಯಾವ ಸಂಕಟವನ್ನು ಸಹಿಸ ಬೇಕಾಗುತ್ತದೋ ಅದಾದರೂ ಸ್ವಾರ್ಥತ್ಯಾಗವೃತ್ತಿಯ ಪರೀಕ್ಷೆಯೋ ಅಲ್ಲದೆ ಮತ್ತೇನು? ಬೇರೆಯುವವರೊಳಗಿನ ಸಣ್ಣ ಪುಟ್ಟ ದೋಷ ಮತ್ತು ಚಂಡಿತನ ಗಳು ಕುರುಡು ಪ್ರೇಮಕ್ಕೆ ಕಾಣುತ್ತಿರುವದಿಲ್ಲೆಂದು ಕೆಲವರು ಅಂದಾರು; ಆದರೆ ಆ ಆಸಕ್ತ ಮನಸ್ಸಿನ ಪೃಥಃಕರಣಗೆಳಿಸಿದರೆ ಅದರಲ್ಲಿ ಸಹಾನುಭೂ ತಿಯ ಪಕ್ಕದೊಳಗೆ ಆ ಎಲ್ಲ ದುರ್ಗುಣಗಳನ್ನು ಬೇಕೆಂದು ಬಚ್ಚಿಟ್ಟದ್ದು ಕಂಡು ಬಂದೀತು. ಹಾಡುವ ಮುಂಚೆ ತಂಬೂರಿಯ ತಂತಿಗಳನ್ನು ಬಿಗಿಹಚ್ಚಿ ಸ್ವರ ಕೂಡಿಸುತ್ತಾರೆ. ಅವುಗಳಲ್ಲಿ ಸಂವೇದನೆಯುಂಟಾದರೇ ಅವೆಲ್ಲವುಗಳದೂ ಕೂಡಿ ಒಂದೇ ಒಂದಾದ ಪೂರ್ಣ ನಿನಾದವನ್ನು ಅವು ಹೊರಹೊರಡಿಸಲು ಶಕ್ತ ವಾಗುತ್ತವೆ. ಪರಸ್ಪರರ ಸ್ವಭಾವ, ಸ್ವಭಾವದೊಳಗಿಂದ ಹೊರಡುವ ಭಾವನೆ ಮತ್ತು ಆ ಭಾವನೆಗಳ ಹೊಟ್ಟೆಯಲ್ಲಿರುವ ವಿಚಾರಗಳ ತಂತು ಇವುಗಳನ್ನೆಲ್ಲ ಬಿಡಿಸಿ, ಅವುಗಳಲ್ಲಿಯ ಎಷ್ಟು ಹೆಚ್ಚು ತಂತುಗಳು ಏಕಜೀವವಾಗುವವೋ ಆ ಮಾನದಿಂದ ವೈವಾಹಿಕ ಜೀವನದ ಹೆಣಿಕೆಯು ಗಟ್ಟಿಯೂ ಆಕರ್ಷಕವೂ ಬಲಶಾಲಿಯೂ ಆದೀತು! ಭಾವನೆಗಳ ಒಂದೇ ಒಂದು ನಾದವು ಸಹ ಸಂವೇದನೆ ಯನ್ನು ಹುಟ್ಟಿಸುತ್ತಿದ್ದರೆ ಆ ಎರಡು ವ್ಯಕ್ತಿಗಳ ವೈವಾಹಿಕ ಜೀವನದಲ್ಲಿ ಅಖಂಡ ಆಹ್ಲಾದದಾಯಕ ಐಕ್ಯದ ಪೂರ್ಣವಾದ ಆನಂದಸ್ವರವು ಹೊರಡ ಹತ್ತೀತು. ಶಾರೀರಿಕ ಸೌಂದರ್ಯವನ್ನು ಮತ್ತೆ ಮತ್ತೆ ನೋಡುತ್ತಿರುವುದರಿಂದ ಅದು ಮನಸ್ಸಿನಲ್ಲಿ ಹೆಚ್ಚು ಹೆಚ್ಚು ನಡುತ್ತದೆ ಪ್ರಥಮ ದರ್ಶನದಲ್ಲೇ ಪ್ರೇಮ ಉಂಟಾಗುವದು ತೀರ ಘಾತುಕವು. ಅದರಲ್ಲಿ ಬರಿಯ ವಿಷಯಾಸಕ್ತಿ ಯೊಂದೇ ಕಂಡು ಬಂದೀತು. ಶಾರೀರಿಕ ಸೌಂದರ್ಯದ ಗುಣಾವಗುಣಗಳ ನ್ನರಿತು ಇನ್ನೊಬ್ಬರ ಬಗ್ಗೆ ಉಂಟಾದ ಆಕರ್ಷಣವು ಚಿರಸ್ಥಾಯಿ ಸ್ವರೂಪದ್ದಿ ರುತ್ತದೆ; ಮತ್ತು ಆ ಎಲ್ಲ ಗುಣಗಳ ಬಗ್ಗೆ-ಕೇವಲ ಮೇಲೆ ಮೇಲೆ ನೋ ಡೋಣ, ಅಲ್ಲಲ್ಲ-ಚೆನ್ನಾಗಿ ಪರೀಕ್ಷೆಯಾಗುತ್ತಿದ್ದರೆ, ಅದು ಆ ಅನುನಯ ಕಾಲದಲ್ಲೇ. ಮನಸ್ಸು ಪರೀಕ್ಷಕ ಹಾಗು ಪರೀಕ್ಷ್ಯ ಇವರುಗಳ ಏಕತಾನತೆಯ ಮೋಹಜಾಲದ ತಂತುಗಳನ್ನು ಒಬ್ಬರೊಬ್ಬರ ಸುತ್ತು ಲಗುಬಗನೆ ಚೆಲ್ಲ

ಲಿಕ್ಕೂ, ಅವುಗಳನ್ನು ಜಗ್ಗಿ ಜಗ್ಗಿ ನೋಡಲಿಕ್ಕೂ ಹಾಗು ಅವರಲ್ಲಿ ತನ್ನನ್ನು ಕೂಡ ಸುತ್ತಿಕೊಳ್ಳಲಿಕ್ಕೂ ಗರ್ಕವಾಗಿರುತ್ತವೆ ಅಂತೆಯೇ ಆ ಕಾಲವು ಖಿನ್ನ ವಿವಾಹೋತ್ತರಕಾಲಕ್ಕಿಂತಲೂ ಅತ್ಯಂತ ರಮಣೀಯವಾಗಿರುತ್ತವೆ

ಆ ರಮಣೀಯ ಪ್ರಾಂತದೊಳಗಿಂದ ಸಂಚರಿಸುತ್ತಿರುವಾಗ ಅದರೊಳಗಿನ ಅನನುಭೂತ ಸೌಂದರ್ಯದಿಂದ, ಅನುಭವದಿಂದ ಮತ್ತು ಅಪೇಕ್ಷಿತ ಆಕಾಂಕ್ಷೆಗಳ ಸುಖಸ್ವಪ್ನದಿಂದ ಪ್ರತಿಯೊಬ್ಬರೂ ಸ್ವೈರವರ್ತಿಯಾಗಬಹುದು; ಆದರೆ ಆ ನಂದನವನದಲ್ಲೂ ಯಾವ ಯಾವ ಕಠಿಣ ಹಾಗು ಕೊಳಚೆಯ ಸ್ಥಳಗಳಿರುವವೋ, ಅವುಗಳನ್ನು ತಪ್ಪಿಸಲಿಕ್ಕೆ ಆಗದಿದ್ದರೆ ಅವರ ನಾಶವಾದೀತೆಂಬುದಾದರೂ ಅಷ್ಟೇ ನಿಶ್ಚಯವು ಅಂತೆಯೇ ಕಣ್ಣಿನ ಮೇಲೆ ಬಂದಿದ್ದ ಮಬ್ಬನ್ನು ಹುಸ ಇಳಿಸಿಕೊಂಡು, ಕಾಲ ಕೆಳಗಿನ ದಾರಿಯನ್ನು ಸೂಕ್ಷ್ಮವಾಗಿ ನಿರಕಿಸುತ್ತ ನಡೆಯುವದೇ ಜಾಣತನವೂ ಹಿತವೂ ಆದೀತು.

— —

## ಯಾವ ವರನನ್ನು ವರಿಸಬೇಕು? :: ೯

ಸ್ತ್ರೀಯರ ದೃಷ್ಟಿಯಿಂದ ಲಗ್ನದ ಮಹತ್ವವು ವಿಶೇಷವಾಗಿದೆ ಸದ್ಯದ ಅವರ ಆರ್ಥಿಕ ಪರಾಧೀನತೆಯು ಅವರನ್ನು ಪರಾವಲಂಬಿಯನ್ನಾಗ ಮಾಡುತ್ತಿದ್ದರೆ, ಲಗ್ನಸಂಸ್ಕಾರದ ಅಭೇದ್ಯ ಬೇಡಿಯು ಅವರನ್ನು ಸಂಸಾರ ನರಕದಲ್ಲಿ ಸಂತತವಾಗಿ ಕೊಳೆಹಾಕುತ್ತದೆ ಸುಖದ ಕಾರಕ ಮತ್ತು ಮಾರಕ ಹಾಗು ದುರ್ದೈವದ ಕಾರಣ ಮತ್ತು ಪರಿಣಾಮ ಇವುಗಳ ದೃಷ್ಟಿಯಿಂದ ನೋಡಿದರೂ ಸ್ತ್ರೀಯರ ದೃಷ್ಟಿಯಿಂದ ಲಗ್ನದ ಮಹತ್ವ ಹಾಗು ಉಗ್ರ ಸ್ವರೂಪ ಇವುಗಳ ಬಗ್ಗೆ ಎಷ್ಟು ವರ್ಣಿಸಿದರೂ ಅಲ್ಪವೇ ಇದೆ. ಯಾವ ಸ್ತ್ರೀಗೆ ಅನುಕೂಲ ಪರಿಸ್ಥಿತಿ ಮತ್ತು ಅನುರೂಪ ಪತಿರಾಜ ಇವರು ಲಭಿಸುವರೋ, ಅವಳು ಜನ್ಮಜಾತ ಆಪತ್ತಿಯ ಶಿಲೆಯಿಂದುದ್ಧಾರಳಾದಳೆಂದೇ ತಿಳಿಯಬೇಕು; ಆದರೆ ಗುಣವಂತ ಸ್ತ್ರೀಗೆ ಇವೆರಡೂ ಬಾಬುಗಳಲ್ಲಿ ನಿರಾಶೆಯನ್ನೇ ತಾಳಬೇಕಾದರೆ, ಅವಳ ಆಯುಷ್ಯವೆಂದರೆ ಮರ್ತ್ಯಲೋಕದಲ್ಲಿ ಜೀವದಿಂದಿದ್ದರೂ ಯಮಲೋಕದಲ್ಲಾದ ಅವಳ ತಿರುಗುಪ್ಪೇ ಸರಿ! ಪರಿಸ್ಥಿತಿಯ ಕಾಟವನ್ನು ಮನುಷ್ಯನು ಹೇಗಾದರೂ ಸಹಿಸಬಹುದು; ತನ್ನ ಚಾತುರ್ಯದಿಂದ ಅವನು ಪರಿಸ್ಥಿತಿಯನ್ನೇ ಬೊಗ್ಗಿಸಬಹುದು; ಆದರೆ ವಿಪರೀತ ಮನುಷ್ಯನೊಡನೆ ಜನ್ಮದ ಗಂಟುಬಿದ್ದಿತೆಂದರೆ ಸ್ತ್ರೀಯು ಸಹಿಸಬೇಕಾದ ನರಕವಾಸವು ನಿರಂ-

ತರವಷ್ಟೇ ಸರಿ. ಈ ದೃಷ್ಟಿಯಿಂದ ಅನುರೂಪ ಗಂಡನು ದೊರಕುವದು ಅವರ ಇಡೀ ಜೀವಿತದ ಯಶದ ಮೇರುಮಣಿಯಾಗಿದೆ.

ಮೊದಲು ಪತಿಯನ್ನು ಬಹುಮಟ್ಟಿಗೆ ಅವರ ಪಾಲಕರೇ ಆರಿಸುತ್ತಿದ್ದರು; ಮತ್ತು ಇಂದಿಗೂ ಸಹ ಸಾಧಾರಣವಾಗಿ ಪಾಲಕರೇ ಆರಿಸುತ್ತಿರುತ್ತಾರೆ. ತಾವು ಆರಿಸಿದ ವರನು ಮಗಳಿಗೆ ಸಮ್ಮತವಿರಬೇಕೆಂಬುವ ವರೆಗೆ ಇಂದಿನ ಹೆಚ್ಚು ಜನ ಪಾಲಕರ ಉದಾರ ಬುದ್ಧಿಯು ಹರಿಹಾಯ್ದಿರುತ್ತದೆ. ಅತಿ ಪ್ರೌಢರಾಗಿರುವ ಕುಮಾರಿಕೆಯರಿಗೂ ನೂತನ ವಾತಾವರಣದಲ್ಲಿ ಬೆಳೆದ ಕೆಲ ಕುಮಾರಿಕೆಯರಿಗೂ ಅವರು ಸ್ವತಃ ತಮ್ಮ ಗಂಡನನ್ನು ಆರಿಸಿಕೊಳ್ಳಬೇಕೆಂಬ ಅನುಕೂಲತೆಯನ್ನು ಅವರ ಪಾಲಕರು ಅವರಿಗೆ ಕ್ವಚಿತ್ಪ್ರಸಂಗದಲ್ಲಿ ಕೊಟ್ಟಿರುವದು ಕಂಡು ಬರುತ್ತದೆ. ಇಂಥ ಇಂದಿನ ಕುಮಾರಿಕೆಯರ ಹಾಗು ಸರ್ವಸಾಧಾರಣ ಕುಮಾರಿಕೆಯರ ಉಪಯೋಗಕ್ಕಾಗಿ ಇಲ್ಲಿ ವರನನ್ನಾರಿಸುವ ಧೋರಣ ನಮೂದಿಸುವದನ್ನು ನಾವು ಯೋಜಿಸಿರುತ್ತೇವೆ. ಅರ್ಥಾತ್ ವರ ಪರೀಕ್ಷೆಯ ಕಾಲಕ್ಕೆ ಪ್ರೌಢ ಪಾಲಕರಂತೆ ನಿರ್ವಿಕಾರ ಮನಸ್ಸಿನಿಂದ ಹಾಗು ತಾಟಸ್ಥ್ಯ ವೃತ್ತಿಯಿಂದ ಕುಮಾರಿಕೆಯರು ನಿರ್ಣಯ ಮಾಡಲು ಶಕ್ತರಾಗೇ ಆಗುವರೆಂಬ ನಿಯಮವಿರುವದಿಲ್ಲ. ಹಲವು ಪ್ರಸಂಗಗಳಲ್ಲಿ ಅವರು ಬಹಿರ್ರೂಪ, ಡೌಲು ಇವುಗಳಿಂದ ಮೋಸ ಹೋಗುವ ಸಂಭವವೂ ಇರುತ್ತದೆ. ಆದರೂ ಕೂಡ ತಾವು ತಮ್ಮ ಗಂಡನನ್ನು ಯಾವ ಯಾವ ಅಪೇಕ್ಷೆಗಳಿಂದ ಆರಿಸಿಕೊಳ್ಳಬೇಕೆಂಬ ಮಾಹಿತಿ ಮಾಡಿಕೊಂಡರೆ, ಅವರು ಮೋಸ ಹೋಗುವ ಸಂಭವವು ಕಡಿಮೆಯಾದೀತು.

ಸ್ತ್ರೀಯರ ಪ್ರತಿಷ್ಠೆಯು ಅವರುಗಳ ಸಾಮಾಜಿಕ ದರ್ಜೆಯನ್ನೇ ಹೆಚ್ಚಾಗಿ ಅವಲಂಬಿಸುತ್ತದೆ. ಹೆಣ್ಣುಮಕ್ಕಳಂತೂ ತಮ್ಮ ತಮ್ಮೊಳಗಿನ ಉಚ್ಚ-ನೀಚ ಭಾವವನ್ನು ಸಂಪತ್ತಿನ ಮಾಪಿನಿಂದಲೇ ಅಳೆದು ಗೊತ್ತುಪಡಿಸುತ್ತಾರೆ. ದೊಡ್ಡ ಅಮಲ್ದಾರನ ಮೂಢ ಮಡದಿಯು ಸ್ತ್ರೀಯರ ಸಭೆಯಲ್ಲಿ ಅಧ್ಯಕ್ಷ ಸ್ಥಾನದಲ್ಲಿ ಕುಳಿತಕೊಂಡರೆ, ಬಡವನ ಬುದ್ಧಿವಂತ ಮತ್ತು ಸುಶಿಕ್ಷಿತ ಸ್ತ್ರೀಗೆ ನೆಲದ ಮೇಲೆ ಕೂಡ್ರಲಿಕ್ಕೆ ಕೂಡ ಸ್ಥಳವಿಲ್ಲೆಂದು ಬಾಗಿಲದ ಹೊರಗೇ ನಿಂತುಕೊಂಡಿರುವ ದೃಶ್ಯವು ಕಂಡುಬಂದೀತು. ಲಗ್ನ-ಕಾರ್ಯಗಳು, ಸಭೆ-ಸಮ್ಮೇಲನಗಳು, ಔತಣ-ಸಹಭೋಜನಗಳು ಇವುಗಳಲ್ಲೆಲ್ಲ ಅಗ್ರಸ್ಥಾನದಲ್ಲಿ ಕೂಡ್ರುವ ಹಾಗು ಮೆರೆಯುವ ಸ್ತ್ರೀಯರು ಕೇವಲ ಗಂಡಂದಿರ ಅಧಿಕಾರದ

ಹಾಗು ಸಿರಿವಂತಿಕೆಯು ಬಲದ ಮೇಲೆಯೇ ಮೆರೆಯುತ್ತಿರುತ್ತಾರೆ. ಇಷ್ಟೇ ಅಲ್ಲ, ನಾಲ್ಕು ಜನ ದೊಡ್ಡ ಮನುಷ್ಯರನ್ನು ಊಟ-ತಿಂಡಿಗೆ ಕರೆದರೆ, ಇಂಥ ಪ್ರಸಂಗಗಳಲ್ಲಿ ನಿತ್ಯಗಟ್ಟಿ ಉಪಯುಕ್ತವಾಗಿರುವ ಗುಣವಂತ ಬಡವೆಯನ್ನು ಬೇಕಂತ ಬಿಟ್ಟುಬಿಡಲಾಗುತ್ತದೆ! ಅಂತೆಯೇ ಹುಡುಗೆಯು ಎಳೆತವು ಧನಿಕ ಗಂಡನನ್ನು ದೊರಕಿಸುವದರ ಕಡೆಗೆ ಸಹಜವಾಗಿಯೇ ಇರುತ್ತದೆ. ಚಿಕ್ಕಂದಿನಿಂದ ಹುಡುಗೆಯು ಕಿವಿಗೆ ತಂದೆ-ತಾಯಿಗಳ ಅಚ್ಚೆ-ಕೌತುಕದ ಯಾವ ಶಬ್ದಗಳು ಕೇಳಿಸುವವೋ, ಅವುಗಳಲ್ಲಿ 'ನಿನಗೆ ಧನಿಕ ಮತ್ತು ಸುಂದರ ಗಂಡನನ್ನೇ ಹುಡುಕಿಕೊಡುವೆವು' ಎಂಬ ಆಶ್ವಾಸನವಿರುತ್ತದೆ. ಹುಡುಗ ಮನಸ್ಸಿನ ಮೇಲೆ ಅದೇ ಅಚ್ಚೆ-ಕೌತುಕದ ಮಾತುಗಳ ನಿರಂತರದ ಛಾಪು ಮೂಡಿರುತ್ತವೆ; ಮತ್ತು ಅವುಗಳಿಂದ ಅಂಥವೇ ಆಕಾಂಕ್ಷೆಗಳ ಚಿತ್ರಪಟವು ಅವರ ಕಣ್ಣೆದುರು ಒಂದೇಸವನೆ ಕುಣಿಯುಹತ್ತುತ್ತದೆ.

ಹುಡುಗೆಗೆ ತನ್ನ ಗಂಡನ ಬಗ್ಗೆ ಸರ್ವಸಾಧಾರಣವಾಗಿ ಎರಡೇ ಅಪೇಕ್ಷೆಗಳಿರುತ್ತವೆ ಅವಾವೆಂದರೆ, ಆತನು ಧನಿಕನಿರಬೇಕು; ಹಾಗು ಸುಂದರನಿರಬೇಕು; ಆದರೆ ಇವೆರಡು ಅಪೇಕ್ಷೆಗಳು ಸಂಸಾರ ಸುಖದ ದೃಷ್ಟಿಯಿಂದ ಅಪೂರ್ಣವಿಷ್ಟೇ ಅಲ್ಲ, ಎಕಾಂಗಿಗಳೂ ಆಗುವವು ಸಾಕಷ್ಟು ದುಡ್ಡಿದ್ದು ದುಃಖಿಗಳಾಗಿರುವ ಯುಗ್ಮಗಳೇನೂ ಕಡಿಮೆಯಿರುವದಿಲ್ಲ; ಮತ್ತು ಸ್ವರೂಪದಿಂದ ಸುಂದರನಾಗಿರುವ ಗಂಡನು ಮೂರ್ಖ, ಹೇಡಿ ಹಾಗು ಕ್ರೂರನೂ ಇರಬಲ್ಲನು. ಅದರಿಂದ ಇವೆರಡು ಬಾಬುಗಳು ಕೈಗೂಡಿದವೆಂದರೆ ಸಂಸಾರ ಸುಖದ ಸ್ವರ್ಗವೇ ಪ್ರಾಪ್ತವಾಯಿತೆಂದು ತಿಳಿಯುವುದು ತಪ್ಪೇ ಸರಿ. ಧನ ಹಾಗು ಸುರೂಪ ಇವು ದುರ್ಮಿಲ; ಅಂತೆಯೇ ಅವುಗಳ ಸಂಗಮವು ಒಂದೇ ವ್ಯಕ್ತಿಯಲ್ಲಾಗುವುದು ಬಹುಮಟ್ಟಿಗೆ ಅಶಕ್ಯವು ಇಂಥ ಸ್ಥಳವು ಸರ್ವಸಾಧಾರಣ ಹುಡುಗೆಗೆ ಲಭಿಸುವುದಂತೂ ತೀರ ಅಶಕ್ಯವೇ ಆಗಿರುತ್ತದೆನ್ನಬಹುದು ಅಂತೆಯೇ ಬರಿಯ ಸಿರಿವಂತಿಕೆ ಮತ್ತು ಬರಿಯ ಸುರೂಪ ಇವುಗಳಿಗೇ ಮನಸೋತು ವರನಸ್ವೀಕರಿಸುವುದು ಎಷ್ಟು ತೊಂದರೆಯದೋ, ಅದು ಅಷ್ಟೇ ಅಪ್ರಾಪ್ತಕೋಟಿಯೊಳಗಿನದು. ಅವೆರಡೂ ಸಂಗತಿಗಳಿಗೆ ಒಂದಿಷ್ಟು ಗೌಣತ್ವಕೊಡುವದೇ ವಿಹಿತವು. ಆ ಎರಡು ಕಲ್ಪನೆಗಳ ಜೊತೆಗೆ ಗಂಡನು ಸುಶಿಕ್ಷಿತನಿರಬೇಕೆಂಬ ಅಪೇಕ್ಷೆಯೂ ಬಂದು ನಿಲ್ಲುತ್ತದೆ. ಕಲಿತಂಥವನಾಗಿದ್ದರೂ ಆತನು ದುರ್ವ್ಯಸನಿಯೂ ದುಃಸ್ವಭಾವಿಯೂ ಮತ್ತು ಅನೀತಿಯುತನೂ

ಟಾರುವದಿಲ್ಲೆಂದು ಹೇಗೆ ಹೇಳಬೇಕು? ಆದರೆ ಸಮಾಜದಲ್ಲಿ ಮನುಷ್ಯನಿಗೆ ಪ್ರತಿಷ್ಠೆಯು ಯಾವ ಮೂರು ಸಂಗತಿಗಳಿಂದ ಲಭಿಸುವದೋ ಆ ಮೂರು ಸಂಗತಿಗಳು ಮಹತ್ವಾಕಾಂಕ್ಷೆಯ ವಿಷಯಗಳೆಂದು ಅವರು ಆಶಿಸಿದರೆ ಅದು ಕ್ಷಮ್ಯವೆನಿಸೀತು; ಆದರೆ ಅವುಗಳಿಗೇ ಹೊಂದಿಕೊಂಡಿರುವುದು ಹಲವು ವೇಳೆ ಹುಚ್ಚುತನದ್ದಾಗುತ್ತದೆ; ಲಗ್ನ ಕೂಡಿ ಬಾರದಿರಲಿಕ್ಕೆ ಅನೊಂದು ಕಾರಣವೂ ಆಗಿ ಕೂಡ್ರುತ್ತದೆ ಈ ಮೂರು ಅಪೇಕ್ಷೆಗಳನ್ನು ಬೇರೆ ಅಪೇಕ್ಷೆಗಳೊಡನೆ ಜೋಡಿಸಿದರೆ ಅಡ್ಡಿಯಿಲ್ಲ ಆದರೆ ಬೇರೆ ಗುಣಾವಗುಣಗಳನ್ನು ನೋಡದೆ ಈ ಮೂರು ಗುಣಗಳಿಂದಲೇ ಮುಟ್ಟಿಗವಿದು ಯಾವಳು ವರಪರೀಕ್ಷೆ ಮಾಡು ವಳೋ ಅವಳ ಉದ್ದಲ್ಲಿ ನಿರಾಶೆಯ ಫಲವು ಖಂಡಿತವಾಗಿ ಬಿದ್ದೀತು

ಲಗ್ನವೆಂದರೆ ಸಂಸಾರ; ಮತ್ತು ಸಂಸಾರವೆಂದರೆ ಕುಟುಂಬ ಇಂದಿಗೆ ಚಿಕ್ಕದು; ಹಾಗು ಅದರೊಳಗಿಂದಲೇ ನಾಳೆಗೆ ಹಬ್ಬುವ ಚಿಕ್ಕ-ಪುಟ್ಟ ಮಕ್ಕಳ ದೊಡ್ಡ ಕುಟುಂಬವೇ ಸಂಸಾರದ ಕಾರ್ಯಕ್ಷೇತ್ರವು ಗಂಡಸು ಕುಟುಂಬದ ಸಂರಕ್ಷಕನು ಕೆಲ ಸ್ವಲ್ಪ ಮಂದಿ ಸ್ತ್ರೀಯರು ಇಂದಿಗೆ ನೌಕರಿ ಮಾಡತೊಡ ಗಿದ್ದರೂ ಅವರು ನೌಕರಿ ಮಾಡುವದು ಅಪವಾದಾತ್ಮಕವೂ ಆಪದ್ಧರ್ಮವೂ ಆಗಿವೆ. ವಿಶೇಷವಾಗಿ ಬುದ್ಧಿವಂತ, ಗಂಡಸರಂತಿರುವ, ಕಾರ್ಯಕುಶಲ ಇಂಥ ಸ್ತ್ರೀಯರನ್ನು ಬಿಟ್ಟುಬಿಟ್ಟರೆ, ಸರ್ವಸಾಧಾರಣವಾಗಿ ಸ್ತ್ರೀಯರಿಗೆ ಮನೆಯ ಹೊರಗಿನ ಕಾಟವು ಆಪತ್ತಿಯೆಂದೇ ಅನಿಸುತ್ತದೆ. ಸ್ತ್ರೀಯರ ಯೋಗ್ಯತೆ ಯನ್ನು ಅವರ ಸಂಸಾರ ಕುಶಲತೆಯ ಮೇಲಿಂದ ನಿರ್ಧರಿಸಬೇಕು. ಗಂಡಸಿನ ಯೋಗ್ಯತೆಯನ್ನು ಆತನ ಕುಟುಂಬ ಸಂರಕ್ಷಣದ ಪಾತ್ರತೆಯ ಮೇಲಿಂದ ಗೊತ್ತುಪಡಿಸಬೇಕು. ಕುಟುಂಬದ ಸಂರಕ್ಷಣ ಮಾಡಲಿಕ್ಕೆ ಗಂಡಸಿನಲ್ಲಿ ಅದೆಷ್ಟೋ ಭಿನ್ನಭಿನ್ನ ಗುಣಗಳಿರಬೇಕಾಗುತ್ತವೆ ಅದರ ಹೊರತು ಜೀವನ ಕಲಹದ ಗೊಂದಲದೊಳಗೆ ಆತನಿಂದ ತನ್ನ ಮಡದಿಯ ಹಾಗು ಅವಳ ಸೆರ ಗಿನ ಕೆಳಗೆ ಮುಚ್ಚಿಕೊಂಡಿರುವ ಮಕ್ಕಳು-ಮರಿಗಳ ಸಂರಕ್ಷಣವನ್ನು ಮಾಡಲಾಗಲಿಕ್ಕಿಲ್ಲ.

ಜೀವನ ಕಲಹದೊಳಗೆ ಮನೆಯ ಹೊರಗಿನ ಎಲ್ಲ ದಾಳಿಗಳನ್ನು ಗಂಡನೇ ಸಹಿಸಬೇಕಾಗುತ್ತದೆ, ಹಿಂದಿರುಗಿಸಬೇಕಾಗುತ್ತದೆ; ಅದರಂತೆ ಮನೆಯೊಳಗಿನ ಜೀವನಕಲಹದ ಬರೆಗಳನ್ನು ಸ್ತ್ರೀಯು ಸಹಿಸಬೇಕಾಗು ತ್ತದೆ; ಹಾಗು ಅವಳೇ ಅವುಗಳನ್ನು ಹೇಗೆ-ಹೇಗಾದರೂ ಶಾಂತಪಡಿಸಬೇಕಾ

ಗುತ್ತದೆ. ಪುರುಷನು ಪರಾಕ್ರಮಿಯಾದರೆ, ಸ್ತ್ರೀಯು ಸಹನಶೀಲಳಿರಬೇ ಕೆಂಬ ಗುಣವಿಭಾಗಣೆಯು ಅದರಿಂದ ತಾನಾಗಿಯೇ ಆಗುತ್ತದೆ. ಪತಿಯು ತೇಜಸ್ವಿಯೂ ಪರಾಕ್ರಮಿಯೂ ಇರಬೇಕು. ಪರಾಕ್ರಮವೇ ಪುರುಷರ ಸೌಂದರ್ಯವು; ಮತ್ತು ಅವರ ಐಶ್ವರ್ಯವು; ಹಾಗು ವಿದ್ಯೆಯ ಕೊನೆಯ ಪರೀಕ್ಷೆ ಕೂಡ ಈ ಪರಾಕ್ರಮವನ್ನೇ ಆಗಿರುತ್ತದೆ. ಪರಾಕ್ರಮವಿರದಿದ್ದರೆ ರೂಪಸುಂದರ ಪುರುಷನು ಹೇಡಿಯೂ ದೀನನೂ ಆಗಿ ಕಂಡಾನು; ಮೂರ್ಖ ನಿಗಿಂತಲೂ ಮೂರ್ಖನಾದಾನು; ಮತು ಅವನನ್ನು ಧನದ ಗುಡ್ಡೆಯ ಮೇಲೆ ಕೂಡ್ರಿಸಿದರೂ ಆತನು ಕಂಗಾಲರ ಪಂಕ್ತಿಗೆ ಕಾತರೆ ಹೋಗಿ ಕುಳಿತಾನು. ಆ ಭಯಾನಕ ಚಿತ್ರವು ಕಣ್ಣೆದುರಿಗೆ ನಿಂತರೂ ಕೂಡ ಯಾವ ಕುಮಾರಿಕೆ ಯರಿಗೆ ವಿದ್ಯೆ, ಧನ ಮತ್ತು ಸುರೂಪ ಇವುಗಳ ಮಬ್ಬೇ ಬೀಳುತ್ತದೋ, ಅವರ ಬಗ್ಗೆ ಎಷ್ಟು ಹಳಹಳಿಸಿದರೂ ಅಲ್ಪವೇ ಸರಿ. ಪರಾಕ್ರಮವೆಂದರೆ ಅದಕ್ಕೆ ಧೈರ್ಯದ ಬೆಂಬಲ ಬೇಕಾಗುತ್ತದೆ; ಮತ್ತು ಸ್ವಂತದ ಕಾರ್ಯಕುಶಲತೆಯ ಹೆಚ್ಚಾದ ಅಭಿಮಾನವು ಅಂತರಂಗದಲ್ಲಿರದಿದ್ದರೆ ಅಂಥ ಧೈರ್ಯವಾದರೂ ಅದೆಲ್ಲಿಂದ ಬಂದೀತು?

ಇತ್ತೀಚೆಗೆ ಕುಮಾರಿಕೆಯರಿಗೆ 'ಸ್ಮಾರ್ಟ' ಅಥವಾ ಚಾಲಾಕ ತರುಣರೇ ಆದರ್ಶ ಪತಿಗಳೆಂದೆನಿಸಹತ್ತಿದ್ದಾರೆ; ಆದರೆ ಚಾಲಾಕಿಯು ಹಲವು ಪ್ರಸಂಗ ಗಳಲ್ಲಿ ಹಲವು ಗುಣಗಳ ಅಭಾವವನ್ನೇ ತೋರೀತಾದರೆ, ಅದೆಷ್ಟೋ ತ್ಯಾಜ್ಯ ಗುಣಗಳನ್ನೂ ಮರೆಮಾಡಿಬಿಟ್ಟೀತು. ತರುಣರು ಚಾಲಾಕರಿರಬೇಕೆಂಬು ದೇನೂ ಸುಳ್ಳಲ್ಲ; ಆದರೆ ಒರಿಯ ಚಾಲಾಕಿ ನೋಡಿ ಮಬ್ಬಿಗೆ ಬಿದ್ದು ಕುಮಾರಿಕೆಯರು ಅವನನ್ನು ಬೇರೆ ರೀತಿಯಿಂದ ಪರೀಕ್ಷಿಸುವುದನ್ನು ಬಿಟ್ಟು ಬಿಡಬಾರದು. ಅವೆಲ್ಲವುಗಳ ಪರೀಕ್ಷೆಯಲ್ಲೂ ಆತನು ಉತ್ತೀರ್ಣನಾದರೇ ಇತರ ಗುಣಗಳೊಡನೆ ಚಾಲಾಕಿಯನ್ನು ಅದೊಂದು ಒಡೆದು ಕಾಣಿಸುವ ಗುಣವೆಂದು ತಿಳಿಯಲಾದೀತು; ಆದರೆ ಪ್ರೇಮದ ವೈಷಯಿಕ ವಿಷಯವು ಆಕರ್ಷಣ ಸುಲಭವೂ, ಬಹುಮಟ್ಟಿಗೆ ಉಬ್ಬೂಸ್ವರೂಪದ್ದೂ ಆಗಿರುತ್ತದೆ. ಇಂಥ ಕುರುಡಪ್ರೇಮವೇ ಅವಿವೇಕದ ಪಟ್ಟಿಯನ್ನು ಕಣ್ಣಿಗೆ ಕಟ್ಟಿ ಸ್ತ್ರೀಯನ್ನು ದುರ್ಗುಣದ ಹಾಗು ಕೀಳುತರದ ಬೇಗೆಗೆ ಒಯ್ದು ಮುಟ್ಟಿಸುತ್ತದೆ.

ಭಾವೀ ಗಂಡನಲ್ಲಿ ಕೆಟ್ಟ ಚಟಗಳು ಇಲ್ಲವೆ ವ್ಯಸನಗಳು ಇವೆಯೋ ಹೇಗೆಂಬದನ್ನು ಕುಮಾರಿಕೆಯು ತಪ್ಪದೆ ಸೂಕ್ಷ್ಮವಾಗಿ ಪರೀಕ್ಷಿಸಬೇಕು.

ವ್ಯಸನವೆಂಬುದು ಸಂಪೂರ್ಣ ವಿನಾಶದ ಅರುಣೋದಯವೇ ಸರಿ. ಇಂಥ ವ್ಯಸನ
ಗಳು ಕೆಡಕು ಮತ್ತು ಇಂಥವು ಚಲೋ ಎಂಬುದನ್ನು ಕುಮಾರಿಕೆಯರು
ತಮ್ಮ ಸ್ವಂತದ ಇಚ್ಛಾನಿಚ್ಛೆಗಳ ಮೇಲಿಂದ ನಿರ್ಧರಿಸತಕ್ಕವರು. ಕೆಟ್ಟ ಚಟ
ಗಳು ಪತಿ-ಪತ್ನಿಯರಲ್ಲಿ ಒಂದು ಬಗೆಯ ಪಾರದರ್ಶಕ ಗೋಡೆಯನ್ನು ಎಡೆ
ಬಿಡದೆ ರಚಿಸುತ್ತಿರುತ್ತವೆ. ಇದರಿಂದ ಅವರುಗಳಲ್ಲಿಯ ಮನಬಿಚ್ಚಿನ ಕೂಡು
ಕೊಳ್ಳಿಯು ನಿರಂತರ ಕಟ್ಟಾಗಿ ಹೋಗುತ್ತದೆ.

ಪ್ರೀತಿವಿವಾಹದ ಬಾಬಿನಲ್ಲಿ ಹೊರಚಾಳಿಯ ಚಟವು ತರುಣರಿಗೆ ಹತ್ತಿರು
ವುದು ತೀರ ಅಸಂಭವವೆನಿಸುವದಾಗಿಲ್ಲ. ಇಂಥ ಆ ಕೆಟ್ಟ ವ್ಯಸನದಿಂದ ಸಂಸಾರ
ಸುಖವಷ್ಟೇ ಏಕೆ, ತಜ್ಜನ್ಯವಾದ ಕುತ್ಸಿತ ರೋಗಗಳಿಂದ ಮಕ್ಕಳು ಮರಿಗಳು
ನಾಶಹೊಂದುವ ಭಯಂಕರ ಚಿತ್ರವನ್ನು ಕುಮಾರಿಕೆಯರು ತಮ್ಮ ಕಣ್ಣೆದುರು
ತಂದುಕೊಳ್ಳಬೇಕು.

ಗಂಡನಲ್ಲಿ ಪರಾಕ್ರಮ, ಔದಾರ್ಯ, ಮಮತೆ, ಶ್ರಮ, ಸಾಹಸ, ಸತ್ಯ
ನಿಷ್ಠೆ ಮುಂತಾದ ಸದ್ಗುಣಗಳಿರಬೇಕು. ಕೆಟ್ಟ ಚಾಳಿ, ಚಟ, ವ್ಯಸನ, ಕುತ್ಸಿತ
ರೋಗ ಮೊದಲಾದವುಗಳಿರಬಾರದೆಂದು ಮೇಲೆ ವಿವರಿಸಿದೆಯಷ್ಟೇ? ಆದರೆ
ಅವುಗಳನ್ನು ಕುಮಾರಿಕೆಯರು ತಿಳಿಯುವದೆಂತು? ಆದರೆ ಪ್ರಿಯಾರಾ
ಧನೆಯ ಸಮಯದಲ್ಲಿ ಕುಮಾರಿಕೆಗೆ ಭಾವೀ ಗಂಡನ ಸ್ವಭಾವದ, ಅವನ
ಗುಣಾವಗುಣಗಳ ಖಾತ್ರಿ ಮಾಡಿಕೊಳ್ಳುವ ಸಂಧಿಯು ಬೇಕಾದಷ್ಟು ದೊರೆ
ಯುತ್ತದೆ. ಆ ಸಂಧಿಯ ಲಾಭವನ್ನು ಅವಳು ಸಂಪೂರ್ಣವಾಗಿ ಮಾಡಿಕೊಳ್ಳ
ಬೇಕು.

ಮನುಷ್ಯನ ಸ್ವಭಾವ, ಆತನ ಆಕಾಂಕ್ಷೆ, ಆತನ ಇಚ್ಛಾನಿಚ್ಛೆ ಇವೆಲ್ಲ
ಯಾವ ಬಗೆಯವಿರುವವೋ ಅದೇ ಬಗೆಯ ಮಿತ್ರ-ಆಪ್ತರು ಆತನ ಸುತ್ತಲೂ
ಕಲೆಯುತ್ತಿರುತ್ತಾರೆ ಒಂದೇ ಬಗೆಯ ರೆಕ್ಕೆಯ ಹಕ್ಕಿಗಳು ಹೇಗೆ ಒಂದು
ಗೂಡುವವೋ, ಅದರಂತೆಯೇ 'ಸಮಾನ ಶೀಲ ವ್ಯಸನೇಷು ಸಖ್ಯಂ' ಎಂಬಂತೆ
ಒಂದೇ ಬಗೆಯ ಶೀಲದ ಜನರು ಒಬ್ಬರೊಬ್ಬರ ಗೆಳೆಯರಾಗುತ್ತಿರುತ್ತಾರೆ. ಆತನ
ಗೆಳೆಯರ ಸ್ವಭಾವದ ಪರೀಕ್ಷೆಯು ಸ್ವಂತ ಅಥವಾ ಬೇರೆಯವರಿಂದ ಬೇಕಾ
ದಷ್ಟು ನಿರ್ಭಿಡೆಯಿಂದ ಮಾಡುವದು ಕಠಿಣವಿರುವದಿಲ್ಲ. ಮಿತ್ರರ ವರ್ತನದ
ಮೇಲಿಂದ ತನ್ನ ಭಾವೀ ಗಂಡನ ನಡತೆಯ ಕಲ್ಪನೆ ಮಾಡಿಕೊಳ್ಳುವದು
ಕಠಿಣವಲ್ಲ; ಮತ್ತು ಹಾಗೆ ಕಲ್ಪನೆ ಮಾಡುವುದು ತಪ್ಪಿನದಂತೂ ಅಲ್ಲವೇ

ಅಲ್ಲ. ಗಂಡನ ಕುಟುಂಬದ ಪೂರ್ವೇತಿಹಾಸ, ಆತನ ಸಮೀಪದ ಬಂಧುಗಳ ಚರಿತ್ರಗಳು ಇವುಗಳ ಮೇಲಿಂದಂತೂ ಆತನ ಮನಸ್ಸಿನ ಮೇಲುಂಟಾದ ಸಂಸ್ಕಾರಗಳು ಸಹಜವಾಗಿ ತಿಳಿದಾವು. ಕುಲ, ಶೀಲ ನೋಡುವ ಹೊಣೆಯು ಅಲ್ಲಿಯೇ ಉಂಟಾಗುವುದು. ಆನುವಂಶಿಕ ಗುಣಗಳ ಸಂಕ್ರಮಣಕ್ಷಮತೆಯು ಮೇರೆಗೆ ಆತನ ಪೂರ್ವಜರ ಒಳಿತು ಕೆಡಕು ಗುಣಗಳು ಆತನಲ್ಲುಂಟಾಗಿರ ಬೇಕು; ಮತ್ತು ಅವು ಇನ್ನೂ ಪ್ರಕಟವಾಗಿರದಿದ್ದರೂ ಕದಾಚಿತ್ ಬೇಗನೆ ಆತನಲ್ಲಿ ಹಾಗು ಮುಂದೆ ತನ್ನ ಮಕ್ಕಳು-ಮರಿಗಳಲ್ಲಿ ಅವಶ್ಯವಾಗಿ ಪ್ರಕಟ ವಾಗತಕ್ಕವು ಎಂಬದನ್ನು ಲಕ್ಷ್ಯದಲ್ಲಿರಿಸಬೇಕು. ಆತನ ಕುಟುಂಬವು ಸುಖ ಸಮಾಧಾನದ್ದಾಗಿದ್ದರೆ ಆತನ ಸ್ವಭಾವವು ಶಾಂತವೂ ಉದಾರವೂ ಇದ್ದೀತು. ಆತನ ಕುಟುಂಬದಲ್ಲಿ ಸದಾ ಜಗಳ-ತಂಟೆ ಮತ್ತು ಕಿರಿಕಿರಿಗಳಿದ್ದರೆ ಅವನು ಆ ಜಗಳ-ತಂಟೆಗಳ ಪರಂಪರೆಯನ್ನು ಮುಂದರಿಸದೆ ಬಿಡನು.

ಆದರೆ ಅದೇ ಪರಾಕ್ರಮೀ ಗಂಡನು ಕ್ರೂರನಾಗಿದ್ದರೆ ಆತನು ಕುಟುಂ ಬದ ಸಂರಕ್ಷಕನಾಗಲಿಕ್ಕೆ ಅನರ್ಹನೇ ಸರಿ. ಅದಕ್ಕಾಗಿ ಗಂಡನಲ್ಲಿ ಔದಾರ್ಯ ಹಾಗು ಮಮತೆಗಳು ಸಾಕಷ್ಟು ಇರಲಿಕ್ಕೇ ಬೇಕು. ಆತನ ಮಮತೆಯ ನೆಳಲಿ ನಲ್ಲೂ ಔದಾರ್ಯದ ಸೆಲೆಯಲ್ಲೂ ಚಿಕ್ಕ-ಪುಟ್ಟ ಮಕ್ಕಳು-ಮರಿಗಳು ಬೆಳೆದು ದೊಡ್ಡವರಾಗುವದಿರುತ್ತದೆ; ದಣಿದು ಕಂಗೆಟ್ಟ ಮಡದಿಗೆ ವಿಶ್ರಾಂತಿಯ ಆಸರವು ದೊರಕುತ್ತದೆ. ಗಂಡನಲ್ಲಿ ಸಂಗ್ರಾಹಕ ಪ್ರವೃತ್ತಿಯು ಅವಶ್ಯ ವಾಗಿ ಇರಬೇಕು. ಆತನಿಗೆ ತನ್ನ ಮಿತ್ರ-ಬಾಂಧವರ ಲೋಭವನ್ನು ಸಂಬಾ ಳಿಸ ಬಂದರೇ ಆತನು ಖುದ್ದ ತನ್ನ ಮಡದಿಯ ಕಡೆಗೆ ಮತ್ತು ತನ್ನ ಮಕ್ಕಳು-ಮರಿಗಳ ಕಡೆಗೆ ಮಮತೆಯ ದೃಷ್ಟಿಯಿಂದ ನೋಡಿಯಾನು. ಆತನಲ್ಲಿ ಸತ್ಯನಿಷ್ಠೆಯಾದರೂ ಅಷ್ಟೇ ತೀಕ್ಷ್ಣಸ್ವರೂಪದಲ್ಲಿರಬೇಕು; ಯಾಕಂ ದರೆ ನಡತೆಯೆಂಬುದೇ ಇಡೀ ಕುಟುಂಬದೊಳಗಿನ ಗುಣ-ತೇಜಗಳ ಮೂಲ ಸ್ಫುರಣದ ಕೇಂದ್ರಸ್ಥಾನವು! ಆತನು ಬುದ್ಧಿವಂತನಿರುವದಕ್ಕಿಂತಲೂ ಕಾಟಕ ಸ್ವಭಾವದವನೂ ಶ್ರಮಜೀವಿ-ವೃತ್ತಿಯವನೂ ಇರುವದೇ ಹೆಚ್ಚು ಶ್ರೇಯಸ್ಕರ ವು. ಬರಿಯ ಬುದ್ಧಿಗೆ ಲೋಕದಲ್ಲಿ ಕೌತುಕದ ಹೊರತು ಹೆಚ್ಚು ಬೆಲೆ ಯಿರುವದಿಲ್ಲ; ಮತ್ತು ಪ್ರೋತ್ಸಾಹನದ ಹೊರತು ಬೇರೆ ಪ್ರತಿಫಲವೂ ದೊರಕುವದಿಲ್ಲ. ಲೋಕದೊಳಗೆ ಇದುವರೆಗೆ ಯಾವ ಸಣ್ಣ-ದೊಡ್ಡ ಕಾರ್ಯವಂತರಾಗಿ ಹೋದರೋ, ಅವರೆಲ್ಲರು ಬುದ್ಧಿಯಿಂದ ಸಾಮಾನ್ಯರೇ!

ಆದರೆ ಶ್ರಮದಿಂದ ಅಸಾಮಾನ್ಯರಾಗಿದ್ದರೆಂಬುದು ಕಂಡು ಬಂದೀತು; ಮತ್ತು ಜಗತ್ತಿನೊಳಗಿನ ಕಾರ್ಯಕುಶಲತೆಯು ಯಶವು ಎಲ್ಲಿಯವರೆಗೆ ಪರಾಕ್ರಮದ ಜೋಳಿಗೆಯಲ್ಲಿ ಹೋಗಿ ಬೀಳುತ್ತಿರುವದೋ ಅದುವರೆಗೆ ನಿಷ್ಕ್ರಿಯನಾದ ಬುದ್ಧಿಮತ್ತೆಯದಷ್ಟು ಹೆಚ್ಚಳವಾದರೂ ಹೇಗಾಗಬೇಕು? ಉಪಜೀವಿಕೆ ನಡೆಸುವದಂತೂ ಜೀವನಕಲಹದ ಆದ್ಯ ಮತ್ತು ಕೊನೆಯ ಮಹತ್ವಾಕಾಂಕ್ಷೆಯು! ಮತ್ತು ಉಪಜೀವಿಕೆ ನಡೆಸುವದು ಕೂಡ ಯಾವನಲ್ಲಿ ಶಕ್ತಿಯಿಲ್ಲವೋ ಅಂಥ ವರನನ್ನು ಯುವತಿಯರು ಎಂದಿಗೂ ವರಿಸಬಾರದು.

ಈ ಎಲ್ಲ ಗುಣಗಳ ಎಣಿಕೆ ಹಾಗು ಪರೀಕ್ಷೆ ಮಾಡುವ ಉದ್ದೇಶವಿಷ್ಟೇ, ಉಭಯ ಪತಿಪತ್ನಿಯರ ಸ್ವಭಾವಗಳು ಜೊಬ್ಬಾಟವಾಗದಂತೆ ಕೂಡಿಹೋಗಬೇಕೆಂದು. ಕುಮಾರಿಕೆಯ ಸ್ವಂತದ ಧ್ಯೇಯವಾವುದೋ ಆ ಧ್ಯೇಯದ ದೃಷ್ಟಿಯಿಂದ ಹೆಚ್ಚು ಹೆಚ್ಚಾಗಿ ಸಹಾಯ ಮಾಡುವ ಸಂಗಡಿಗನಾರೆಂಬದನ್ನು ಮನಸ್ಸಿನಿಂದ ನಿರ್ಧರಿಸಿ ಆದರಂತೆ ವರನನ್ನಾರಿಸಬೇಕು. ಧ್ಯೇಯವು ಒಂದಾದರೆ ವರಪರೀಕ್ಷೆಯ ಕಾರಣವೇ ಬೇರೆ. ಈ ಬಗೆಯ ವಿವಾಹವಾದರೆ ಆಕೆಯ ಆ ಸಂಸಾರದ ಫಜೀತಿಯನ್ನು ನೋಡಲಿಕ್ಕೇ ಬೇಡ! ನಮ್ಮ ದೇಶದಲ್ಲಿ ಬೇಗನೆ ವರ ಪರೀಕ್ಷೆಯ ಹಕ್ಕು ಕುಮಾರಿಕೆಯರಿಗೆ ದೊರಕತಕ್ಕದ್ದಿದೆ. ಯಾವ ಕುಮಾರಿಕೆಯರಿಗೆ ಇಂದಿಗೆ ಅದು ಅಲ್ಪಸ್ವಲ್ಪ ದೊರೆತಿದೆಯೋ, ಅವರು ಆ ಹಕ್ಕಿನ ಉಪಯೋಗವನ್ನು ಎಷ್ಟು ಮುಂಜಾಗ್ರತೆಯಿಂದ ಮಾಡಿಕೊಳ್ಳಬೇಕೆಂಬುದೇ ಮೇಲಿನ ವಿವೇಚನದಲ್ಲಿ ಕಂಡುಬಂದೀತು. ನಾನು ಯಾವ ಗಂಡನೊಡನೆ ಲಗ್ನವಾಗಬೇಕು? ಎಂಬ ಅಸ್ಫುಟ ಪ್ರಶ್ನೆಯು ಕುಮಾರಿಕೆಯರ ಮನಸ್ಸಿನಲ್ಲಿ ಸದಾ ಇಣುಕುತ್ತಿರುತ್ತದೆ; ಮತ್ತು ಅದರ ಉತ್ತರವನ್ನು ಅವರೇನು ಕೊಡಬೇಕು? ಮೇಲೆ ವಿವರಿಸಿರುವದನ್ನು ಚೆನ್ನಾಗಿ ಯೋಚಿಸ ನೋಡಿ ಯೋಗ್ಯವೆನಿಸಿದ್ದನ್ನೇ ಪ್ರತಿಯೊಬ್ಬ ಕುಮಾರಿಕೆಯು ನಿರ್ಧರಿಸಿಕೊಂಡರೆ, ಅದು ಅವಳ ಮಟ್ಟಿಗಿನ ತಕ್ಕ ಉತ್ತರವಾದೀತು.



# ಯಾವ ವಧುವನ್ನು ವರಿಸಬೇಕು? :: ೧೨

ಪ್ರತಿಯೊಬ್ಬ ಅವಿವಾಹಿತ ಯುವಕನಿಗೆ 'ನಾನು ಯಾವ ವಧುವನ್ನು ವರಿಸಬೇಕು?' ಎಂಬ ಸಮಸ್ಯೆಯು ಒಮ್ಮೆಯಲ್ಲೊಮ್ಮೆ ಉಂಟಾಗದಿರದು. ಯಾವಳೊಬ್ಬ ಹುಡುಗಿಯನ್ನು ಮೊದಲು ನೋಡಿದ್ದರೂ ಕೂಡ ಅವಶ್ಯವಾದಂಥ ಆಣೆ-ಚೂರಿಗಳನ್ನು ಮಾಡಲಿಕ್ಕೆ ಹಚ್ಚುವ ಕುರುಡು ಪ್ರೇಮದ ಮುಚ್ಚು ಕಣ್ಣಿಗೆ ಉಂಟಾಗುವ ಮೊದಲು ಆ ತರುಣನು ಇದೇ ಪ್ರಶ್ನೆಯನ್ನು ಸ್ವಂತಕ್ಕೆ ಕೇಳಿಕೊಳ್ಳುತ್ತ, 'ಇವಳೊಡನೆ ನಾನು ಲಗ್ನವಾಗಬೇಕೇ?' ಎಂದು ತಲೆತುರಿಸಿಕೊಳ್ಳುವನು. ಜನ್ಮದ ಜೊತೆಗಾರ್ತಿಯಾಗಲಿಕ್ಕೆ ಇವಳು ಯೋಗ್ಯಳಾಗಿರುವಳೇ? ಎಂದು ಆತನು ಮತ್ತೆ ಮತ್ತೆ ತನ್ನನ್ನು ತಾನೇ ಪ್ರಶ್ನಿಸುವನು.

ಇನ್ನು ಯಾವನಿಗೆ ಯಾವ ವಧುವಿನ ಭೆಟ್ಟಿಯು ಎಂದೂ ಆಗಿರುವದಿಲ್ಲವೋ ಅಂಥವನ ಮನಸ್ಸಿನಲ್ಲಂತೂ ಈ ಪ್ರಶ್ನೆಯು ಒಂದೇಸಮನೆ ನಾಚು ನಡೆಸಿರುತ್ತದೆ ನಾಚು! ಬಾಲವಿವಾಹದ ಕಾಲಕ್ಕೆ ಈ ಸಮಸ್ಯೆಯನ್ನು ಅವರ ಪಾಲಕರೇ ಅವರಿಗಾಗಿ ಬಿಡಿಸುತ್ತಿದ್ದರು. ಪಾಲಕರ ದೃಷ್ಟಿಯು ಕೌಟುಂಬಿಕ ಸ್ವಾಸ್ಥ್ಯದ ಕಡೆಗೇ ಹೆಚ್ಚು ಒಲಿದಿರುತ್ತಿತ್ತು. ಇಂದಿಗಾದರೂ ಪಾಲಕರು ಈ ಬಾಬಿನಲ್ಲಿ ಆತನಿಗೆ ನೆರವಾಗಲಿಕ್ಕೆ ಉತ್ಸುಕರಾಗಿರುತ್ತಾರೆ; ಆದರೆ ಅವರ ಸಲಹೆಯ ಮೇಲೆ ಹಾಗು ನಿರ್ಣಯದ ಮೇಲೆ ಆ ಸಮಸ್ಯೆಯನ್ನೊಪ್ಪಿಸಲಿಕ್ಕೆ ಇಂದಿನ ತರುಣನಿಗೆ ಧೈರ್ಯವಾಗುವದಿಲ್ಲ. ಪಾಲಕರೆಂಬುವರು ಇಡಿ ಕುಟುಂಬದಲ್ಲಿ ಹೊಸದಾಗಿ ಬಂದು ಸೇರುವ ಘಟಕ ಎಂಬ ದೃಷ್ಟಿಯಿಂದ ವಧುವನ್ನು ಪರೀಕ್ಷಿಸುತ್ತಿದ್ದರೆ. ತರುಣನಿಗೆ ಸ್ವಂತದ ವೈಯಕ್ತಿಕ ಆಕಾಂಕ್ಷೆಗಳನ್ನು ಪೂರೈಸುವ ಜೊತೆಗಾರ್ತಿ ಮಾತ್ರ ಬೇಕಿರುತ್ತಾಳೆ. ಸದ್ಯಕ್ಕೆ ತರುಣ-ವೃದ್ಧರೊಳಗಿನ ಈ ದೃಷ್ಟಿಭೇದವನ್ನು ಪರಸ್ಪರರು ಚೆನ್ನಾಗಿ ಗುರ್ತಿಸಿರುವಂತೆ ಕಾಣುತ್ತದೆ. ಯಾಕಂದರೆ ಒಬ್ಬನು ಇನ್ನೊಬ್ಬನ ನಿರ್ಧಾರಕ್ಕೆ ಅಡ್ಡಿಮಾಡುವದಿಲ್ಲ; ಮತ್ತು ಇನ್ನೊಬ್ಬನು ಮೊದಲಿನವನ ಅಭಿಪ್ರಾಯವನ್ನು ಹೆಚ್ಚಾಗಿ ಅವಲಂಬಿಸಿಯೇ ಇರುವದಿಲ್ಲ.

ಸಂಪೂರ್ಣ ಪ್ರೀತಿವಿವಾಹದ ಪೂರ್ವಸಿದ್ಧತೆಯಲ್ಲಿ ತರುಣರಿಗೆ ತಮ್ಮ ಭಾವೀ ಪತ್ನಿಯ, ಆಕೆಯ ಸ್ವಭಾವದ ಪೂರ್ಣ ಪರಿಚಯಮಾಡಿಕೊಳ್ಳಲಿಕ್ಕೆ ಸಾಕಷ್ಟು ಅವಕಾಶವು ಸದ್ಯಕ್ಕೆ ಪ್ರಚಲಿತವಾಗಿರುವ ಪ್ರೌಢವಿವಾಹಗಳಲ್ಲಿ ದೊರಕುವದಿಲ್ಲ. ಪ್ರೌಢವಿವಾಹಕ್ಕೆ ಪ್ರೀತಿವಿವಾಹದಲ್ಲಿನ ಅವಶ್ಯವಾದಂಥ

ಮಾಕ್ಕಾಡವನ್ನು ತೋರಿಸದ ಹೊರತು ಅದು ಅಷ್ಟೊಂದು ಯಶಸ್ವಿಯೂ ಆಗಲಾರದು. ಪ್ರೀತಿವಿವಾಹವೇನು ಇಲ್ಲವೆ ಪ್ರೌಢವಿವಾಹವೇನು ಇಬ್ಬಗೆಯಲ್ಲೂ ವಧುವರರು ತಮ್ಮ ಇಚ್ಛಾನಿಚ್ಛೆ, ಆಕಾಂಕ್ಷೆ ಮತ್ತು ಹೊಣೆಗಾರಿಕೆ ಇವುಗಳನ್ನು ತಿಳಿಯಲಿಕ್ಕೆ ಸಮರ್ಥರಾಗಿರುತ್ತಾರೆ ಮುಖ್ಯ ಹೇತುವು ಎರಡು ದೇಹಗಳ, ಎರಡು ಜೀವಗಳ ಏಕಜೀವವಾಗುವದೇ ಆಗಿದೆ. ಆಚಾರ-ವಿಚಾರ, ಆಕಾಂಕ್ಷೆ, ಧ್ಯೇಯ, ವರ್ಣ, ಶರೀರ ರಚನೆ, ಕಾಮುಕ ಆಕರ್ಷಣ ಮತ್ತು ವೈಷಯಿಕ ತೃಪ್ತಿ ಈ ಎಲ್ಲ ಬಾಬುಗಳಲ್ಲಿ ಉಭಯತರಿಗೆ ಎಷ್ಟು ಬೇಗನೆ ಹಾಗು ಸಂಪೂರ್ಣ ಸಮರಸವಾಗಲು ಬಂದೀತೋ ಅಷ್ಟು ಆ ಲಗ್ನವು ಯಶಸ್ವಿಯಾದೀತು.

ಈ ಧ್ಯೇಯವನ್ನು ಕಣ್ಮರೆ ಮಾಡಿ ಯಾವ ತರುಣನಾದರೂ ಲಗ್ನವಾಗುವುದೆಂದರೆ ದುಡ್ಡಿನ ಲೋಭಕ್ಕೆ ಇಲ್ಲವೆ ವಿಷಯಲೋಲುಪತೆಗೆ ಬಲಿಬಿದ್ದು ಸಂಸಾರದ ಯಮಯಾತನೆಗಳಲ್ಲಿ ಹಾರಿಕೊಳ್ಳುವುದೇ ಸರಿ. ಸದ್ಯದ ಬೇಕಾರಿಯ ದಿನಗಳಲ್ಲಿ ತರುಣನು ದುಡ್ಡಿಗಾಗಿ ಆಶಾಗ್ರಸ್ತನಾಗಿದ್ದಾನೆ; ಆದರೆ ಲಗ್ನವೆಂದರೇನೂ ದುಡ್ಡು ಗಳಿಸುವ ಸಾಧನವಾಗಿರುವದಿಲ್ಲ! ಯಾವುದನ್ನು ದುಡ್ಡಿನಿಂದ ಕೊಂಡುಕೊಳ್ಳಲಿಕ್ಕೆ ಬರಲಾರದೋ, ಮತ್ತು ಯಾವುದರ ಬೆಲೆಯನ್ನು ದುಡ್ಡಿನಿಂದ ಮಾಡಲಿಕ್ಕೆ ಬರುವದಿಲ್ಲವೋ ಅಂಥದೇ ವಿಲಕ್ಷಣವಾದ ವ್ಯಾಪಾರವು ಲಗ್ನದಲ್ಲಿ ಘಟಿಸುತ್ತಿರುವದರಿಂದ, ಅದರ ಬಂಡವಲದ ಮೇಲೆ ಬಡ ಹಾಗು ಧನಿಕ ಸ್ಥಿತಿಯೊಳಗಿನ ಜೊತೆಗಾರರು ಹೇಳಲಿಕ್ಕೆ ಬಾರದಂತಹ ಒಂದು ಬಗೆಯ ಸಂತೋಷವನ್ನು ಆಜನ್ಮಪರ್ಯಂತ ಪಡೆಯುತ್ತಿರಬೇಕು. ಸದ್ಯದಲ್ಲಿ ಲಗ್ನಕ್ಕುಂಟಾಗಿರುವ ಸಂತೆಯ ಸ್ವರೂಪವು ತರುಣರ ಹೀನ ಮನೋವೃತ್ತಿಯ ದ್ಯೋತಕವೂ ಅಪಯಶೀ ಲಗ್ನಗಳ ಕಾರಣವೂ ಆಗಿದೆ. ಬಡತನದ ಕಾಲಕ್ಕೆ ಹಾಗು ಚಿಕ್ಕಂದಿನಲ್ಲಿ ದುಡ್ಡಿನ ಮಹತ್ವವು ಅವಾಸ್ತವವೆಂದೆನಿಸುತ್ತದೆ; ಅಮೌಲ್ಯವಾದಂಥ ಹಲವು ಜೀವಾಳದ ಬಾಬುಗಳ ಕಡೆಗೆ ಆಗ ಮನುಷ್ಯನು ದುರ್ಲಕ್ಷ್ಯ ಮಾಡುತ್ತಿರುತ್ತಾನೆ. ದುಡ್ಡು ಇದು ಕ್ಷಣಿಕವೂ ಕೈಯೊಳಗಿಂದ ಜಾರಿಹೋಗತಕ್ಕದ್ದೂ ಆಗಿರುವದರಿಂದ, ಮನುಷ್ಯನು ಆ ಬಗ್ಗೆ ದುಃಖಿ-ಕಷ್ಟಿಯಾಗಬಾರದು; ಆದರೆ ಇಜ್ಜೋಡು ಜೊತೆಗಳ ನಿರಾಶೆಯೆಂಬುದು ಇಡೀ ಜನ್ಮದಲ್ಲಿ ಸಾಕಾಗಿ ಉಳಿಯುವಂತಹದು; ಒಂದೇಸವನೆ ಹೆಚ್ಚತಕ್ಕಂಥದು; ಇಡೀ ಆಯುಷ್ಯವನ್ನು ಗ್ರಾಸಿಸುವಂಥದು; ಮತ್ತು ಕೊನೆಗೆ

ನರಕವಾಸವೇ ವಿಹಿತವೆಂದೆನಿಸುವಂಥದಿರುತ್ತದೆ. ಅದಕ್ಕಾಗಿ ತರುಣರು ವಧು ಪರೀಕ್ಷೆಯ ಬಾಬಿನಲ್ಲಿ ದುಡ್ಡಿಗೆ ತೀರ ಗೌಣ್ಯತ್ವವನ್ನು ಕೊಡಬೇಕು. ಯಾರು ದುಡ್ಡಿನ ಲೋಭವನ್ನು ಮಾಡುವರೋ ಅವರು ಆಜನ್ಮ ಕಷ್ಟಕ್ಕೀಡಾದಾರು; ಆಯುಷ್ಯದ ತುಂಬ ಅಯಶಸ್ವಿಗಳಾದಾರು; ಹಾಗು ಯಾರು ಆ ಲೋಭವನ್ನು ಧರಿಸಲಾರರೋ ಅವರ ಮನೆಗಳು ಸದೈವ ಆನಂದದಿಂದ ಉಕ್ಕೇರಿರುವದು ಕಂಡುಬಂದೀತು.

ತರುಣನಲ್ಲಿ ಮಡದಿಯಳ ಸಂಬಂಧದ ಅಪೇಕ್ಷೆಯು ಮಿತ್ರತ್ವದ ಇಲ್ಲವೆ ಸಂಗಡಿಗರದಿರಬೇಕು. ಅವಳು ಗಂಡನ ಕೇವಲ ತೊತ್ತಿನಂತಿರುವ ಸ್ಥಿತಿಯು ಕೆಲವು ಕಡೆಗೆ ಕಂಡರೂ ಅದು ಧ್ಯೇಯಾತ್ಮಕವಲ್ಲೆಂಬದು ಖಂಡಿತವು. ಗಂಡಸರು ನಮ್ಮನ್ನು ದಾಸಿ-ತೊತ್ತೆಂದು ತಿಳಿಯುತ್ತಾರೆಂದು ತಿಳಿದು ಅವರ ಮೇಲೆ ದಾಳಿಯಿಕ್ಕಲಿರುವ ವಿದುಷಿಯರಾದರೂ ಒಪ್ಪಬೇಕಾಗುವುದೇನಂದರೆ, ಯಾವ ಸ್ತ್ರೀಯು ಎಲ್ಲಿ ತೊತ್ತಿನ ಕೆಲಸ ಮಾಡುತ್ತಿರುವಳೋ, ಆ ಮನೆಯಾದರೂ ಆಕೆಯ ಸ್ವತ್ತಿನದಷ್ಟೇ? ಆ ಕೆಲಸಗಳಾದರೂ ಆಕೆಯ ಸಂಸಾರದವೇ ಅಂದರೆ. ಅವಳ ಹಾಗು ಅವಳ ಗಂಡನ ಹಾಗು ಅವಳ ಹುಡುಗರು-ಹುಪ್ಪಡಿಯವೇ ಅಲ್ಲವೆ? ಮನೆಯಲ್ಲಿಯ ಕೆಲಸ-ಬೊಗಸೆ ಮಾಡುವುದರಿಂದೆಲ್ಲಾದರೂ ಮನೆಯ ಮಡದಿಯು ತೊತ್ತೆಂದಾಗುತ್ತಿದ್ದರೆ, ಮನೆಯವರಿಗಾಗಿ ಒಂದೇಸವನೆ ಕಷ್ಟಬಡುತ್ತಿರುವ ಗಂಡಸು ಆವೇ ಮನೆಯ ದಾಸನಾದಾನು; ಮತ್ತು ಕೊನೆಗೆ ದಾಸ ದಾಸಿಯರೆಂಬ ವಿಡಂಬನಾತ್ಮಕ ನಾತೆಯಿಂದ ಆ ಗಂಡ ಮತ್ತು ಹೆಂಡತಿಯರು ಸಮೀಪದ ಸಂಬಂಧದಿಂದ ಒಂದೇ ದರ್ಜೆಗೆ ಬಂದಾರು; ಆದರೆ ತರುಣನು ಹೆಂಡತಿಗ ಮನೆಗೆಲಸ ಮಾಡಲಿಕ್ಕೆ ಬರುತ್ತಿರಬೇಕೆಂಬ ಅಪೇಕ್ಷೆಯನ್ನು ಮಾತ್ರ ಧರಿಸುತ್ತಿರಬೇಕು. ನೂರಕ್ಕೆ ತೊಂಬತ್ತೊಂಬತ್ತು ಜೊತೆಗಳು ಮಧ್ಯಮ ಇಲ್ಲವೆ ಕೆಳ ಪರಿಸ್ಥಿತಿಯೊಳಗಿನವಿರುತ್ತವೆ; ಗಂಡನ ಪ್ರಾಪ್ತಿಯನ್ನೇ ಅವಲಂಬಿಸಿರುತ್ತವೆ. ಆದರಿಂದ ತಮ್ಮ ಭಾವೀ ಪತ್ನಿಯು ಸಂಸಾರ ಕಾರ್ಯದಲ್ಲಿ ಎಷ್ಟು ನಿಷ್ಣಾತ ಮತ್ತು ದಕ್ಷಳಿದ್ದಾಳೋ ಅಷ್ಟು ಮಿತವ್ಯಯ ಮತ್ತು ಸುವ್ಯವಸ್ಥೆಯು ಮನೆಯಲ್ಲಿದ್ದೀತು. ಯಾವ ಸ್ತ್ರೀಯರು ಗಂಡನಂತೆ ನೌಕರಿ ಮಾಡತಕ್ಕವರಿರುವರೋ ಅವರುಗಳ ಮಾತೇ ಬೇರೆ; ಆದರೆ ಅಂಥವರೂ ಕೂಡ ತಮ್ಮ ನೌಕರಿಯ ಅರ್ಧ ಮುಕ್ಕಾಲು ಸಂಬಳವನ್ನು ಮನೆಯೊಳಗಿನ ಕೆಲಸ ಮಾಡಲಿಕ್ಕೆಂದು ಇಟ್ಟಿರುವ ದಾಸ-ದಾಸಿಯರ ಸಲುವಾಗಿ ಖರ್ಚು

ಮಾಡಿದರೆ ಮತ್ತು ಆ ಆಳುಗಳ ಸಂಬಳ ನೀಗಿಸುವ ಸಲುವಾಗಿ ಕಷ್ಟಪಟ್ಟರೆ, ಅವರ ಆ ನೌಕರಿಯು ಮಹತ್ವವೇನುಳಿಯಿತು? ಇದಕ್ಕಿಂತ ಅವಳು ಸಂಸಾರದೊಳಗಿನ ಕೆಲಸಗಳನ್ನು ಮಾಡಿ ಹಾಗು ನೌಕರರ ಸಂಬಳವನ್ನುಳಿಸಿದರೆ ಮಾತ್ರ ಅದು ಹೆಚ್ಚು ಶ್ರೇಯಸ್ಕರವಲ್ಲವೆ? ಅದರಿಂದ ಅವಳಿಗೆ ವಿಶ್ರಾಂತಿ ದೊರೆತೀತು; ಅವಳ ಮಕ್ಕಳುಮರಿಗಳ ಅನಾಸ್ಥೆಯಾಗಲಿಕ್ಕಿಲ್ಲ ಗಳಿಸುವ ಸ್ತ್ರೀಯಳೊಡನೆ ಲಗ್ನವಾಗುವ ಮೊದಲು ಲಗ್ನವಾದನಂತರ ಅವಳು ನೌಕರಿ ಮಾಡಬೇಕೋ ಬಾರದೋ ಎಂಬ ಬಗ್ಗೆ ತರುಣರು ತಮ್ಮ ಪರಿಸ್ಥಿತಿಯ ಮೇಲಿಂದ ನಿರ್ಧರಿಸಿರಬೇಕು. ನೌಕರಿ ಬಿಟ್ಟು ಬಿಡುವುದನ್ನು ಅವಳು ಒಪ್ಪಿದರೂ ಅವಳಿಂದ ಅದು ಪಾಲಿಸಲಾದೀತೇ ಇಲ್ಲವೇ? ಅದನ್ನು ಅವಳು ಪಾಲಿಸಬಹುದೇ ಹೇಗೆ? ಇದರ ಖಾತ್ರಿಮಾಡಿಕೊಂಡಿರುವುದೇ ಒಳಿತು.

ಮನೆಯ ಸಂಸಾರದ ಕುಶಲತೆಯ ಮಾನದಿಂದ ಅವಾಂತರ ಕಲೆಗಳ ಕೌಶಲ್ಯವನ್ನು ಗೌಣವೆಂದೇ ತಿಳಿಯಬೇಕು. ಹಾಡುವದು-ಬಾರಿಸುವದು, ಆಡುವದು, ಈಜುವದು, ಉಪನ್ಯಾಸ ಕೊಡುವದು, ಓದುವದು, ನಡೆಯುವದು ಮುಂತಾದವುಗಳ ಕೌಶಲ್ಯವು ಅಷ್ಟರಮಟ್ಟಿಗೇ ಸುಖವೀಯತಕ್ಕುದು. ಕ್ಷಣಕಾಲವೇ ಮೋಹಕವಾಗಿ ತೋರತಕ್ಕುದು. ಇಂತಿಷ್ಟೇ ಅವುಗಳ ಬೆಲೆಯು! ಆದರೆ ಮನೆಯಲ್ಲಿ ಸ್ವಚ್ಛತೆ, ಸುವ್ಯವಸ್ಥೆ ಮತ್ತು ಮಿತವ್ಯಯಗಳಿದ್ದರೆ ಅಲ್ಲಿ ಸಮಾಧಾನವಿದ್ದೀತು. ಧನವಂತರು ಕಲೆಗಳ ಬಗ್ಗೆ ಕೌತುಕಗೊಂಡರೆ ಅದು ಕ್ಷಮವ್ಯವೆಂದೆನಿಸೀತು; ಆದರೆ ಬಡವನ ಕಲೋಪಾಸನೆಯು ಮೇರೆದಪ್ಪಿ ಹೋಗಹತ್ತಿದರೆ ಆತನ ದಾರಿದ್ರ್ಯ ಮತ್ತು ದುಃಖಗಳು ವಿಪರೀತ ಹೆಚ್ಚತೊಡಗುವವು ಖುದ್ದ ಸ್ತ್ರೀಯರ ದೃಷ್ಟಿಯಿಂದ ಯೋಚಿಸಿದರೂ ಅವರಿಗೆ ಕಲೆಗಳಿಗಿಂತ ದುಡ್ಡಿನ ಬೆಲೆಯೇ ಹೆಚ್ಚು ಅನಿಸುತ್ತಿರುತ್ತದೆ. ವಿದ್ವತ್ತೆ, ಬುದ್ಧಿವಂತಿಕೆ, ಸಮಾಜದೊಳಗಿನ ಕಾರ್ಯಕುಶಲತೆ ಮತ್ತು ಪ್ರತಿಷ್ಠೆ ಇವುಗಳ ಮೇಲೆ ಹಲವು ಪ್ರಸಂಗಗಳಲ್ಲಿ ಗಂಡಸು ತನ್ನ ಮರ್ಯಾದೆಯನ್ನು ಕಾಪಾಡಿಕೊಂಡು ಹೋಗುತ್ತಿರುತ್ತಾನೆ. ಆರ್ಥಿಕ ದೈನ್ಯದ ಬಗ್ಗೆ ಆತನು ಕೊರಗುವದನ್ನು ಬಿಟ್ಟುಬಿಡುತ್ತಾನೆ; ಆದರೆ ಹೆಂಗಸರ ಸಾಮಾಜಿಕ ಪ್ರತಿಷ್ಠೆಯು ಸಿರಿವಂತಿಕೆಯ ಒಂದೇ ಒಂದಾದ ಅಧಿಷ್ಠಾನದ ಮೇಲೆ ನಿಂತುಕೊಂಡಿರುವುದರಿಂದ, ಅವರ ದೃಷ್ಟಿಯು ಹಣದ ಮೇಲೆ ಮತ್ತು ಹಣದ ಸಹಾಯದಿಂದ ಕೊಂಡುಕೊಳ್ಳಬಹುದಾದ ಐಶ್ವರ್ಯದ ಮೇಲೆ ನೆಟ್ಟುಬಿಡು

ತ್ತಿದ್ದರೆ ಅದರಲ್ಲಿ ಆಶ್ಚರ್ಯವಿಲ್ಲ. ಇದಕ್ಕಾಗಿ ವಧುವಿಗೆ ಗಂಡನ ಆರ್ಥಿಕ
ಸ್ಥಿತಿಯು ಮನ್ನಣೆಯದೂ ಬುದ್ಧಿಗಳನ್ನೂ ಎಂದೆನಿಸುವದೇ? ಅಂಥವಳೇ ಆದ
ತನಗಿಂತ ಬಡವರ ಮನೆಯ ವಧುವನ್ನು ತರುವಾಗ ಆರಿಸಬೇಕೆಂಬ ತತ್ತ್ವ
ಜ್ಞಾನವು ಅತ್ಯಂತ ಜಾಣತನದ್ದೇ ಸರಿ. ಬಡವರ ಹುಡುಗಿಯು ಬಡವನ ಮನೆಯಲ್ಲಿ
ಬಹು ದೊಡ್ಡ ಧ್ಯೇಯವಾದದ ಮಟ್ಟಿಗೆ ಬಿದ್ದು ನಡೆಯುತ್ತಿದ್ದರೆ, ಆರ್ಥಿಕ
ಅಡಚಣಿಯ ಮೂಲಕ ಅವಳು ಮನಸ್ಸಿನಲ್ಲಿ ವಿಫಲಳೂ ಅಂತರಂಗದಲ್ಲಿ
ದುಃಖಿನಿಯೂ ಆದಾಳು. ಸ್ತ್ರೀಯರಿಗೆ ಪ್ರೇಮದೆದುರು ದುಡ್ಡಿನ ಬೆಲೆ
ಯಿರುವದಿಲ್ಲವೆಂದು ಬೇಕಾದವರು ಬೇಕಾದಷ್ಟು ಕಂಠಶೋಷ ಮಾಡಿ
ಕೊಂಡು ಹೇಳಿದರೂ ದ್ರವ್ಯಶಕ್ತಿಯ ಅಧಿಷ್ಠಾನದ ಮೇಲೆ ಎಲ್ಲಿಯವರೆಗೆ
ಇಡೀ ವಿಶ್ವದ ಸಂಸಾರವು ಹೂಡಲಾಗಿದೆಯೋ, ಅಲ್ಲಿವರೆಗೆ ಗಂಡಸೇನು
ಹೆಂಗಸೇನು ಇವರೆಲ್ಲರೂ ಆ ದ್ರವ್ಯಶಕ್ತಿಯ ಮುಂದೆ ನಮ್ರರಾಗಲೇ ಬೇಕು.
ದ್ರವ್ಯದ ಸ್ಥಿತಿಯಲ್ಲಿ ವಧುವರರು ಬೇಕಾದರೆ ಸಮಾನ ದರ್ಜೆಯಿದ್ದರೆ
ನಡೆದೀತು. ಹೆಚ್ಚು-ಕಡಿಮೆಯೇ ಇರಬೇಕಿದ್ದರೆ ವಧುಪಕ್ಷವು ಖಂಡಿತ
ವಾಗಿಯೂ ದ್ರವ್ಯಮಾನದಿಂದ ಕಡಿಮೆ ಸ್ಥಿತಿಯದಿರಬೇಕು. ರಾಜಕನ್ಯೆ
ಯಾದ ಶ್ರೀ ಸಾವಿತ್ರಿಯು ನಿಷ್ಕಾಂಚನನಾದ ಸತ್ಯವಾನನಲ್ಲಿ ಆನಂದ
ದಿಂದಿದ್ದಳೆಂಬುದು ನಿಜವೆಂದು ಮನ್ನಿಸಿದರೂ, ಮುನ್ನ ಸತ್ಯವಾನನ ಮನ
ಸ್ಸಿನ ಮೇಲೆ ಸಂಕೋಚದ ಭಾವವು ಅನೇಕಷ್ಟು ಹೆಚ್ಚಿರಬೇಕಲ್ಲವೆ? ಧನಿ
ಕನ ಮಗಳ ಬಡ ಗಂಡನು ಯಾವಾಗಲೂ ಅಂತರಂಗದಲ್ಲಿ ನೊಂದುಕೊಂಡವ
ನಂತಿರುತ್ತಾನೆ; ಅಂದರೆ ದ್ರವ್ಯವಿಷಯಕ ಸಮತೆಯ ಮೂಲಕ ಒಟ್ಟಿನಲ್ಲಿ
ಉಭಯತರ ಸ್ವಭಾವಸಮ್ಮಿಶ್ರಣದಲ್ಲಿ ವಿಪರೀತವಾದ ಅಡಚಣೆಯುಂಟಾಗು
ತ್ತದೆ; ಅವಶ್ಯವಾಗಿರುವ ಮನಬಿಚ್ಚಿನ ಹಾಗು ಸಲಿಕತೆಯ ವೃತ್ತಿಯು
ಅವರುಗಳಲ್ಲಿ ಉಂಟಾಗುವದಿಲ್ಲ.

ಆರ್ಥಿಕ ದರ್ಜೆಯ ಬಗ್ಗೆ ಮೇಲೆ ಏನು ವಿವರಿಸಿದೆಯೋ ಸಾಂಸ್ಕೃ
ತಿಕ ದರ್ಜೆಯ ಬಗ್ಗೆಯಾದರೂ ಕೇವಲ ಅದರಂತೆಯೇ ಅನ್ನಬೇಕಾಗುತ್ತದೆ.
ಉಭಯತರ ಸಾಂಸ್ಕೃತಿಕ ದರ್ಜೆಯು ಒಂದೇ ಮಟ್ಟಿನದಾಗಿದ್ದರೇ ಅವರು
ಗಳ ಸ್ವಭಾವವು ಒಂದಾದೀತು. ಅತ್ಯಂತ ಬುದ್ಧಿಶಾಲಿ ಪುರುಷನು ನಿರ್ಬುದ್ಧ
ಳಾದ ಸ್ತ್ರೀಯಲ್ಲಿ ಕೆಲ ಕಾಲ ಆಸಕ್ತನಾದಾನು; ಇಲ್ಲೆಂತಿಲ್ಲ; ಆದರೆ ಆ ಆಸಕ್ತಿ
ಯೊಳಗಿಂದ ಸಲಿಕತೆಯ ಜೋಡಿಗಾರ ದೊರೆತ ಭಾವ ಅನುಭವವು ಅವಶ್ಯಕ

ವಾಗಿರುತ್ತದೋ ಅದು ಆತನಲ್ಲುಂಟಾಗಲಿಕ್ಕಿಲ್ಲ. ವಿಷಯಾಸಕ್ತಿಯು ಸಣಿಸಿ ತೆಂದರೆ ಬುದ್ಧಿವಂತ ಮನುಷ್ಯನಿಗೂ 'ಎಲಲ! ಕೀರ ಕೀಳು ಬುದ್ಧಿಮತ್ತೆಯು ಹೆಂಗಸಿನೊಡನೆ ತನ್ನ ಜಿಂದಿಗಿಯು ಒಂದುಗೂಡಿತಲ್ಲವೆ?' ಎಂಬ ಹಳಹಳಿ ಯು ಅನಿಸದಿರಲಾರದು. ತನ್ನ ಹೆಂಡತಿಯು ತನಗಿಂತ ಬುದ್ಧಿಯಿಂದ ಹೀನ ಳಾಗಿರುವಳು, ಭಾವನೆಗಳಿಂದ ರುಕ್ಷಳಾಗಿರುವಳು, ಆಕಾಂಕ್ಷೆಗಳಿಂದ ನೀರಸ ಳಾಗಿರುವಳು, ವಿಚಾರಗಳಿಂದ ತ್ಯಾಜ್ಯಳಾಗಿರುವಳು ಮತ್ತು ಆಚಾರಗಳಿಂದ ಅಮಂಗಲಳಾಗಿರುವಳು ಹೀಗೆಂದು ಗಂಡಸಿನ ಖಾತ್ರಿಯಾಗಹತ್ತಿದರೆ, ಅವನು ಅವಳನ್ನು ಹೆಚ್ಚೆಂದರೆ ಉಪಭೋಗ್ಯವಸ್ತುವೆಂದು ಕ್ಷಣಹೊತ್ತು ಸ್ವೀಕರಿಸಬಹುದು. ತೊತ್ತೆಂದು ತಿಳಿದು ಅವಳಿಂದ ಕೆಲಸ ಮಾಡಿಸಿಕೊಂ ಡಾನು; ಆದರೆ ಪತ್ನಿಯ ಸರಿಕತೆಯ ಮಾನ-ಮನ್ನಣೆಯಿಂದ ಅವನು ಆಕೆ ಯನ್ನೆಂದೂ ನಡೆಸಿಕೊಳ್ಳಲಿಕ್ಕಿಲ್ಲ. ಈ ದೃಷ್ಟಿಯಿಂದ ಮಿಶ್ರ ವಿವಾಹಗಳು ಹೆಚ್ಚು ಆತಂಕದವೂ ಅಪಯಶದವೂ ಆಗಿಬಿಡುತ್ತವೆ. ಜಾತಿಸಂಸ್ಥೆಯೇ ಬೇಕಿಲ್ಲವೆಂದು ನಾನು ಎಲ್ಲರಿಗಿಂತ ಮೊದಲು ಹೇಳೇನು; ಆದರೆ ಆ ಜಾತಿಸಂಸ್ಥೆ ಯು ಅಸ್ತಿತ್ವದಲ್ಲಿರುವದರಿಂದ ಯಾವ ಭಿನ್ನ ಭಿನ್ನ ದರ್ಜೆಯ ಹಾಗು ಸಂಸ್ಕೃ ತಿಯ ಪಂಗಡಗಳುಂಟಾಗಿರುವವೋ ಅವುಗಳಲ್ಲಿ ಮಿಶ್ರವಿವಾಹಗಳನ್ನುಂಟು ಮಾಡುವದು ಪರಿಣಾಮದ ದೃಷ್ಟಿಯಿಂದಲೂ ಸಮರಸದ ದೃಷ್ಟಿಯಿಂದಲೂ ಅಪಯಶದ್ದೇ ಆಗುವುದು. ಈ ಸಾಂಸ್ಕೃತಿಕ ದರ್ಜೆಯನ್ನು ನಿರ್ಣಯಿಸುವಾಗ ವಧುವಿನ ತಂದೆ-ತಾಯಿಗಳ ಪರಂಪರೆಗಳ ಕಡೆಗೆ ನಿರೀಕ್ಷಿಸುವದು ಅತ್ಯಾವ ಶ್ಯಕವಾಗಿರುತ್ತದೆ. ಕೌಟುಂಬಿಕ ಇತಿಹಾಸವೇ ಅದರೊಳಗಿನ ವ್ಯಕ್ತಿಮಾತ್ರರ ಸಾಂಸ್ಕೃತಿಕ ದರ್ಜೆಯ ಉತ್ಕೃಷ್ಟವಾದ ನೆಲಗಟ್ಟನ್ನು ನಿರ್ಮಿಸುತ್ತಿರುತ್ತದೆ. ಗಳಿಸಿದ ವಿದ್ಯೆಯಿಂದ ಮತ್ತು ಸಂಪಾದಿಸಿದ ಆಚಾರದಿಂದ ಅವರ ಮೇಲೆ ಸಾಂಸ್ಕೃತಿಕ ದರ್ಜೆಯು ಕಟ್ಟಡವನ್ನು ಕಟ್ಟುತ್ತಿರುತ್ತದೆ. ನೆಲಗಟ್ಟಿದ್ದ ಮೇರೆಗೆ ಮೇಲಿನ ಕಟ್ಟಡವು ಸಿದ್ಧವಾದೀತು; ಹಾಗು ಬಾಳೀತು, ಎಂಬದು ಸ್ಪಷ್ಟವಿದೆ. ಈ ಪೂರ್ವಪರಂಪರೆಯ ಇತಿಹಾಸಕ್ಕೆ ಹಳೇ ಜನರು ಕುಲೀ ನತೆ ಎಂದು ತಿಳಿಯುತ್ತಾರೆ; ಮತ್ತು ಅಂಥ ಕುಲೀನರಿಗೆ ಮನೆತನಸ್ತರೆಂದು ಸಂಬೋಧಿಸುತ್ತಿರುತ್ತಾರೆ.

ಶರೀರ ರಚನೆಯಲ್ಲಾದರೂ ಶಕ್ಯವಾದಷ್ಟು ಅನುರೂಪತೆಯನ್ನು ಸಾಧಿ ಸುವದು ಆವಶ್ಯವಿರುತ್ತದೆ. ಎತ್ತರ-ಗಿಡ್ಡ, ದಪ್ಪ-ನೊರಗ ಇಂಥ ಜೊತೆಗಳು

ವಿಸದೃಶತೆಯು ಮೂಲಕ ನಿಜ ಸಂಸಾರ ಸುಖಕ್ಕೂ ವಿಷಯ ತೃಪ್ತಿಗೂ ಎರ ವಾಗುತ್ತಾರೆ. ವೈಷಯಿಕ ತೃಪ್ತಿಯೊಂದೇ ಸಂಸಾರ ಸುಖದ ಮುಖ್ಯ ಅಪೇಕ್ಷೆ ಯೆಂದು ಮನ್ನಿಸಿದರೆ ಹಾಗು ಲಗ್ನ ಸಂಸ್ಥೆಯು ಪ್ರಧಾನ ಹೇತುವೇ ಅದನ್ನು ತೃಪ್ತಿಗೊಳಿಸುವದು ಎಂದು ಗಣಿಸಿದರೆ, ತುಲ್ಯಬಲರಾದ ವಧುವರರು ಒಟ್ಟುಗೂಡುವದೊಂದು ಅನಿವಾರ್ಯವಾದ ಅತ್ಯಾವಶ್ಯಕ ಘಟನೆಯೇ ಆಗಿದೆ. ಗಿಡ್ಡ ಎತ್ತರ, ದಪ್ಪ, ನೊರಗ ಈ ಸ್ಥಿತಿಗಳು ವಯೋಮಾನದಿಂದ ಬದ ಲಿಸತಕ್ಕಂಥವುಗಳಿರುತ್ತವೆ. ಇಂದು ಚವಳೀಕಾಯಿಯಂತೆ ಕಾಣುವ ಸ್ತ್ರೀಯು ನಾಲ್ಕಾರು ವರ್ಷಗಳಲ್ಲಿ ಗಳಗೆಯಂತೆ ಹೇಯವಾದ ಸೌಂದರ್ಯ ವನ್ನು ಹೊಂದಲಾರಳೆಂಬ ಬಗ್ಗೆ ಖಾತ್ರಿಯೇನು? ಅಥವಾ ಇಂದಿಗೆ ಮಧ್ಯಮ ನಿಲುವಿಕೆಯವಳಾಗಿ ಕಾಣುವ ಹುಡುಗೆಯು ಬೇಗನೆ ತಾಳೇ ಮರದಂತೆ ಬೆಳೆದು ಗಂಡನಿಗಿಂತ ಟೊಣಪಳಾಗಲಿಕ್ಕೆಂದು ಹೇಗೆ ಹೇಳಲಾದೀತು? ಇವೆಲ್ಲ ವುಗಳ ಕಾಯಸ ಕಟ್ಟಲಿಕ್ಕೆ ವಧುವಿನ ಕುಟುಂಬದೊಳಗಿನ ಬೇರೆ ಜನರ ಶರೀರ ರಚನೆಯ ಕಡೆಗೆ ನಿರಕಿಸಿ ನೋಡಬೇಕಾಗುವುದು.

ವಧುವಿನ ಹಿರಿಯಕ್ಕಂದಿರು ಇಲ್ಲವೆ ತಾಯಿ ಇವರು ನುಗ್ಗೀಗಿಡದಂತೆ ಎತ್ತರ ಇಲ್ಲವೆ ಕುಂಬಳಕಾಯಿಯಂತೆ ಅಸಡ್ಡಾಳ ದಪ್ಪವಾಗಿದ್ದರೆ, ಆ ವಧು ವಿನ ಇಂದಿನ ಶರೀರದ ಸೌಂದರ್ಯವು ಯಾವ ಕಾಲಕ್ಕೆ ಮೋಸ ಪಡಿಸೀತೆಂಬ ನಿಯಮವಿರುವದಿಲ್ಲ! ವಧುವರರಿಬ್ಬರ ದೇಹಗಳು ತುಲ್ಯವಾದಂಥವುಗಳೇ ಇರಬೇಕು. ಸಶಕ್ತ-ಅಶಕ್ತ, ರೋಗಿ-ನಿರೋಗಿ ಮುಂತಾದ ಇಜ್ಜೋಡು ಜೊತೆಗಳು ಅಪಯಶ ಸಂಸಾರದ ಹಾಗು ಸಂಪುಷ್ಟಗೊಂಡ ಆಯುಷ್ಯದ ಪ್ರಕಟನೆಗಳನ್ನೇ ಪ್ರಕಟಿಸುತ್ತಿರುತ್ತವೆ. ಉಭಯತರಲ್ಲಿ ಯಾರೊಬ್ಬರು ರೋಗಿ ಇಲ್ಲವೆ ಊನ ಅವಯವದವರಾಗಿದ್ದರೆ, ಆ ಜೊತೆಯೊಳಗಿನ ಇನ್ನೊಬ್ಬ ರಿಗೆ ಆಜನ್ಮ ಪ್ರಾಣಾಂತಿಕ ಅವಹೇಲನೆಯನ್ನು ಸಹಿಸಬೇಕಾಗುತ್ತದೆ; ಹಾಗು ಖುದ್ದ ಆ ದುರ್ದೈವಿಯಾದ ರೋಗಿಯು ಇನ್ನೊಬ್ಬರ ಮನಸ್ಸಿನೊಳಗಿನ ಅಸಂತೋಷದಿಂದುಂಟಾಗಿದ್ದ ತಿರಸ್ಕಾರದ ಅವಹೇಲನೆಯನ್ನು ಆಜನ್ಮ ಪರ್ಯಂತ ಸಹಿಸಬೇಕಾಗುತ್ತದೆ! ಲಗ್ನವೆಂಬುದು ಪತಿಪತ್ನಿಯರ ವೈಯ್ಯ ಕ್ತಿಕ ಸುಖದ ಸಲುವಾಗೆಂದಿದ್ದರೂ ಅದರೊಳಗಿಂದ ಅನಪೇಕ್ಷಿತ ಮತ್ತು ಹಲವು ಸಾರೆ ಅನಿಶ್ಚಿತ ವಂಶವೃಕ್ಷದ ಹೊಸ ಮೊಳಿಕೆಗಳು ನಿಸರ್ಗದ ಮೂಲಕ ಒಡೆಯುತ್ತಿರುತ್ತವೆ. ತಮ್ಮ ಮಕ್ಕಳು-ಮರಿಗಳು ಆ ರೋಗಗಳಿಂದ,

ಶಾರೀರಿಕ ವ್ಯಂಗಗಳಿಂದ ಅಲಿಪ್ತವಾಗಿರಬೇಕೆಂದು ಅದಾರಿಗನಿಸುತ್ತಿರಲಿಕ್ಕಿಲ್ಲ? ಆನುವಂಶಿಕ ಸಂಸ್ಕಾರ, ರೋಗ ಮತ್ತು ಶರೀರ ಗುಣಧರ್ಮ ಇವು ಮುಂದಿನ ಪೀಳಿಗೆಯಲ್ಲಿ ಒಮ್ಮಿಲ್ಲೊಮ್ಮೆಯಾದರೂ ಪ್ರಕಟವಾಗೇ ಆಗುತ್ತವೆ, ಹಬ್ಬಿಯೇ ಹಬ್ಬುತ್ತವೆಂದು ಇಂದಿನ ಸುಪ್ರಜಾ ಜನನ ಶಾಸ್ತ್ರವು ಸಾರಿ ಸಾರಿ ಹೇಳುತ್ತದೆ. ಅದರಿಂದ ಪತ್ನಿಯಲ್ಲಿದ್ದಂಥ ರೋಗಗಳೂ, ವ್ಯಂಗಗಳೂ ತನ್ನ ಸಂತತಿಯಲ್ಲಿ ಖಂಡಿತವಾಗಿ ಬೇರೂರುವವೆಂಬನೊಂದು ಬಹು ದೊಡ್ಡ ಅಂಜಿಕೆಯೇ ಇರುತ್ತದೆ. ಅಂತೆಯೇ ವಧುವನ್ನು ಪರೀಕ್ಷಿಸುವಾಗ ಅವಳ ಎಲ್ಲ ಅವಗುಣಗಳ ಕಡೆಗೂ, ಶಾರೀರಿಕ ಮಾನಸಿಕ ವ್ಯಂಗಗಳ ಕಡೆಗೂ ರೋಗಾದಿಗಳ ಕಡೆಗೂ ಎಷ್ಟು ಸೂಕ್ಷ್ಮರೀತಿಯಿಂದ ಲಕ್ಷ್ಯಗೊಟ್ಟರೂ ಅಲ್ಪವೇ ಆದೀತು.

ಈ ವಿಷಯದಲ್ಲಿ ವಧುವಿನ ಕುಲದ ಇತಿಹಾಸವನ್ನು ಎಷ್ಟೆಷ್ಟು ಸೂಕ್ಷ್ಮವಾಗಿ ಪರೀಕ್ಷಿಸಬೇಕೋ ಅಷ್ಟಷ್ಟು ಸತ್ಯಶೋಧನ ಮಾಡಲಿಕ್ಕೆ ಹೆಚ್ಚೇ ಸಹಾಯವಾಗುತ್ತದೆ. ಕ್ಷಯ, ಉಪದಂಶ, ಕುತ್ಸಿತರೋಗ, ಹುಚ್ಚು, ಬುದ್ಧಿಭ್ರಂಶ, ಕಿವುಡು-ಮೂಕತನ, ಅಪಾಂಗ ಮುಂತಾದ ವ್ಯಂಗಗಳು ಒಂದೆರಡು ಪೀಳಿಗೆಯನ್ನು ತಪ್ಪಿಸಿಯೂ ಒಮ್ಮೆಲೆ ಪ್ರಕಟವಾಗುತ್ತಿರುತ್ತವೆ; ಹಾಗು ಹೆಚ್ಚುತ್ತವೆ. ಪ್ರತ್ಯಕ್ಷ ವಧುವಿನಲ್ಲಿ ಅದಾವ ರೋಗವೂ ಇರಲಿಕ್ಕಿಲ್ಲ; ಆದರೆ ಆಕೆಗೆ ತನ್ನ ತಾಯಿ-ತಂದೆಗಳಿಂದ ದೊರೆತ ದುರ್ಧರ ವಾರಸಾ ಹಕ್ಕು ಯಾರಿಗೂ ಗೊತ್ತಾಗದಂತೆ ಒಮ್ಮೆಲೆ ತನ್ನ ಸಂತತಿಯಲ್ಲಿ ಕದಾಚಿತ್ ವ್ಯಕ್ತವಾದೀತೆಂಬದನ್ನು ಪ್ರತಿಯೊಬ್ಬನೂ ಲಕ್ಷ್ಯದಲ್ಲಿಂಸಬೇಕು. ಅದಕ್ಕೋಸುಗ ವಧುವಿನ ಶರೀರ ಸೌಷ್ಟವದ ಬಗ್ಗೆ, ನಿರೋಗತ್ವದ ಬಗ್ಗೆ ಮತ್ತು ಆಚಾರ-ವಿಚಾರಗಳ ಬಗ್ಗೆ ಸಂಪೂರ್ಣ ಶೋಧ ಮಾಡಬೇಕು; ಹಾಗು ಅದಕ್ಕಾಗಿಯೇ ಅವಳ ಕುಲವೃತ್ತಾಂತವನ್ನು ಚೆನ್ನಾಗಿ ಪರೀಕ್ಷಿಸಬೇಕು.

ತರುಣನು ಅವಳ ವರ್ತನದ ವಿಷಯಕ್ಕೆ ಪೂರ್ಣ ಖಾತ್ರಿಮಾಡಿಕೊಳ್ಳಬೇಕು. ಹಿಂದುಸ್ತಾನದೊಳಗಿನ ಹುಡುಗೆಯರಿನ್ನೂ ಪವಿತ್ರರೂ ಮರ್ಯಾದೆವಂತರೂ ಆಗಿರುತ್ತಾರೆ. ಅವರ ನೀತಿಮತ್ತೆಯ ವಿಷಯಕ್ಕೆ ಕೊಂಚವೂ ಕರಕ ಹಚ್ಚುವ ಇಚ್ಛೆಯಿಲ್ಲ; ಆದರೆ ಅವರ ದೇಹದ ಹಾಗು ಮನಸ್ಸಿನ ಪಾವಿತ್ರ್ಯಗಳ ಬಗ್ಗೆ ಗಂಡನಿಗೆ ವಿಪರೀತ ಸಂದೇಹವಿರುತ್ತದೆ; ಪಾವಿತ್ರ್ಯವು ಬಹು ಮೂಲ್ಯವೆಂದೆನಿಸುತ್ತದೆ. ಕಾಲವು ಬದಲಿಸಿತು, ಪ್ರೌಢವಿವಾಹಗಳೇ ಏನು?-ಅತಿ

ಪ್ರೌಢವಿವಾಹಗಳೇ ಬಳಕೆಯುವಾದವು; ಆದರೂ ಮನಸ್ಸು ಮತ್ತು ಶರೀರ ಇವುಗಳ ವಿಷಯದ ಸಂಪೂರ್ಣ ಪಾವಿತ್ರ್ಯದ ಕಲ್ಪನೆಯು ಎಲ್ಲಿಯವರೆಗೆ ಬದಲಿಸಿರುವದಿಲ್ಲವೋ, ಅದುವರೆಗೆ ಪ್ರತಿಯೊಬ್ಬರೂ ಆ ನಾಜೂಕ ವಿಷಯದ ಬಗ್ಗೆ ಮೊದಲು ಖಾತ್ರಿ ಮಾಡಿಕೊಳ್ಳುವದೇ ಒಳಿತು. ಲಗ್ನವಾದ ಬಳಿಕ ನಿರಾಧಾರ ಹುಲುಬನ್ನು ನಂಬಿ, ಪತ್ನಿಯನ್ನು ಭ್ರಷ್ಟಳೆಂದು ತಿಳಿಯುವವರೂ ಅವಳನ್ನು ಬಿಟ್ಟು ಬಿಡುವವರೂ ಹಾಗು ಸ್ವಂತದ ಮತ್ತು ಅವಳ ಜನ್ಮದ ಕೇಡು ಬಗೆಯುವ ಹಿತ್ತಾಳಿ ಕಿವಿಯ, ಸಂದೇಹ ಪಿಶಾಚಿ ಬಡಕೊಂಡ ಗಂಡಂದಿರೇನು ಕಡಿಮೆ ಇರುವದಿಲ್ಲ. ಯಾವ ಸಂಗತಿಯು ಹಿಂದು ಮುಂದೆ ಎಂದಾದರೂ ವಿಪರೀತ ಚಿಂತೆಯನ್ನೂ ನಿರಂತರದ ವೈಮನಸ್ಸನ್ನೂ ಉಂಟುಮಾಡುವದೋ, ಆ ಸಂಗತಿಯ ಸಟಿ-ದಿಟಗಳನ್ನು ಮೊದಲೇ ನೋಡಿಕೊಳ್ಳುವದು ವಿಹಿತವು. ಸತ್ಯಕಥೆ ಮತ್ತು ಲೋಕಾಪವಾದ ಇವುಗಳೊಳಗಿನ ಭೇದವನ್ನು ತಿಳಿಯದಂತಹ ಸಂದೇಹಗ್ರಸ್ತ ಕುರಡುತನವು ಲಗ್ನಕ್ಕೆ ಮೊದಲು ಉಂಟಾಗಿರುವದಿಲ್ಲ.

ತಾನು ಯಾವ ವಧುವನ್ನು ವರಿಸಬೇಕೆಂಬುದೇ ತರುಣನಿಗುಂಟಾಗುವ ಕಠಿಣ ಸಮಸ್ಯೆಯು. ಈ ಸಮಸ್ಯೆಯ ಉತ್ತರಗಳನ್ನು ಪ್ರತಿಯೊಬ್ಬ ತರುಣನೂ ತನ್ನ ಸ್ಥಿತಿ-ಪರಿಸ್ಥಿತಿಗಳನ್ನನುಸರಿಸಿ ಬಿಡಿಸುತ್ತಿರುತ್ತಾನೆ; ಆದರೆ ಆ ಎಲ್ಲ ಪರಿಸ್ಥಿತಿಗಳ ಭಾರದ ಕೆಳಗೆ ಸಿಕ್ಕುಬಿದ್ದಿರುವ ತರುಣನು ಯಾವ ಯಾವ ಮೂಲಭೂತ ತತ್ವಗಳನ್ನು ತನ್ನ ಅಂತರಂಗದಲ್ಲಿ ಧರಿಸಿರುವುದವಶ್ಯವೋ ಅಂಥ ಈ ಅಲ್ಪ ತತ್ವಗಳನ್ನು ಮೇಲೆ ನಮೂದಿಸಿರುತ್ತೇವೆ. ಅವುಗಳನ್ನು ಧ್ಯಾನದಲ್ಲಿಟ್ಟರೆ 'ತಾನು ಯಾವ ವಧುವನ್ನು ಲಗ್ನವಾಗಬೇಕು?' ಎಂಬದರ ಉತ್ತರವು ಕೂಡಲೆ ತಿಳಿದೀತು.

---



ವೈವಾಹಿಕ ಜೀವನದಲ್ಲಿ ಸಹಕಾರ್ಯ ಮಾಡುವುದೊಂದು ಪ್ರಧಾನ ಹೇತುವು ಮನುಷ್ಯ ಮಾತ್ರರಲ್ಲಿ ತುಸ ಹುಟ್ಟು ಮತ್ತು ಹೆಚ್ಚಾಗಿ ವಿಶಿಷ್ಟ ಸಮಾಜ ರಚನೆಯ ಮೂಲಕ ಆ ಸಹಕಾರ್ಯದ ಭಾವನೆಯು ಉತ್ಪನ್ನ ವಾಗಿರುತ್ತದೆ. ಅಂದಬಳಿಕ ಪತಿ-ಪತ್ನಿ ಎಂಬ ಏಕಜೀವ ಸಂಬಂಧದಲ್ಲಿ ಮೈತ್ರಿಯ ಅಪೇಕ್ಷೆಯೆನಿಸುವದು ಸಾಹಜಿಕವೇ ಇದೆ. ಗೆಳೆಯರ ಸ್ವಭಾವ ಗಳು ಎಷ್ಟು ಹೆಚ್ಚು ಸರಿಹೊಂದುವವೋ, ಅವರ ಇಚ್ಛಾನಿಚ್ಛೆಗಳೆಷ್ಟು ಏಕ ದರ್ಜೆಯವೋ, ಬೇರೆಯವರ ಅವಗುಣಗಳನ್ನು ತನ್ನ ಹೊಟ್ಟೆಯಲ್ಲಿ ಹಾಕಿ ಕೊಳ್ಳುವ ಉಭಯತರ ಸ್ಥಿತಿಯು ಎಷ್ಟು ಹೆಚ್ಚೋ ಅಷ್ಟು ಅವರುಗಳ ಮೈ-ತ್ರಿಯು ದೃಢವಾಗುತ್ತಿರುತ್ತದೆ ಅಂದಮೇಲೆ ಪತಿ-ಪತ್ನಿಯರನ್ನು ಏಕಜೀವ ಗೊಳಿಸಲಿಕ್ಕೆ ಆ ಉಭಯತರಲ್ಲಿಯ ಮೈತ್ರಿಯು ಎಷ್ಟು ದಟ್ಟಾಗಿರಬೇಕು; ಹಾಗು ಅವರ ಸ್ವಭಾವದಲ್ಲಿ ಎಷ್ಟು ಸಂಪೂರ್ಣ ಏಕರೂಪತೆಯಿರಬೇಕು? ಎಂಬದರ ಊಹೆಯು ಸಹಜವಾಗಿಯೇ ಆದೀತು

ಪರಸ್ಪರಸ್ವಭಾವದೊಳಗಿನ ಸಂಪೂರ್ಣ ಸಾಮ್ಯವೂ ಒಬ್ಬರಿಗೊಬ್ಬರ ಬಗ್ಗೆ ಅನಿಸುವ ಅತ್ಯಂತ ಆದರವೂ ಯಾರಲ್ಲಿ ವಾಸಿಸಿರುವವೋ ಅಂಥ ಜೊತೆ ಗಳು ಅತ್ಯಲ್ಪವಾಗಿದ್ದರೂ ಅವು ಅಕ್ಷಯ್ಯ ಸುಖದಲ್ಲಿ ಲೋಲಾಡುತ್ತಿರುತ್ತವೆ. ಸ್ವಭಾವದೊಳಗಿನ ಏಕತ್ರತೆಯು ಎಲ್ಲಿ ಅಚ್ಚಳಿಯದೆ ಕೂಡಿರುವದೋ ಅಲ್ಲಿ ಪ್ರತ್ಯಕ್ಷ ಸ್ವರ್ಗೀಯ ಸುಖವು ಕೂಡ ಅಪೂರ್ಣವೆಂದೆನಿಸುವದು; ಆದರೆ ತದ್ವಿರುದ್ಧವಾಗಿ ಸ್ವಭಾವದೊಳಗಿನ ವಿವಾದವು ಮದ್ದಿನ ಬಾಣದಂತೆ ಒಂದೇ ಸವನೆ ಒಡೆದು, ಇನ್ನೊಬ್ಬನನ್ನು ಹುರುಪಳಿಸಿ ಬಿಡುತ್ತಿದ್ದರೆ ಆ ಸಂಸಾರವು ಯಮಯಾತನೆಯನ್ನೇ ವಿಹಿತವೆನಿಸೀತು. ವೈವಾಹಿಕ ಜೀವನದ ಯಶವು ಸ್ವಭಾವ ಮೀಲನದ ಅತ್ಯುಚ್ಚ ಉತ್ಕರ್ಷ ಬಿಂದುವಿನೊಡನೆ ಕೆಳಗೆ ಮೇಲೆ ಹಾಗು ಹೆಚ್ಚು ಕಡಿಮೆ ಆಗುತ್ತಿರುತ್ತದೆ.

ಸ್ತ್ರೀ-ಪುರುಷರು ಕಾರ್ಯಕ್ಷೇತ್ರದ ಹಂಚಿಕೆಯನ್ನೇ ಮಾಡಿರುವಂತೆ ತೋರುತ್ತದೆ. ಮನೆಯು ಸ್ತ್ರೀಯಳದು ಹಾಗು ಮನೆಯಹೊರಗಿನ ಲೋ ಕವು ಪುರುಷನ ಪರಾಕ್ರಮದ ಕ್ಷೇತ್ರವು. ಸದ್ಯಃ ಕಾಲದ ಸ್ತ್ರೀ-ಪುರುಷರು ಇದುವರೆಗೆ ಸಮಾಜವು ತಮ್ಮ ಮೇಲೆ ಹೇರಿರುವ ವಿಶೇಷ ಕಾರ್ಯಗಳನ್ನು

ಒತ್ತರದಿಂದ ಅದಲುಬದಲು ಮಾಡಹತ್ತಿರುತ್ತಾರೆ ಇಂಥ ವೇಳೆಯಲ್ಲಿ ಅವರ ಕಾರ್ಯಕ್ಷೇತ್ರಗಳು ತೀರ ಭಿನ್ನ ಭಿನ್ನ ಹಾಗು ಭಿನ್ನ ಭಿನ್ನ ಸ್ವರೂಪದವೆಂದು ಕಾಯಮವಾಗಿ ನಿರ್ಧರಿಸಲಿಕ್ಕೆ ಬರಲಿಕ್ಕಿಲ್ಲ ಅದಕ್ಕೆಂದು ಗಳಿಸುವ ಸ್ತ್ರೀಯು ಗಳಿಸದಿರುವ ಗಂಡನನ್ನು ಕೀಳು ಯೋಗ್ಯತೆಯವನೆಂದು ತಿಳಿಯುವುದು ಇಲ್ಲವೆ ಅಂಥ ಗಂಡನು ತನ್ನ ಸ್ತ್ರೀಯಳನ್ನು ಕೇವಲ ಮನೆಗೆಲಸದಲ್ಲಿ ತೊಡಗಿಸಿ ಬಿಡುವದು ಮತ್ತು ಅವಳ ಸ್ವತಂತ್ರವೃತ್ತಿಗೆ ನಿಯಂತ್ರಣವನ್ನುಂಟು ಮಾಡುವದು ತಪ್ಪಾಗದಿರದು. ಆರ್ಥಿಕ ಪರಿಸ್ಥಿತಿಯು ತೊಂದರೆಯ ಮೂಲಕ ಇಬ್ಬರಿಗೂ ದ್ರವ್ಯಾರ್ಜನೆ ಮಾಡಬೇಕಾಗುತ್ತದೆ, ಮತ್ತು ಹಾಗಾಯಿತೆಂದರೆ ಅವರೊಳಗೆ ಸ್ತ್ರೀಯು ದ್ರವ್ಯಾರ್ಜನದ ಹೊರತು ಗೃಹವ್ಯವಸ್ಥೆಯ ಹೊಣೆಯನ್ನು ಎಷ್ಟರಮಟ್ಟಿಗೆ ಹೊರಬೇಕು; ಹಾಗು ಗಂಡನು ಆ ಬಗ್ಗೆ ಎಷ್ಟು ವೈಲುಳಿಸಿಕೊಳ್ಳಬೇಕು ಎಂಬದೊಂದು ಸಮಸ್ಯೆಯೇ ಆಗಿದೆ

ನಿಸರ್ಗವು ಸ್ತ್ರೀಜಾತಿಗೆ ಮಾತೃಪದದ ತಪ್ಪಿಸಿಕೊಳ್ಳದಂತಹ ಯಾವ ಹೊಣೆಗಾರಿಕೆಯನ್ನು ಅಂಟಿಸಿರುವದೋ ಅದನ್ನು ಈಗ ಅದಲು-ಬದಲಿಸುವದು ಶಕ್ಯವಿರುವದಿಲ್ಲ. ಉಭಯತರ ಕಾರ್ಯಗಳು ಇಲ್ಲವೆ ಕಾರ್ಯಕ್ಷೇತ್ರಗಳು ಒಂದೇ ಆಗಿರಲಿ; ಇಲ್ಲವೆ ಮನೆ ಹಾಗು ಹೊರಗಿನ ಲೋಕ ಹೀಗೆ ಬೇರೆ ಬೇರೆ ಕಾರ್ಯಕ್ಷೇತ್ರಗಳಿರಲಿ ಅವುಗಳಲ್ಲಿ ಪರಸ್ಪರರ ಸಹಾನುಭೂತಿ ಮತ್ತು ಸಹಕಾರ್ಯವಿದ್ದರೇ ಜೀವನವು ಸುಖಾವಹವಾದೀತು. ಯಾವ ಕ್ಷೇತ್ರವು ಸ್ತ್ರೀಯಳದು ಇಲ್ಲವೆ ಪುರುಷನದೆಂದು ಕೇವಲ ವಿಂಗಡಿಸಲಾಗಿದೆಯೋ ಆ ಕ್ಷೇತ್ರದಲ್ಲಿಯೂ ಹೆಚ್ಚು-ಕಡಿಮೆ ಪ್ರಮಾಣದಲ್ಲಿ ಪ್ರತಿಯೊಬ್ಬರು ಸಮನಾಗಿ ದುಡಿಯುವದು ಅವಶ್ಯವಿರುತ್ತದೆ. ಹೆಂಡತಿಯು ಅಡಿಗೆ-ನೀರಿನಲ್ಲಿ ತೊಡಗಿದ್ದರೆ ಹುಡುಗರನ್ನು ಸಂಬಾಳಿಸುವ ಕೆಲಸವನ್ನು ಗಂಡಸು ಮಾಡಬೇಕು; ಮತ್ತು ಪ್ರಪಂಚಕ್ಕೆ ಬೇಕಾಗುವ ಸಾಮಾನುಗಳ ಸಂತೆಯನ್ನು ಸ್ತ್ರೀಯು ಮಾಡಬೇಕು. ಹೀಗೆ ಪರಸ್ಪರ ಅಪೇಕ್ಷೆಯು ಉಭಯತರದೂ ಇರುತ್ತದೆ; ಮತ್ತು ಹಾಗೆ ನಡೆಯುವದರಿಂದ ಇನ್ನೊಬ್ಬರಿಗೆ ಅಲ್ಪಸ್ವಲ್ಪ ನೆರವಾದಂತೆಯೂ ಆಗುತ್ತಿರುತ್ತದೆ.

ಗಂಡಸು ಮನೆಗೆ ಬಂದೊಡನೆಯೇ ತೀರ ಸೋಮಾರಿಯಂತೆ ಸ್ವಸ್ಥ ಕೂಡ್ರಬೇಕು ಇಲ್ಲವೆ ಸ್ತ್ರೀಯು ಹೊಸ್ತಿಲದ ಹೊರಗಿನ ಕ್ಷುಲ್ಲಕ ಕೆಲಸಕ್ಕೂ ಗಂಡನ ಮೋರೆಯ ಕಡೆಗೆ ನೋಡುತ್ತ-ಕೂಡ್ರಬೇಕು ಎಂಬ ವಸ್ತುಸ್ಥಿತಿಯು

ಉದ್ವೇಗಜನಕವೂ ತಳಮಳವನ್ನುಂಟು ಮಾಡತಕ್ಕುದೂ ಆಗುವದು. ಉಭಯತರೂ ಕೂಡಿ ಸಂಸಾರ ಸಾಗಿಸುವದು; ಹಾಗು ಸುಖ-ದುಃಖಗಳ ವಿಭಾಗಣೆಯು ಸಮಸಮವಾಗಿರಬೇಕಿದ್ದರೆ ಹೊಣೆಗಾರಿಕೆಗಳನ್ನು ಮಾತ್ರ ಕಟ್ಟುನಿಟ್ಟಾಗಿ ವಿಭಾಗಿಸಿಕೊಳ್ಳುವದು ಇದರಲ್ಲೇನು ಅರ್ಥವಿದೆ? ಸಹಕಾರ್ಯದಷ್ಟೇ ಸಹಾನುಭೂತಿಯೂ ಮನಸ್ಸುಗಳು ಏಕಜೀವವಾಗುವ ದೃಷ್ಟಿಯಿಂದ ಮಹತ್ವದ್ದಿರುತ್ತದೆ. ಮನೆಯಲ್ಲಿ ಅಥವಾ ಮನೆಯ ಹೊರಗೆ ಜೀವನಕಲಹದೊಳಗಿನ ಯಾವ ಪರಿಶ್ರಮಗಳನ್ನು ಉಭಯತರು ಮಾಡಬೇಕಾಗುತ್ತದೋ ಆಯಾ ಪರಿಶ್ರಮಗಳ ಪರಿಮಾರ್ಜನವು ಸಹಾನುಭೂತಿಯ ಬಾಯಿಮಾತಿನಿಂದ ಆಗುತ್ತಿರುತ್ತದೆ. ತೀರ ಕರ್ತವ್ಯವೆಂದು ಮಾಡಿದ ಕೆಲಸದಲ್ಲೂ ಸಹಾನುಭೂತಿಯ ಶಬ್ದಗಳು ದಣಿದವನಿಗೆ ಎಲ್ಲಕ್ಕೂ ಹೆಚ್ಚಿನದಾಗಿ ತೋರುವ ಕಾಣಿಕೆಯೇ ಸರಿ. ಅಂದ ಮೇಲೆ ಉಭಯತರ ಸಲುವಾಗೆಂದು ಮಾಡಿದ ಕಷ್ಟಗಳಲ್ಲಿ ಸಹಾನುಭೂತಿಯ ಶಬ್ದಗಳು ಎಷ್ಟು ಬೇಕುಬೇಕೆಂದೆನಿಸುತ್ತಿರಬಹುದೆಂಬದರ ಕಲ್ಪನೆಯನ್ನು ಪ್ರತಿಯೊಬ್ಬರೂ ಮಾಡತಕ್ಕುದು.

ಅಥಿತಿಸತ್ಕಾರವನ್ನು ಚೆನ್ನಾಗಿ ಮಾಡಿ ದಣಿದಂತಹ ಮಡದಿಗೆ ಇಲ್ಲವೆ ಬೇರೆ ಬೇರೆ ಪಕ್ವಾನ್ನಗಳನ್ನು ಸಿದ್ಧಗೊಳಿಸಿ ಕಂಗೆಟ್ಟ ಭಾರ್ಯೆಗೆ 'ಎಷ್ಟು ಚೆನ್ನಾಗಿ ವ್ಯವಸ್ಥೆ ಇಟ್ಟೆ!' ಅಥವಾ 'ಎಷ್ಟು ಚೆನ್ನಾಗಿ ಅಡಿಗೆ ಮಾಡಿದೆ!' ಇಂಥದೊಂದೇ ಹರಕುಮುರಕಾದ ಶಬ್ದವನ್ನು ಗಂಡನು ಅಂದರೂ ಅವಳ ಆಶ್ರಮಗಳು ಸಂಪೂರ್ಣ ಸಾರ್ಥಕವಾದಂತಾಗುವವು. ಸಾರ್ವಜನಿಕ ಕಾರ್ಯಕ್ಕಾಗಿ ಸ್ವಂತದ ಶರೀರವ ಮತ್ತು ಪರ್ಯಾಯದಿಂದ ತನ್ನ ಹೆಂಡಿರು-ಮಕ್ಕಳನ್ನು ತ್ಯಾಗಮಾಡಲಿಕ್ಕೆ ಸಿದ್ಧನಾದ ವೀರನಿಗೆ ಆತನ ಹೆಂಡತಿಯ ಸಹಾನುಭೂತಿಯ ನಿರೂಪವು ಎಷ್ಟು ಸ್ಫುರಣವನ್ನುಂಟು ಮಾಡುತ್ತಿರಬಹುದು? ಪತಿ-ಪತ್ನಿಯರು ಏಕಜೀವವಂತೂ ನಿಜವೆ; ಆದರೆ ಆ ಜೀವವು ಎರಡು ದೇಹಗಳಲ್ಲಿ ಕೂಡಿ ವರ್ತಿಸುತ್ತಿರುತ್ತದೆ; ಹಾಗು ಒಂದು ದೇಹಕ್ಕುಂಟಾಗುವ ಕಷ್ಟಗಳು ಇನ್ನೊಂದು ದೇಹದ ದೃಷ್ಟಿಗೆ ಬಿದ್ದರೇ ಅವು ಇನ್ನೊಂದಕ್ಕೆ ಖಾತ್ರಿಯಾಗತಕ್ಕವು; ಮತ್ತು ಇನ್ನೊಂದರ ಸಹಾನುಭೂತಿಯ ಶಬ್ದವೆಂದರೆ ಶ್ರಮದ ಖಾತ್ರಿಯಾದ ಕೃತಕೃತ್ಯದ ಒಪ್ಪಿಗೆಯೇ ಸರಿ.

ವಿವಾಹೋತ್ತರದ ಕಾಲವು ಹೇಗೆ ಹೇಗೆ ಕಳೆಯುತ್ತ ಹೋದೀತೋ ಹಾಗೆ ಹಾಗೆ ಪ್ರೇಮವು ಅಲ್ಪ ವಾಚಾಳಿಯಾಗಹತ್ತುತ್ತದೆ; ಹಾಗು

ಇನ್ನೊಂದು ವ್ಯಕ್ತಿಯು ಸೇವೆಯಲ್ಲಿ ಹೆಚ್ಚು ಹೆಚ್ಚು ದುಡಿಯತೊಡಗುತ್ತಾನೆ ಅನುನಯು ಕಾಲದೊಳಗಿನ ಪ್ರಾಣದ ಆಹುತಿ ಕೊಡುವ ಆಣೆ ಇಟ್ಟುಕೊಳ್ಳುವ, ಆಗಾಗ್ಗೆ ಉಕ್ಕೇರುವ ಪ್ರೇಮದ ಕುದಿ ಇವು ಮುಂದೆ ಇನ್ನೊಬ್ಬರ ದುಡಿಮೆ ನೋಡುತ್ತಿರುವಾಗ ಬಾಯಿಮಾತಿನ ಸಹಾನುಭೂತಿಯನ್ನು ಕೂಡ ವ್ಯಕ್ತಗೊಳಿಸದಿದ್ದರೆ ಅದರಂತಹ ದೈವ ದುರ್ವಿಲಾಸವೇ ಇನ್ನೊಂದಿಲ್ಲ. ಸಹಾನುಭೂತಿ ಎಂಬ ಗುಣವೇ ಮನುಷ್ಯನ ದೊಡ್ಡಿಸ್ತಿಕೆ ಹಾಗು ಕಳವಳವನ್ನು ತೋರಿಸುತ್ತದೆ. ಅದಿಲ್ಲದಿದ್ದರೂ ವಿಚಾರಿ(ತನವಾದರೂ ಅದರಲ್ಲಿ ಕಂಡು ಬರುತ್ತದೆ; ಮತ್ತು ಆ ಸಹಾನುಭೂತಿಯು ಕೊಡಕೊಳ್ಳಿಯಾದರೂ ಪರಸ್ಪರರಲ್ಲಿ ಆಗಬೇಕೆಂಬದು ಸ್ಪಷ್ಟವಿದೆ.

ಭಿನ್ನ ಭಿನ್ನ ಆಪತ್ತಿಗಳ ಒತ್ತುವಿಕೆಯಿಂದ ಬಗ್ಗಿದ ಸಂಸಾರೀ ವ್ಯಕ್ತಿಗೆ ಸಹಾನುಭೂತಿಯು ಆವಶ್ಯಕತೆಯು ಹೆಚ್ಚಾಗಿರುತ್ತದೆ. ನಿಜವಾದ ಹೇತುವನ್ನು ತಿಳಕೊಳ್ಳದೆ ಕೇವಲ ಕಾರ್ಯದ ಅಪಯಶದಿಂದ ದುಷ್ಟ ಹೇತುವನ್ನುಂಟಿಸಿ ಅವಹೇಲನೆಗೊಳಿಸಲಿಕ್ಕೆ ಹೊರ ಲೋಕವು ನಡಕಟ್ಟಿಕೊಂಡು ನಿಂತಿರುತ್ತದೆ ಇಂಥ ಕಾಲಕ್ಕೆ ಸನ್ನಿವರ್ತೀ ಮನುಷ್ಯನ ಒಂದೇ ಒಂದು ಸಹಾನುಭೂತಿಪರ ಶಬ್ದದ ಸಂಜೀವನಿಯು ಆ ನಿರಾಶಾಗ್ರಸ್ತ ಮನುಷ್ಯನಿಗೆ ಹೊಸ ಹುರುಪನ್ನುಂಟುಮಾಡುತ್ತದೆ. ನಿತ್ಯದ ಪ್ರಾಪಂಚಿಕ ಚಿಂತೆಗಳು ಅನೇಕ ವಿಧದವೂ ತೀವ್ರ ಸ್ವರೂಪದವೂ ಇರುತ್ತಿರುವದರಿಂದ ಉತ್ಸಾಹೀ ಮನುಷ್ಯನು ಕೂಡ ತನ್ನ ಜೀವಕ್ಕೆ ಬೇಜಾರುಗೊಳ್ಳುತ್ತಾನೆ. ಅಂಥ ಜೀವವನ್ನು ಉತ್ತೇಜನಪರ ಶಬ್ದಗಳೇ ಹುರುಪುಗೊಳಿಸುತ್ತವೆ ಪ್ರಾಪಂಚಿಕ ಚಿಂತೆ ಮತ್ತು ಕೊರತೆ ಇವುಗಳ ಮಳೆ-ಗಾಳಿಗಳು ಬಡಿಯುದಂತಹ ಚಾಟಿನ ಗೂಡಿನ ಕಡೆಗೆ ಪ್ರಾಣಿಮಾತ್ರರ ಮನಸ್ಸು ಹೆಚ್ಚು ಆಶೆಯಿಂದ ಧಾವಿಸುತ್ತಿರುತ್ತದೆ; ಹಾಗು ಆ ಗೂಡೆಂದರೆ ನಂಬಿಗೆಯು ಮನುಷ್ಯನ ಮನಸ್ಸೇ ಸರಿ. ಅದರ ಸುತ್ತಲೂ ಉತ್ತೇಜನಪರ ಶಬ್ದಗಳಿಂದ ಹಬ್ಬಿದ್ದ ಮಮತೆಯ ಉಣ್ಣೆಯು ಉಪಹಾಸದಿಂದ, ನಿರಾಶೆಯಿಂದ ತ್ರಸ್ತನಾದ ಆತನನ್ನು ಸಂರಕ್ಷಿಸಿ ಆತನ ಶ್ರಮವನ್ನು ನೀಗಿಸುತ್ತದೆ; ಆತನನ್ನು ಮತ್ತೆ ಕಾರ್ಯಪ್ರವೃತ್ತನನ್ನಾಗ ಮಾಡುತ್ತದೆ. ಅಂತೆಯೇ ಕಠಿಣಪ್ರಸಂಗಗಳಲ್ಲೂ ಹಾಗು ಬರಿಯ ದುಃಖದವೇ ಅಲ್ಲ, ನಿತ್ಯದ ಸಣ್ಣ-ಪುಟ್ಟ ಚಿಂತೆಗಳ ಇಲ್ಲವೆ ತೊಂದರೆಯ ಪ್ರಸಂಗಗಳಲ್ಲೂ ತ್ರಸ್ತವಾದ ಮನಸ್ಸಿಗೆ ಉತ್ತೇಜನವೀಯುವದು ಪತಿ-ಪತ್ನಿಗಳ ಕರ್ತವ್ಯವೇ ಆಗಿದೆ.

ಪತಿ-ಪತ್ನಿಯರ ಸ್ವಭಾವವು ಒಂದಾಗುವದಿದು ಹೆಚ್ಚಾಗಿ ಅವರ ಸಾಂಸ್ಕೃತಿಕ ದರ್ಜೆಯನ್ನವಲಂಬಿಸಿರುತ್ತದೆ. ಉಭಯತರು ಒಂದೇ ಸಾಂಸ್ಕೃತಿಕ ದರ್ಜೆಯ ಪಾತಳಿಯಲ್ಲಿ ನಿಂತುಕೊಂಡಿದ್ದರೆ ಅವರ ಮನಸ್ಸುಗಳ ಒಂದುಗೂಡುವಿಕೆಯು ಸಹಜವೂ ಹಲವು ಬಾಬುಗಳಲ್ಲಿ ತಿಳಿಯದಂತೆಯೂ ಆಗುತ್ತಿರುತ್ತದೆ; ಆದರೆ ಆ ಸಾಂಸ್ಕೃತಿಕ ದರ್ಜೆಯು ಸಹಜವಾಗಿ ಒಂದೇ ಸ್ವರೂಪದ್ದಿರುವದು ಬಹುಶಃ ಕಠಿಣವೇ ಆಗಿರುತ್ತದೆ. ಎಲ್ಲ ಜೊತೆಗಳು ಬಹುಮಟ್ಟಿಗೆ ಹೆಚ್ಚು-ಕಡಿಮೆ ಪ್ರಮಾಣದಲ್ಲಿ ಭಿನ್ನ ಭಿನ್ನ ಸಾಂಸ್ಕೃತಿಕ ದರ್ಜೆಯವರೇ ಆಗಿರುತ್ತಾರೆ; ಆದರೆ ಲಗ್ನವಾದ ಬಳಿಕ ಸಾಂಸ್ಕೃತಿಕ ದರ್ಜೆಯೊಳಗಿನ ಅಂತರವು ಕಡಿಮೆಯಾಗುತ್ತಾ ಹೋಗಬೇಕು ಅದರಂತೆ ಅದು ಒಂದೇ ಸವನೆ ಕಡಿಮೆಯಾಗುವ ಬಗ್ಗೆ ಉಭಯತರಿಂದಲೂ ಪ್ರಯತ್ನಗಳಾಗಬೇಕು. ಪತ್ನಿಯು ಅಶಿಕ್ಷಿತಳಾಗಿದ್ದರೆ ಅವಳನ್ನು ಶಿಕ್ಷಿತಳನ್ನಾಗ ಮಾಡದೆ ಹಾಗೆಯೇ ಬಿಟ್ಟುಬಿಡುವ ಹಾಗು ಕಗ್ಗಳೆಂದು ತಿಳಿದು ಹರಟೆಕೊಚ್ಚುವ ಸಲುವಾಗಿ ಸರಿಕ ಗೆಳೆಯರ ಇಲ್ಲವೆ ಯಾವಳೊಬ್ಬ ವಿದುಷಿಯ ಮನೆಗೆ ಎಡತಾಕುವ ಗಂಡಂದಿರು ಇಮ್ಮಡಿ ದೋಷಿಗಳಾಗುತ್ತಾರೆ. ಅವಳಿಗೆ ಕಲಿಸಿ ಶಿಕ್ಷಿತಳನ್ನಾಗಿ ಮಾಡದಿರುವ ಹೊಣೆಯನ್ನು ಸ್ವಂತ ನೀಗಿಸದ್ದೊಂದು ಅವರ ಅಪರಾಧವು; ಹಾಗು ಅದೊಂದೇ ಅಪರಾಧದ ಆಧಾರದಿಂದ ಅವಳನ್ನು ನಿರಂತರ ಕಗ್ಗಳೆಂದು ನಿರ್ಧರಿಸುವ ಮತ್ತು ವಿಚಾರವಿನಿಮಯಕ್ಕಾಗಿ ಅಯೋಗ್ಯಳೆಂದು ನಿಶ್ಚಯಿಸುವ ಎರಡನೇ ಅಪರಾಧವನ್ನೂ ಅವರು ಮಾಡುತ್ತಿರುತ್ತಾರೆ.

ಸಾಂಸ್ಕೃತಿಕ ದರ್ಜೆಯೆಂದೆಂದರೆ ಏನು? ಎಂಬದನ್ನು ನೋಡಿಹೋದರೆ ಇಂಗ್ಲಿಷ ಇಲ್ಲವೆ ವಿಶ್ವವಿದ್ಯಾಲಯ ಇವುಗಳ ಶಿಕ್ಷಣದ ಸಂಬಂಧವು ಸುಸಂಸ್ಕೃತೆಗೆ ಇದ್ದರೆ ಅದು ಅತಿ ಕ್ಷೀಣಸಂಬಂಧವಿರಬೇಕೆಂದೆನಿಸುತ್ತದೆ. ಹಳೇ ಪರಂಪರೆಯಲ್ಲಿನ ಮರ್ಯಾದಶೀಲ ಆಚಾರ, ಮನೆಯೊಳಗಿನ ಬೇರೆ ಜನರ ಸಂಗಡ ಹಾಗು ಮನೆಯ ಹೊರಗಿನ ಪಶು-ಪಕ್ಷಿ ಮಾನವ ಪ್ರಾಣಿಸಹಿತ ಇಡೀ ಲೋಕದೊಡನೆ ನಡೆಯುತ್ತಿರುವಾಗ ಮನಸ್ಸಿನ ಯಾವದೊಂದು ಉದಾರ ಮತ್ತು ದಯಾಲುತ್ವದ ಪ್ರವೃತ್ತಿಯಿರಿಸುವ ರೀತಿಯಿರುವದೋ ಅದು ಯಾವ ವಿಶ್ವವಿದ್ಯಾಲಯದ ಎಂಥ ಪುಸ್ತಕೀ ಶಿಕ್ಷಣವನ್ನೂ ಕುಂದುಗೊಳಿಸೀತು. ಮಾನವೀ ಜೀವಿತದ ಅಂತಿಮ ಧ್ಯೇಯ ಮತ್ತು ಭವಿಷ್ಯ ಇವುಗಳನ್ನು ಅರಿತು, ಸ್ವಂತದೊಡನೆ ಎಲ್ಲ ಜನರೂ ಸುಖದಿಂದಿರುವ ಬಗ್ಗೆ ಸಂಯಮದ ನೀತಿ-ನಿಯಮ

ಗಳನ್ನು ಪಾಲಿಸಿ, ಜೀವನಕ್ಕೆ ಬೇರೆ ಬೇರೆ ಕಲೆಗಳ ಯೋಗದಿಂದ ಆಕರ್ಷಕತೆ ಯನ್ನುಂಟು ಮಾಡುವದೇ ಎಲ್ಲ ಸಂಸ್ಕೃತಿಗಳ ಸಾರವು. ಇದನ್ನು ಯಾರು ತಿಳಿದಿರುವರೋ ಅವರು ಸಾಕ್ಷರರಿರಲಿ-ನಿರಕ್ಷರರಿರಲಿ ಅಂಥವರು ಸುಸಂಸ್ಕೃತರೇ ಸರಿ.

ಎಷ್ಟೋ ಮಂದಿ ಅಸಂತುಷ್ಟ ಗಂಡಂದಿರು ತಮ್ಮ ಪತ್ನಿಯ ಸಾಂಸ್ಕೃತಿಕ ದರ್ಜೆಯ ಬಗ್ಗೆ ಹೊಸ ಆಕ್ಷೇಪಣೆಯನ್ನು ಪ್ರಾರಂಭ ಮಾಡಿರುತ್ತಾರೆಂದೇ ಈ ಬಗ್ಗೆ ಹೆಚ್ಚಾಗಿ ವಿವರಿಸಬೇಕಾಯಿತು. ಅದರಿಂದ ಪರಸ್ಪರರ ಸಾಂಸ್ಕೃತಿಕ ದರ್ಜೆಯನ್ನು ತಮ್ಮ ತಮ್ಮೊಳಗೆ ಕೊಡಕೊಳ್ಳಿ ಮಾಡಿಕೊಂಡು, ಅವನ್ನು ಒಂದೇ ಪಾತಳಿಗೆ ತಂದಿರಿಸಬೇಕಾಗುತ್ತದೆ; ಹಾಗು ಈ ಸಂಗತಿಯು ಸಾಧ್ಯವಾಗಲಿಕ್ಕೆ ಉಭಯತರದೂ ಒಂದೇ ಧ್ಯೇಯವಿರುವದು ಅವಶ್ಯವಿರುತ್ತದೆ. ಉಭಯತರ ಧ್ಯೇಯವು ಉದಾತ್ತವಿರಬೇಕೆಂಬ ಆಗ್ರಹವಿರಕೂಡದು; ಮತ್ತು ಹಾಗನ್ನುವ ಅಧಿಕಾರವಾದರೂ ಆದಾರದು? ಕೇವಲ ಮೋಜಿನಲ್ಲೇ ದಿನಗಳೆಯುವದೆಂದೇ ಆ ಉಭಯತರ ಧ್ಯೇಯವಿರಲೊಲ್ಲದೇಕೆ; ಅಂತೂ ಅವರಿಬ್ಬರ ಧ್ಯೇಯವೂ ಒಂದೇ ಆಗಿರಬೇಕು. ಗಂಡನ ಧ್ಯೇಯವು ಮೋಜಿನದು ಹಾಗು ಹೆಂಡತಿಯ ಧ್ಯೇಯವು ಪರೋಪಕಾರದ್ದು ಹೀಗೆ ಧ್ಯೇಯ ಭಿನ್ನತೆಗಳಿಂದ ಜಗಳ ತಂಟೆಗಳಾಗಹತ್ತಿದರೆ ಪ್ರತಿಯೊಬ್ಬನೂ ಬೌದ್ಧಿಕ ಜೀವನವನ್ನು ಮರೆಮಾಜಿ ಸ್ವತಂತ್ರವನ್ನಾಗಿ ರಚಿಸಹತ್ತುತ್ತಾನೆ. ಅವರೊಳಗಿನ ಕೊಡಕೊಳ್ಳಿಯು ಕಟ್ಟಾಗುತ್ತದೆ; ಸಹಾನುಭೂತಿಯು ಇಲ್ಲದಂತಾಗುತ್ತದೆ; ಸ್ವಭಾವದೊಳಗಿನ ವಿಸಂಗತ್ವವು ಉತ್ತರದಿಂದ ಬೆಳೆಯಹತ್ತುತ್ತದೆ

ಉಭಯತರು ತಮ್ಮ ಇಚ್ಛಾನಿಚ್ಛೆಗಳಿಗೆ ಬೇಕಂತ ತುಸ ಹೆಚ್ಚು-ಕಡಿಮೆ ಮುಗದಾಣ ತೊಡಿಸಬೇಕು. ತನ್ನ ಗಂಡನಿಗೆ ಯಾವದು ರುಚಿಸುವದೋ ಅದು ಹೆಂಡತಿಗೆ ರುಚಿಸಲಿಕ್ಕೇ ಬೇಕೆಂಬ ಹಟವಿಲ್ಲ; ಆದರೆ ಆತನ ಇಚ್ಛೆಯು ಸಂಗತಿಯು ತನಗೆ ನಿರಂತರ ತಿರಸ್ಕಾರದ ಬಾಬೆಂದು ಮಾತ್ರ ಇಟ್ಟುಕೊಳ್ಳ ಕೂಡದು. ಹೆಂಡತಿಗೆ ಗಾಯನದ ನಾದವಿದ್ದರೆ ಹಾಗು ಗಂಡನಿಗೆ ಅದರಲ್ಲಿ ಏನೂ ತಿಳಿಯದಂತಿದ್ದರೂ ಅವಳ ಹಾಡಿಕೆಯ ಬಗ್ಗೆ ಆತನು ತಿರಸ್ಕಾರವನ್ನು ತೋರಿಸಲಾಗದು. ಉಭಯತರ ಹುಮ್ಮಸದ ಬಾಬುಗಳು ಸಂಸಾರಕ್ಕೆ ಖಂಡಿತ ಉಪಯುಕ್ತಗಳಾಗದ್ದರಿಂದ, ಅವು ಒಂದೇ ಬಗೆಯವಿರಬೇಕೆಂಬ ಹಟಹಿಡಿಯುವದಾದರೂ ವ್ಯರ್ಥವೇ ಸರಿ ಪ್ರತಿಯೊಬ್ಬರ ವ್ಯಾಸಂಗಗಳು

ಭಿನ್ನವಾಗಿಯೇ ಇರತಕ್ಕವು. ಪ್ರತಿಯೊಬ್ಬರು ಯಾವುದಕ್ಕೆ ಅಂಜಬೇಕೆಂದರೆ, ಇನ್ನೊಬ್ಬರ ಹುಮ್ಮಸದ ಬಗ್ಗೆ ಅನುದಾರ ಪ್ರವೃತ್ತಿಯನ್ನು ತೋರಿಸಬಾರದೆಂಬುದೇ ಅದು. ಅದಲ್ಲದೆ ಉತ್ತೇಜನಪರ ಶಬ್ದಗಳನ್ನು ನಡುನಡುವೆ ನುಡಿಯುತ್ತ ಹೋದರೆ, ಇನ್ನೊಂದು ವ್ಯಕ್ತಿಯಲ್ಲೂ ಬೇರೆ ಸಂವೇದನೆಯೇ ಉಂಟಾದೀತು. ತನ್ನ ಹುಮ್ಮಸದ ಅತಿರೇಕದಿಂದ ಅದು ಪರಾವೃತ್ತವಾದೀತು.

ಪತಿ ಮತ್ತು ಪತ್ನಿ ಇವರು ಸಮಾಜದಲ್ಲಿ ಎರಡು ದೇಹಗಳಿಂದ ಹಾಗು ಏಕಜೀವದಿಂದ ವರ್ತಿಸಬೇಕು; ಈ ಬಗೆಯ ಮಹತ್ವಾಕಾಂಕ್ಷೆಯು ಪ್ರತಿಯೊಂದು ಜೊತೆಯದಿದ್ದೇ ಇರುತ್ತದೆ. ಗಂಡನು ಉದಾರ, ಹೆಂಡತಿ ಜಿಪುಣೆ; ಅಥವಾ ಹೆಂಡತಿ ಪರೋಪಕಾರಿ, ಗಂಡನು ಸ್ವಾರ್ಥಿ. ಹೀಗೆ ವೃತ್ತಿಭೇದವು ಉಭಯತರಲ್ಲುಂಟಾಗಬೇಕು; ಇಲ್ಲವೆ ತಮ್ಮ ವಿಸದೃಶವೃತ್ತಿಯು ಪ್ರಸಿದ್ಧಿ ಇಲ್ಲವೆ ಚರ್ಚೆ ಹೊರಗಡೆಗಾಗಬೇಕು ಎಂಬದು ಸಾಂಸಾರಿಕರಿಗೆ ಎಂದಿಗೂ ರುಚಿಸದು. ಒಳ್ಳೇತನವನ್ನು ಉಭಯತರೂ ಹಂಚಿಕೊಳ್ಳಬೇಕು; ಹಾಗು ಕೆಡಕುತನವನ್ನು ಶಕ್ಯವಾದಷ್ಟು ಮುಚ್ಚಿಕೊಳ್ಳಬೇಕು; ಆದರೆ ಅದೆಷ್ಟೋ ಜನ ಮೂರ್ಖ ದಂಪತಿಗಳು ತಾವಾಗಿ ಈ 'ಮುಚ್ಚಿದ ಮುಟ್ಟಿಗೆ'ಯನ್ನು ತೆರೆಯುತ್ತಾರೆ; ಸ್ವಂತ ತಮ್ಮೊಬ್ಬರ ಆತ್ಮಪ್ರೌಢಿಮೆಗಾಗಿ ಇದ್ದದ್ದವೇ ಏಕೆ, ಇಲ್ಲದ-ಸಲ್ಲದ ಕಾಲ್ಪನಿಕ ದೋಷಗಳನ್ನೂ ಇನ್ನೊಂದು ವ್ಯಕ್ತಿಗೆ ಅಂಟಿಸುತ್ತಾರೆ. ಜಿಪುಣನೆಂದು ಗಂಡನ ನಿಂದೆಗೆಯ್ಯುವ ಹಾಗು ದುಷ್ಟಳೆಂದು ಮಡದಿಯ ನಿಂದೆ ಮಾಡುವ ದಂಪತಿಗಳೇನು ಕಡಿಮೆಯಿರುವದಿಲ್ಲ ಅವರು ತೀರ ಸ್ಪಷ್ಟಶಬ್ದಗಳಿಂದಲೇ ನಿಂದೆ ಮಾಡಬೇಕೆಂತಿಲ್ಲ; ಆದರೆ ಉಭಯತರ ಜೀವನದೊಳಗಿನ ಐಕ್ಯಕ್ಕೆ ಏತರಿಂದ ಬಿರಿ ಬಿಟ್ಟೀತೋ ಅಂಥ ಬುದ್ಧಿಭೇದದ ಪೆಟ್ಟುಗಳನ್ನು ವೈವಾಹಿಕ ಜೀವನದ ಕಾಜಿನ ಪಾತ್ರೆಯ ಮೇಲೆ ಅವರೊಳಗಿನ ಯಾರೊಬ್ಬರು ಎಷ್ಟೇ ಮೆಲ್ಲಗೆ ಹೊಡೆದರೂ ಆ ಒಡೆದ ಪಾತ್ರೆಯೊಳಗಿಂದ ವಿಸಂವಾದದ ಕೆಟ್ಟ ದನಿಯೇ ಹೊರಟೀತು. ಆ ಕರ್ಕಶ ದನಿಯನ್ನು ಕೇಳುತ್ತ ಯಸ್ತರೇ ಏಕೆ, ಸ್ವಂತ ಆ ದಂಪತಿಗಳೇ ಕಿವಿಯಲ್ಲಿ ಬೊಟ್ಟಿರಿಸಿಕೊಂಡು ಒಬ್ಬರನ್ನೊಬ್ಬರು ಬಿಟ್ಟು ದೂರ ಓಡಿಹೋದಾರು.

ಸಾಮಾಜಿಕ ಜೀವನವು ಮನುಷ್ಯರಿಗೆ ಹಲವು ಪ್ರಸಂಗಗಳಲ್ಲಿ ಜೀವನಸರ್ವಸ್ವವೆಂದೇ ಅನಿಸುತ್ತಿರುತ್ತದೆ. ಶರೀರ ಸುಖಕ್ಕಿಂತ ಕೀರ್ತಿ ಸುಖವೆ

ವಿಶೇಷ ಅಂತೆಯೇ ಕೀರ್ತಿಗಾಗಿ ಮನುಷ್ಯನು ಶಾರೀರಿಕ ಕಷ್ಟನಷ್ಟಗಳನ್ನು ತಾನಾಗಿ ಸಹಿಸುತ್ತಿರುತ್ತಾನೆ ಮಾನ-ಮನ್ನಣೆ, ಪ್ರಸಿದ್ಧಿ, ಕೀರ್ತಿ ಇವೆಲ್ಲ ಸಾಮಾಜಿಕ ಜೀವನದ ಧ್ಯೇಯಗಳು. ಇವು ತನಗೆ ದೊರಕಬಾರದೆಂದು ಯಾರಿಗಾದರೂ ಅನಿಸಬಹುದೇ? ಹೀಗಿದ್ದೂ ಒಬ್ಬನಿಗೆ ಸಾಮಾಜಿಕ ಜೀವನವು ಪ್ರಿಯವಾಗಿದ್ದರೆ ಇನ್ನೊಬ್ಬನಿಗೆ ಅದು ಅಪ್ರಿಯವು. ಇಂಥ ಪ್ರಕಾರಗಳು ಪತಿ-ಪತ್ನಿಯರಲ್ಲಿ ಹೆಚ್ಚಾಗಿ ನಿದರ್ಶನಕ್ಕೆ ಬರುತ್ತವೆ. ನಾಲ್ಕು ಜನ ಮಿತ್ರ ಸ್ನೇಹಿತರು ತನ್ನ ಕಡೆಗೆ ಬರುತ್ತಿರಬೇಕೆಂದು ಗಂಡನಿಗೆ ಅನಿಸುತ್ತಿದ್ದರೆ, ಹೆಂಡತಿಗೆ ತ್ರಯಸ್ಥರ ಬಗ್ಗೆ ಸಂಪೂರ್ಣ ತಿರಸ್ಕಾರವೆನಿಸುತ್ತಿರುತ್ತದೆ ಆಪ್ತ-ಬಂಧುಗಳ ಸಂಬಂಧದ ಮಾತಾದರೂ ಹೀಗೆಯೇ. ಹೆಂಡತಿಗೆ ತನ್ನ ತವರು ಮನೆಯ ಆಪ್ತ-ಬಂಧುಗಳು ಪ್ರಿಯರೆನಿಸಿದರೆ, ಗಂಡನಿಗೆ ತನ್ನ ಕಡೆಯ ಜನರೇ ಪ್ರಿಯರು. ಹೀಗೆ ಸಾಮಾಜಿಕ ಜೀವನದ ಒಮ್ಮತವಿಲ್ಲದ ವ್ಯವಹಾರ ನಡೆಯಹತ್ತಿತೆಂದರೆ, ಉಭಯತರ ಮಾನಪದೆಷ್ಟು ಉಳಿದೀತು? ಯಾವ ಬಗೆಯ ಸಾಮಾಜಿಕ ಜೀವನವು ಆ ಉಭಯತರಿಗೂ ಸೇರುತ್ತಿರುವದೋ, ಆ ಪ್ರಕಾರದ ಸಾಮಾಜಿಕ ಜೀವನದಲ್ಲಿ ಆ ಉಭಯತರೂ ಒಮ್ಮತದಿಂದ ಭಾಗ ವಹಿಸಿದರೇ ಅವರ ಮಾನವು ಉಳಿದೀತು. ಅವರ ಲೋಕದವರೆಲ್ಲರ ಬಗ್ಗೆ ತಿರಸ್ಕಾರ ತೋರಿಸಿದರೂ ಅಡ್ಡಿಯಿಲ್ಲ; ಆದರೆ ಮುಖ್ಯ ಮುದ್ದೆಯೆಂದರೆ ಉಭಯತರೂ ಏಕಜೀವರಾಗಿ ತಮ್ಮ ಧ್ಯೇಯದಂತೆ ನಡೆಯುತ್ತಿರುವದೇ ಹಿತಕರವು.

ಸ್ವಭಾವಗಳಲ್ಲಿ ಅಂತರವಿರುವದೂ ಅದು ದಿನದಿನಕ್ಕೆ ಹೆಚ್ಚುತ್ತ ಹೋಗುವದೂ ಇದು ಅನಿಷ್ಟವಂತೂ ನಿಜವೇ; ಆದರೆ ಕೆಲಕೆಲವು ಕೆಟ್ಟಚಾಳಿಗಳ ಮೂಲಕ ಈ ಅಂತರವು ಬೆಳೆಯುತ್ತಲೇ ಇರುತ್ತದೆ. ಹಟಮಾರಿತನದ ಮೂಲಕ ಬೇರೆಯವರ ಅಂಬೋಣವನ್ನು ಕೇಳಿಕೊಳ್ಳಬೇಕೆಂದೆನಿಸುವದಿಲ್ಲ. ತೀರ ಸಿಟ್ಟಿನ ಸ್ವಭಾವವಾದರೂ ಮನುಷ್ಯನ ಕಣ್ಣುಕಟ್ಟಿ ಕುರುಡನನ್ನಾಗಿ ಮಾಡುತ್ತದೆ; ಮತ್ತು ಆತನನ್ನು ನೆಟ್ಟಗೆ ಅಧಃಪತನದ ತೆಗ್ಗಿನಲ್ಲೇ ದೂಡಿಬಿಡುತ್ತದೆ. ಸಣ್ಣ-ಪುಟ್ಟ ಸಂಗತಿಗಳಲ್ಲಿ ಹೆಚ್ಚಾಗಿ ಸಂತಾಪ ಮಾಡಿಕೊಳ್ಳುವದಿದು ಗೃಹಶಾಂತಿಗೆ ವಿಘಾತಕವಂತೂ ಇದ್ದೇ ಇದೆಯಲ್ಲದೆ. ಮನಸ್ಸಿನ ಏಕಜೀವತೆಗೆ ಅತ್ಯಂತ ಘಾತುಕವೂ ಇಗುವದು. ತೀರ ಸಿಟ್ಟಿನ ಸ್ವಭಾವವು ಒಮ್ಮೊಮ್ಮೆ ಸಲ್ಲೀತು; ಆದರೆ ಕೆಣಕಿಸಿ ಕೆಣಕಿಸಿ ದುರುತ್ತರ ಕೊಡುವ ಚಾಳಿಯು ಹೆಚ್ಚು ರೇಗಿಗೆಬ್ಬಿಸುವಂಥದಿರುತ್ತದೆ. ಸಿಟ್ಟಿನ ಭರತಿ ಮತ್ತು ಓಹಟೆಗಳಾಗಿ

ಹೋದವು, ಮನಸ್ಸು ಸ್ವಚ್ಛವಾಯಿತು; ಅಂದರೆ ಅದರಲ್ಲೇನೂ ವಿಶೇಷವಿರುವದಿಲ್ಲ. ತದ್ವಿರುದ್ಧವಾಗಿ ಬೇರೆ ವ್ಯಕ್ತಿಯು ಸಿಟ್ಟಿನ ಸ್ಫೋಟಕ್ಕೆ ಸಿದ್ಧವಾಗಿರುತ್ತದೆ. ಶಮನದ ಉಪಾಯಗಳನ್ನು ಪರಿಪರಿಯಿಂದ ಕೈಕೊಳ್ಳುತ್ತದೆ; ಹಾಗು ಕೊನೆಗೆ ಸ್ವಭಾವದ ಕೂಡಿಕೆಗಾಗಿ ಎಂದೂ ಸಾಶಂಕವಾಗುವದಿಲ್ಲ; ಆದರೆ ಆ ದುರುತ್ತರ ಕೊಡುವ ಚಾಳಿಯು ಮಾತ್ರ ತಂಟೆಗಳಿರದೆ ತಿರಸ್ಕಾರವನ್ನುಂಟು ಮಾಡೀತು, ಅಹಿತವನ್ನು ಬಗೆಯುವ ವೈರವನ್ನುಂಟು ಮಾಡೀತು. ಆಗಾಗ್ಗೆ ಕೆಣಕಿಸಿ ಕೆಣಕಿಸಿ ಮಾತನಾಡುವದು ಕೃತಘ್ನತೆಯು ಅಂತಿಮ ಸ್ವರೂಪವೇ ಸರಿ. ಪತಿ ಮತ್ತು ಪತ್ನಿ ಉಭಯತರೂ ಒಂದೇ ಸಂಸಾರವನ್ನು ಸಾಗಿಸಲಿಕ್ಕೆ ಉದ್ಯುಕ್ತರಾಗಿರುತ್ತಾರೆ. ಒಂದೇ ಮನೆ ಹೂಡುವದಕ್ಕೆಂದು ಹಗಲಿರುಳೂ ಪ್ರಯತ್ನಿಸುತ್ತಿರುತ್ತಾರೆ. ಒಂದೇ ಸಾಮಾಜಿಕ ಮನ್ನಣೆ ಗಳಿಸುವಸಲುವಾಗಿ ಕಷ್ಟಪಡುತ್ತಿರುತ್ತಾರೆ. ಅವರೊಳಗಿನ ಒಂದು ವ್ಯಕ್ತಿಯು ಇನ್ನೊಂದಕ್ಕೆ ಅವಮಾನಪರವಾಗಿ ಚುಚ್ಚಿ ಚುಚ್ಚಿ ಅನ್ನುವುದೆಂದರೆ, ಇನ್ನೊಂದು ವ್ಯಕ್ತಿಯು ಕಷ್ಟನಷ್ಟಗಳ ಪರಿವೆಯು ತನಗಿಲ್ಲೆಂಬಂತಲ್ಲವೆ?

ಕೆಣಕಿಸಿ ಕೆಣಕಿಸಿ ಮಾತನಾಡುವ ಚಾಳಿಯು ಹೆಂಗಸರಿಗೆ ಹೆಚ್ಚಾಗಿರುತ್ತದೆ. ಆ ಬಗ್ಗೆ ಅವರಿಗೆ ದೋಷ ಕೊಟ್ಟರೆ ಅವರು 'ನಮ್ಮ ಹೆಂಗಸರ ಬಳಿಯಲ್ಲಿ ಎರಡೆಂದರೆ ಎರಡೇ ಶಸ್ತ್ರಗಳಿವೆ. ಮೊದಲನೇದು ಕಣ್ಣೀರು ಸುರಿಸುವದು; ಎರಡನೇದು ಹೀಗೆ ಕೆಣಕಿಸಿ ಅನ್ನುವುದು' ಎಂದೆಂದಾರು. ಅವುಗಳಲ್ಲಿ ಮೊದಲಿನದು ಕಾಲಾವಧಿಯಿಂದ ಹಾಗು ಅತಿ ಪರಿಚಯದಿಂದ ನಿರುಪಯುಕ್ತವಾಗಹತ್ತುತ್ತವೆ. ಅಂದಮೇಲೆ ಎರಡನೆಯದನ್ನು ಅವರೇಕೆ ಉಪಯೋಗಿಸಬಾರದು? ಎಷ್ಟೋ ಜನ ಗಂಡಸರಿಗೆ ಕೂಡ ಇತರರ ಎದುರು ತಮ್ಮ ಹೆಂಡತಿಯನ್ನುದ್ದೇಶಿಸಿ ಮರ್ಮಭೇದಕ ನುಡಿಗಳನ್ನು ನುಡಿಯುವ ಕೆಟ್ಟ ಚಾಳಿ ಇರುತ್ತದೆ; ಮತ್ತು ಎಷ್ಟೋ ಮಂದಿ ಅರೆಗಲಿತ ಹಾಗು ಹಳೇ ಪದ್ಧತಿಯ ಗಂಡಸರಿಗಂತೂ ತಮ್ಮ ಹೆಂಡತಿಯ ಹುಡುಗಾಟಿಕೆ ಅಥವಾ ಅವಹೇಲನೆಗಳನ್ನು ತ್ರಯಸ್ಥರ ಹಾಗು ಹುಡುಗರು-ಹುಪ್ಪಡಿಗಳ ಸಮಕ್ಷ ಮಾಡುವ ಹುಮ್ಮಸವು ಹೆಚ್ಚಾಗಿರುತ್ತದೆ ಖುದ್ದ ಹಾಗೆನ್ನುವವನಿಗೆ ಆನಂದವಾಗುತ್ತದೆಂದು ಮನ್ನಿಸಿದರೂ ಯಾರು ಆ ನುಡಿಗಳನ್ನು ಸಹಿಸಿಕೊಳ್ಳಬೇಕಾಗುತ್ತದೋ, ಅವರ ರಕ್ತಸುರಿಯುವ ಅಂತಃಕರಣದ ಕಡೆಗೆ ಅವನಿಗೆ ಕಣ್ಣುತೆರೆದು ನೋಡಬಂದರೆ, ಆತನ ಆ ದುಷ್ಟ ಆನಂದವು ಒಮ್ಮೆಲೆ ಲುಪ್ತವಾದೀತ್ತು.

ಸುಳ್ಳು ಹೇಳುವ ಚಾಳಿಯು ಗಂಡ ಹೆಂಡಂದಿರಲ್ಲಿ ಅಪನಂಬಿಗೆಯು ನ್ನುಂಟು ಮಾಡುತ್ತದೆ; ಮತ್ತು ಪತಿ-ಪತ್ನಿಯರು ಸಣ್ಣ ಪುಟ್ಟ ಮಾತಿನಿಂದ ಅತಿ ಮಹತ್ವದ ಸಂಗತಿಗಳ ವರೆಗೂ ಪರಸ್ಪರರಿಗೆ ತೀರ ಹೆಚ್ಚಾಗಿ ಸುಳ್ಳು ಹೇಳುತ್ತಿರುವದರಿಂದ ಆ ಸುಳ್ಳು ಹೇಳಿಕೆಗೆ ತಾಳ ಮೇಳಗಳೇನೂ ಉಳಿ ಯುವದಿಲ್ಲ. ಹುಡುಗರ ಖೋಡಿತನವನ್ನು ಮುಚ್ಚುವಸಲುವಾಗಿ, ಗಂಡನ ಇಚ್ಛೆಯ ವಿರುದ್ಧ ದಾನ-ಧರ್ಮ ಮಾಡುವಸಲುವಾಗಿ, ಸಣ್ಣ-ಪುಟ್ಟ ತಪ್ಪು ತಿದ್ದುವಸಲುವಾಗಿ ಹೆಂಗಸರು ಗಂಡಸರಿಗೆ ಸುಳ್ಳು ಹೇಳುತ್ತಿರುತ್ತಾರೆ; ಮತ್ತು ಗೆಳೆಯರಿಗೆ ನೆರವಾಗುವಸಲುವಾಗಿ, ಹೆಂಡತಿಯ ಹುಮ್ಮಸವನ್ನು ಅಲ್ಲಗಳೆ ಯುವಸಲುವಾಗಿ, ತಮ್ಮ ವ್ಯಸನ ಮತ್ತು ಕೈಸಡಲಿನ ಚಾಳಿಯನ್ನು ಬಚ್ಚಿ ಡುವ ಸಲುವಾಗಿ, ಮೊದಲನೇ ಹೆಂಡತಿಯ ಮಗನ ಸಂರಕ್ಷಣದ ಸಲುವಾಗಿ ಗಂಡಸರು ಹೆಂಡತಿಗೆ ಸದಾ ಸುಳ್ಳು ಹೇಳುತ್ತಿರುತ್ತಾರೆ. ಹೀಗೆ ಆ ಉಭಯ ಯತರ ಸುಳ್ಳು ಹೇಳಿಕೆಯು ತೀರ ಡಾಣಾಡಂಗುರ ಮತ್ತು ಇನ್ನೊಬ್ಬರಿಗೆ ಗೊತ್ತಿದ್ದದ್ದಿದ್ದರೂ ಕೂಡ ಪ್ರತಿಯೊಂದು ಸಂಗತಿಗೆ ಸುಳ್ಳು ಸೊಟ್ಟ ನೆವಗಳನ್ನೂ ಖೊಟ್ಟಿ ವಿವರಣಗಳನ್ನೂ ಗಂಡಹೆಂಡಂದಿರು ಒಬ್ಬರೊಬ್ಬರ ಮೋರೆಯಮೇಲೆ ಬಿಸುಟುತ್ತಲೇ ಇರುತ್ತಾರೆ. ಆ ನೆವಗಳಿಂದ ಪರಸ್ಪರ ವಿಷಯಕ ನಂಬಿಗೆಯು ಹಾರಿ ಹೋಗುತ್ತದೆ; ಮತ್ತು ತಮ್ಮ ಮನದೊಳಗಿನ ಗುಪ್ತ ಮತ್ತು ಜೀವಾಳದ ಸಂಗತಿಗಳನ್ನು ಇನ್ನೊಬ್ಬರಲ್ಲಿ ಬಚ್ಚಿಡಲಿಕ್ಕೆಂದು ಕೊಡಲಿಕ್ಕೆ ಸಿದ್ಧವಾಗುವ ದಿಲ್ಲ. ಪರಸ್ಪರರ ವಿಚಾರ ಮತ್ತು ವಿಶ್ವಾಸ-ವಿನಿಮಯಗಳು ಕಟ್ಟಾಗುತ್ತವೆ. ಹಾಗು ವಿಚಾರಗಳ ಏಕಜೀವವು ನಷ್ಟವಾಗುತ್ತದೆ

ಯಾವ ತಂತು-ವಾದ್ಯವನ್ನು ತಕ್ಕೊಂಡರೂ ಅದರ ತಂತಿಯ ಸ್ವರಗಳು ತಾವಾಗಿ ಕೂಡಿರುವದಿಲ್ಲ ಎಲ್ಲ ತಂತಿಗಳೊಳಗಿಂದ ಒಂದೇ ಸ್ವರ ಹಾಗು ಸಹಸಂವೇದನಗಳುಂಟಾಗುತ್ತಿದ್ದರೇ ಆ ಸುರಮ್ಯ ವಾದ್ಯದಿಂದ ಹೊರಡುವ ಬೇರೆ ಬೇರೆ ಅತ್ಯುತ್ಕೃಷ್ಟ ಹಾಡುಗಳನ್ನು ಬೇಕಾದಷ್ಟು ಹೊರಹೊರಡಿಸ ಬಂದೀತು. ಸ್ವರ ಹಚ್ಚಿರದಿದ್ದರೆ ಆ ವಾದ್ಯದಿಂದ ಕರ್ಕಶ ಇಲ್ಲವೆ ಹೀನ ಸ್ವರವೇ ಹೊರಡಹತ್ತಿ ಕೇಳುವವರಿಗೆ ಕರ್ಣಕಠೋರವೆನಿಸಹತ್ತೀತು. ಸ್ವರ ಕೂಡಲಿಕ್ಕೆ ಇಲ್ಲವೆ ಸಹಸಂವೇದನವಾಗಲಿಕ್ಕೆ ಕೆಲ ತಂತಿಗಳನ್ನು ಇಳಿಸ ಬೇಕಾಗುತ್ತದೆ; ಕೆಲವನ್ನು ಏರಿಸಬೇಕಾಗುತ್ತದೆ. ಇದೇ ಆ ತಂತಿಗಳೊಳ ಗಿನ ಕೊಡಕೊಳ್ಳೆಯಣವು; ಮತ್ತು ಅದು ಎಷ್ಟು ಸುಲಭ ಹಾಗು ತೀವ್ರ

ಮಾದೀತೋ ಅಷ್ಟು ಗಾಯನ-ವಾದನಕ್ಕೆ ಬೇಗನೆ ಪ್ರಾರಂಭವಾದೀತು; ಅಷ್ಟು ಹೆಚ್ಚು ರಂಗು ಅದಕ್ಕೇರೀತು. ಸತಾರ ಇಲ್ಲವೆ ದಿಲ್‌ರುಬಾ ಇವುಗಳ ಹಲವು ತಂತಿಗಳು ನಮ್ಮ ಕಣ್ಣಿಗೆ ಕಾಣಿಸುತ್ತವೆ; ಆದರೆ ಆ ವಾದ್ಯಗಳಿಂದ ಕೇಳಿ ಸುವ ಧ್ವನಿಯು ಮಾತ್ರ ಒಂದೇ ಒಂದು!

ಇದೇ ಉದಾಹರಣೆಯು ಗಂಡ್ಸ ಹೆಂಡಿರ ಸ್ವಭಾವ-ಸಂಗತಿಗಳ ಬಗ್ಗೆ ಸಂಪೂರ್ಣ ಒಪ್ಪತಕ್ಕದ್ದಾಗಿದೆ. ಉಭಯತರೊಳಗಿನ ಮೊದಲಿನ ಅಂತರ ವನ್ನು ಕ್ಷೀಣಿಸುವದಕ್ಕೆಂದು ಕೊಡಕೊಳ್ಳಿಯ ಬಿಚ್ಚುಮನದಿಂದ ಅವರು ಕಟ್ಟು-ನಿಟ್ಟಾಗಿ ಪ್ರಯತ್ನಿಸತಕ್ಕದ್ದು ಅದಕ್ಕಾಗಿ ಒಬ್ಬರು ಎರಡು ಹೆಜ್ಜೆ ಹಿಂಸೆ ಸರಿಯಬೇಕಾದರೆ ಇನ್ನೊಬ್ಬರು ತುಸ ಹಾರಿ ಹೋಗಬೇಕಾದೀತು ಅವರ ಸ್ವಭಾವಗಳೊಳಗಿನ ಅನಂತ ಇಚ್ಛಾನಿಚ್ಛೆಗಳು ಒಂದುಗೂಡಿ ಅವೆಲ್ಲವು ಗಳೊಳಗಿಂದ ಒಂದು ಧ್ಯೇಯದ ಒಂದೇ ಒಂದಾದ ಧ್ವನಿಯು ಹೊರಹೊರಡ ಬೇಕು. ತಂತಿಗಳನ್ನು ಗಾಯನದ ಪೂರ್ವಸಿದ್ಧತೆಗೆಂದು ಹಚ್ಚುವುದಿರು ವಿರುತ್ತದೆ! ಪತಿ-ಪತ್ನಿಯರಿಗೆ ಸಂಸಾರದ ಬಂಡಿಯನ್ನು ತಮ್ಮ ಹೆಗಲುಗಳಿಂದ ಜಗ್ಗುವದಿರುತ್ತದೆ. ಹಲವು ಸುಖದುಃಖದ ಪ್ರಸಂಗಗಳನ್ನು ಕಾಲಿಗೆ ಕಾಲು ಕಟ್ಟಿಕೊಂಡು ನಿಗ್ರಿಸುವದಿರುತ್ತದೆ; ಮತ್ತು ಅವುಗಳ ಹೊಣೆಗಾರಿಕೆಯ ಪೂರ್ವಸಿದ್ಧತೆಯೆಂದರೇನೇ ಸ್ವಭಾವನಿರೂಪಣದ ಅಥವಾ ಕೂಡಿ ನಡೆಯು ವದರ ಆವಶ್ಯಕತೆಯು.

ಯಾರಿಗೆ ಅದು ತೀವ್ರ ಸಾಧಿಸುವದೋ ಅವರು ವೈವಾಹಿಕ ಜೀವನದ ತಂಪಾದ ನೆಳಲಲ್ಲಿ ಕುಳಿತು ಐಹಿಕ ಆಪತ್ತಿಗಳ ಬೇಸಿಗೆಯನ್ನು ಲೀಲೆಯಿಂದ ಕಳೆಯುತ್ತಿರುತ್ತಾರೆ; ಆದರೆ ಯಾರ ಇಡೀ ಜನ್ಮವು ಬರಿಯ ಮನೆಯೊಳಗಿನ ಒಕ್ಕಟ್ಟನ್ನು ಕೂಡಿಸುವ ಸಲುವಾಗಿ ವೆಚ್ಚವಾಯಿತೋ ಅಂಥವರಿಗೆ ಬಿಸಿಬಿಸಿ ಆಪತ್ತಿಗಳೊಳಗಿಂದ ಪಾರಾಗುವ ಬೇರೆ ನೆರವೇ ಇರುವುದಿಲ್ಲ. ಒಕ್ಕಟ್ಟಿನ ಮಹತ್ವವು ಎರಡು ಅಥವಾ ಹಲವು ಮನೆಗಳಲ್ಲೇ ಇಷ್ಟಿರಲು, ಒಂದೇ ಮನೆ ಯೊಳಗಿನ ಅದರ ಮಹತ್ವವನ್ನೆಷ್ಟು ಬಣ್ಣಿಸಬೇಕು! ಇಲ್ಲದಿದ್ದರೆ ಸಾಯುವ ವರೆಗೂ ಜಗಳಾಡುತ್ತ ಸ್ವಂತಕ್ಕೂ ಇನ್ನೊಬ್ಬರಿಗೂ ಸಾಕುಸಾಕೆಂದೆನಿಸಿಸುವ ದಂಪತಿಗಳೇನು ಕಡಿಮೆ ಇರುವರೊ? ಅಂಥವರಿಗೆ ಪತಿಪತ್ನಿಯರೆನ್ನುವದಕ್ಕಿಂತ ಜನ್ಮದ ವೈರಿಗಳೇ ಅವರೆನ್ನಬಹುದು.

---

ಅಹಮ್ಮದಾಬಾದದೊಳಗಿನ ಸುಪ್ರಸಿದ್ಧ ಸುಧಾರಕ ಮನೆತನದೊಳಗಿನ ವಿದುಷಿಯಾದ ಕುಮಾರಿ ವಿನೋದಿನೀ ಎಂ. ಏ ಎಂಬವಳು ಶ್ರೀಯುತ ಮನೂಭಾಯಿ ಇವರೊಡನೆ ಲಗ್ನವಾದಳು ಅಂದಿನಿಂದ ಗುಜರಾಥದಲ್ಲಿ ಪಡಸಾಲೆ-ಮನೆಗಳಲ್ಲೂ ತ್ವೇಷದ ಉದ್ಗಾರಗಳು ಹೊರಟವು. ಶ್ರೀಯುತ ಮನೂಭಾಯಿ ಇವರ ಮೊದಲೇ ಹೆಂಡತಿಯಾದ ಸೌ. ಶಾರದೆಯು ವಯಸ್ಸಿಗೆ ಬಂದವಳಿದ್ದು, ಆಕೆಗೆ ಎರಡು ಮಕ್ಕಳೂ ಇದ್ದವು ಆ ಲಗ್ನದ ಬಗ್ಗೆ ಇಷ್ಟು ಬೊಬ್ಬಾಟವಾಗಲಿಕ್ಕೆ ಹಲವು ಕಾರಣಗಳಿರುವವು. ಅದರೊಳಗೇ ಶಾರದೆಗೆ-ಮೊದಲನೇ ಹೆಂಡತಿಗೆ-ಸವತಿಯು ಬಂದಳು. ಅವಳ ಸಂಸಾರವು ಹಾಳಾಗಿ ಹೋದ ಬಗ್ಗೆ ಕನಿಕರವೂ ತ್ವೇಷವೂ ಜನರ ಮನಸ್ಸಿನಲ್ಲುಂಟಾಯಿತು. ಹಲವು ಮಂದಿ ಹೆಂಡಂದಿರನ್ನು ಲಗ್ನವಾಗುವ ಯಾವ ಹಕ್ಕು ಗಂಡಸಿಗೆ ಹಿಂದುಧರ್ಮಶಾಸ್ತ್ರದಂತೆ ಇದೆಯೋ ಆ ರಿಯಾಯತಿಯನ್ನು ಒಮ್ಮೆಲೆ ಕಿತ್ತಿಗೆದು, ಅದಕ್ಕೆ ಹಿಡಿ ಮಣ್ಣು ಕೊಡಿರೆಂದು ಹಟಹಿಡಿಯುವಷ್ಟು ಲೋಕಮತವು ಇನ್ನೂ ಸುಸಂಸ್ಕೃತವಾಗಿರುವದಿಲ್ಲ. ವಿನೋದಿನಿಯಂತಹ ಸುಶಿಕ್ಷಿತ ಕುಮಾರಿಕೆಯು ಶಾರದೆಯ ಸಂಸಾರವನ್ನು ಹಾಳು ಮಾಡಿದ್ದೇನೂ ಸರಿಯಲ್ಲ, ಮನೂಭಾಯಿಯು ವಿನೋದಿನಿಯ ಸಂಗತಿಗೆ ಹತ್ತುವದೂ ಉಚಿತವಲ್ಲ, ಎಂದು ಆ ನೂತನ ದಂಪತಿಗಳನ್ನು ಪ್ರತಿಯೊಬ್ಬರೂ ಆಡಿಕೊಳ್ಳುತ್ತಿದ್ದರು; ಆದರೆ ಈ ಲಗ್ನವನ್ನು ಮನೂಭಾಯಿ ಮತ್ತು ವಿನೋದಿನಿ ಇವರಿಗೆ ಏಕೆ ಮಾಡಬಂದಿತೆಂಬ ಕಾರಣವನ್ನು-ಅಂದರೆ ಬಹುಪತ್ನೀತ್ವವನ್ನು-ಕಂಡು ಹಿಡಿದು, ಅದರ ಮೇಲೆ ದಾಳಿ ಇಕ್ಕುವದು ಯಾರ ಮನಸ್ಸಿನಲ್ಲೂ ಬರುವದಿಲ್ಲ. ಕೆಲವರ ಮನಸ್ಸಿಗೆ ಬಂದರೂ ಅದನ್ನು ಆಡಿ ತೋರಿಸುವ ಧೈರ್ಯವಾಗುವದಿಲ್ಲ. ಕಲಿತ ಸವತಿಯು ಮೊದಲನೇ ಹೆಂಡತಿಯ ಎದೆಯ ಮೇಲೆ ಹತ್ತಿ ಮನೆಯಲ್ಲಿ ಬರುವ ಅನುಭವಗಳು ನಮ್ಮ ದೇಶದಲ್ಲಿ ಹೊಸವಾಗಿದ್ದರೂ, ಸುಶಿಕ್ಷಿತ ಸಮಾಜದಲ್ಲಿ ಅವು ಈಗಾಗಲೇ ಹೈಯಾಗಿ ಹೋಗಿವೆ. ರತ್ನಪ್ರಭಾ ಎಂಬ ಯಾವಳೊಬ್ಬ ವಿದುಷಿಯು ತನ್ನ ಅಕ್ಕನ ಗಂಡನೊಡನೆಯೇ ಲಗ್ನವಾದ ಉದಾಹರಣೆಯು ಮುಂಚೆ ಪುಣೆಯೊಳಗೆ ನಡೆದ ಸಂಗತಿಯೇ ಆಗಿದೆ. ಇತ್ತೀಚೆಗೆ ಎಂಟು-ಹತ್ತು ವರ್ಷಗಳಲ್ಲಿ ವಿದುಷಿ ಕುಮಾರಿಕೆಯರು ವಿವಾಹಿತ ಗಂಡಸಿನೊಡನೆ ಲಗ್ನವಾದ

ಇಲ್ಲಿಯೆ ಸ್ಪಷ್ಟವಾದ ಪ್ರೇಮಸಂಬಂಧವನ್ನಿಟ್ಟ ಉದಾಹರಣೆಗಳು ಹೆಚ್ಚಾಗಿ ಬೆಳಕಿಗೆ ಬಂದಿವೆ. ಈ ಪ್ರಕಾರಗಳು ಸಮಾಜಕ್ಕೆ ಹೀನತ್ವವನ್ನುಂಟು ಮಾಡುವ, ಬಡಗೃಹಿಣಿಯು ಅನ್ನದಲ್ಲಿ ಮಣ್ಣು ಬೆರಿಸುವ ಬಗೆಗಳಂತೂ ನಿಜವೇ ಸರಿ; ಆದರೆ ವಿಶೇಷ ಖೇದೋತ್ಪಾದಕ ಸಂಗತಿಯೇನಂದರೆ, ಕಲಿತಂಥ ಹಾಗು ಸದ್ಯಸ್ಕ ಸಮಾಜಸುಧಾರಕರೆಂದೆನಿಸಿಕೊಳ್ಳುವವರೇ ಇಂಥ ಉದ್ಯೋಗಕ್ಕೆ ಹತ್ತುತ್ತಾರೆ. ಸ್ವೈರಾಚಾರದ ನವನೀತಿಯು ಪುರಸ್ಕಾರ ಮಾಡುವದಕ್ಕೆಂದು ಅನೈತಿಕ ಹಾಗು ತ್ಯಾಜ್ಯವಾದಂಥ ಹಳೇ ಬಹುಪತ್ನೀಕತ್ವದ ರಿಯಾಯಿತಿಯ ಲಾಭಪಡೆಯುವವರು ನಿಜವಾದ ಸುಧಾರಕರೋ-ದುರ್ಧಾರಕರೋ? ಹಳೇ-ಹೊಸದರಲ್ಲಿಯ ತ್ಯಾಜ್ಯಗಳನ್ನಷ್ಟೇ ಈ ನಾಮಧಾರೀ ಸುಧಾರಕರು ಹೇಗೆ ಎತ್ತಿ ಹಿಡಿಯುವರೆಂಬದೇ ತಿಳಿಯದು!

ಅದೇನೇ ಇರಲಿ; ಆದರೆ ಇಂಥ ಪ್ರಕಾರಗಳು ದಿನದಿನಕ್ಕೆ ತಲೆ ಎತ್ತಿಕೊಂಡು ಮೆರೆಯುತ್ತಿರುವವು, ಹೆಚ್ಚುತ್ತಿರುವವು; ಹಾಗು ತಮ್ಮ ಭೂಕಂಪದ ದಬ್ಬಾಳಿಕೆಯಿಂದ ಸಂಸಾರೀ ಸ್ತ್ರೀಯರ ಗೃಹಸೌಖ್ಯವನ್ನು ಪುಡಿಪುಡಿಯಾಗಿ ಮಾಡುತ್ತಿರುವವು. ವಿವಾಹಿತ ಪತ್ನಿಯ ಮೇಲೆ ಇದೊಂದು ಹೊಸ ಸಂಕಟವೇ ಉಂಟಾದಂತೆ ತೋರುತ್ತದೆ. ಅವಿವಾಹಿತ ವಿದುಷಿಯರಿಗೂ ಇದರಲ್ಲಿ ದಾರುಣವಾದ ನಿರಾಶೆಯೇ ಇದೆ. ಬಂದಬಳಿಕ ವಿವಾಹಿತ-ಅವಿವಾಹಿತ ಇವೆರಡೂ ಪ್ರಕಾರದ ಸ್ತ್ರೀಯರ ದೃಷ್ಟಿಯಿಂದ ಇದರ ವಿಚಾರ ಮಾಡಲಿಕ್ಕೆಬೇಕು.

ಗಂಡನ ವಿನೋದೀವೃತ್ತಿಯನ್ನು ಹುರಿದುಂಬಿಸತಕ್ಕ, ವೈಚಿತ್ರ್ಯದ ರುಚಿಯನ್ನು ಪೂರೈಸತಕ್ಕ, ಸೌಂದರ್ಯದ ಹಸಿವೆಯನ್ನು ನೀಗಿಸತಕ್ಕ ವರ್ತನವು ಯಾವ ವಿವಾಹಿತ ಸ್ತ್ರೀಯರದಿಲ್ಲವೋ ಅವರ ಸ್ವಾಧೀನದಲ್ಲಿ ಅವರ ಗಂಡಂದಿರುಳಿಯುವದು ದಿನದಿನಕ್ಕೆ ಕಠಿಣವಾಗ ಹತ್ತುವದೇ ಖಂಡಿತವು. ಕೃತ್ರಿಮ ಸಾಧನಗಳಿಂದ ತುಂಬಿತುಳುಕುತ್ತಲಿರುವ ಆಧುನಿಕ ಪ್ರವೃತ್ತಿಪರ ವೃತ್ತಿಯಲ್ಲಿ ಮನುಷ್ಯನಿಗೆ ವೃದ್ಧಾಪ್ಯದ ಅಂಜಿಕೆಯು ಅನಿಸದಾಗಿದೆ. ವಯಸ್ಸಿನಿಂದ ದೊಡ್ಡವನಾದರೂ ಪ್ರವೃತ್ತಿಯಿಂದ ಆತನು ನಿಂತಲ್ಲಿಯೇ ನಿಂತು ಹುಮ್ಮಸದ ತರುಣನ ಭೂಮಿಕೆಯನ್ನು ಬಿಡದಾಗಿದ್ದಾನೆ. ವ್ಯಕ್ತಿಮಾಹಾತ್ಮ್ಯದ ಅಮರ್ಯಾದ ಬೆಳವಣಿಗೆಯೊಡನೆ ಪ್ರತಿಯೊಬ್ಬರೂ ಸುಖದೆದುರು ಬೇರೆ ಯಾವ ಹೊಣೆಗಾರಿಕೆಯ ಹೆಚ್ಚಳವನ್ನೂ ನಡೆಯಗೊಡದಂತಾಗಿರುತ್ತಾರೆ. ನೈಸರ್ಗಿಕ ಹಸಿವೆಯನ್ನು (ವಿಷಯ ಪಿಪಾಸೆ ಅಥವಾ ಹೊಟ್ಟೆ

ಹಸಿವು) ಪ್ರತಿಯೊಂದು ಬಗೆಯಿಂದ ಮತ್ತು ಪ್ರತಿಯೊಂದು ಮಾರ್ಗದಿಂದ ನೀಗಿಸಿಕೊಳ್ಳುವುದೇ ಧರ್ಮವಾಗಹತ್ತಲು, ನೈತಿಕ ಹೊಣೆಗಳು ಸತ್ವಹೀನ ಗಳಾಗಹತ್ತಿವೆ ಸದ್ಯದ ಯುಗದ ಮಹಿಮೆಯೇ ಹೀಗಿದೆ. ಅಂತೆಯೇ ಇದಕ್ಕೆ ಹಲಕೆಲವರು 'ಕಲಿಯುಗ' ಎಂದೆನ್ನುತ್ತಾರೆ. ಈ ಯುಗಧರ್ಮದ ಅರಿವನ್ನು ಭಗಿನೀ ವರ್ಗವು ಮಾಡಿಕೊಳ್ಳದಿದ್ದರೆ ಅವರು ಆತ್ಮನಾಶಕ್ಕೆ ಗುರಿ ಯಾಗಬಹುದಾಗಿದೆ ಪುರುಷರ ಆಯುಷ್ಯವು ಮನೆಯ ಹೊರಗಿನ ಸಂಗತಿ ಗಳಿಂದ ಒಂದೇಸವನೆ ಸಿದ್ಧವಾಗಹತ್ತಿದೆ. ಗಂಡಸು ಬುದ್ಧಿಯಿಂದ, ಆಕಾಂಕ್ಷೆ ಯಿಂದ ಮತ್ತು ಜ್ಞಾನದಿಂದ ಒಂದೇಸವನೆ ಬೆಳೆಯುತ್ತಿರುತ್ತಾನೆ. ಆತನ ಹೆಜ್ಜೆಯ ಮೇಲೆ ಹೆಜ್ಜೆಯನ್ನಿಕ್ಕುತ್ತ ಒತ್ತರದಿಂದ ನಡೆಯುವ ಸಹಚಾರಿಣಿ ಯು ಆತನಿಗೆ ಲಭಿಸಿದರೆ, ಆತನು ಅವಳನ್ನು ಸಂಗಡ ಕರೆದುಕೊಂಡು ಹೋಗುತ್ತಿರುತ್ತಾನೆ; ಆದರೆ ಆಕೆ ಮಂದಗತಿಯವಳಿದ್ದರೆ ಇಲ್ಲವೆ ಮಕ್ಕಳು-ಮರಿಗಳ ಗೊಂದಲದಲ್ಲಿ ಅಪ್ರಬುದ್ಧತನದಿಂದ ನರ್ಕಳಾದರೆ, ಅವನಿಗೆ ತಾನಾಗಿಯೇ ಹಿಂದೆ ಬೀಳುವ ಪ್ರಸಂಗ ಒದಗುತ್ತದೆ ಸ್ತ್ರೀಯು ಪುರುಷನಂತೆ ಆಕಾಂಕ್ಷೆಗಳಿಂದ ಬೆಳೆಯುವದಿಲ್ಲ ತದ್ವಿರುದ್ಧವಾಗಿ ಅನುಭವದಿಂದ ಅವಳು ಬೇಗನೆ ಪ್ರೌಢಳಾಗುತ್ತಾಳೆ ಸಂಸಾರದ ತೊಂದರೆಗಳಿಂದ ಅವಳು ಬೇಗನೆ ದಣಿಯುತ್ತಾಳೆ ಹುಡುಗರು-ಹುಪ್ಪಡಿಗಳ ಮೂಲಿಕ ತ್ರಸ್ತಗೊಳ್ಳುತ್ತಾಳೆ ಸಂಕ್ಷಿಪ್ತವಾಗಿ ಹೇಳಬೇಕಾದರೆ ಆಕೆಯೊಳಗಿನ ಹುರುಪು, ಹುಮ್ಮಸ್ಸು, ಲೋಲುಪತೆ, ಆತುರತೆ ಮುಂತಾದವುಗಳೆಲ್ಲ ಕಡಿಮೆಯಾಗಿ, ಪ್ರಸಂಗವಶಾತ್ ಆಕೆಯು ಉದಾಸೀನಳೂ ಸಹ ಆಗುತ್ತಾಳೆ ಅವಳ ಸರ್ವ ಬಗೆಯ ಬೆಳವಣಿ ಗೆಯು ಕುಂಠಿತವಾದಂತೆ ತೋರುತ್ತದೆ ಈ ವಿಷಮ ಪ್ರಕಾರವು ಉಭಯ ತರ ಬೆಳವಣಿಗೆಯದಾಗಿರುವದರಿಂದ, ಅವಬ್ಬರೂ ಒಮ್ಮೆಲೆ ಪ್ರವಾಸಕ್ಕೆಂದು ಹೊರಟರೂ ಸ್ತ್ರೀಯು ಸಹಜವಾಗಿಯೇ ಹಿಂದೆ ಬೀಳುವಳು. ಇಂಥ ಪ್ರಸಂಗ ದಲ್ಲಿ ಪುರುಷನಿಗೆ ಹರೆಯದ ಹೊಸ ಗೆಳತಿ ಸಿಕ್ಕರೆ ಅವಳು ಬೇಕೇಬೇಕಾಗಿರು ತ್ತಾಳೆ. ಕದಾಚಿತ್ ಅವನು ಇಂಥ ಮೈತ್ರಿಯ ಬಗ್ಗೆ ಮನಃಪೂರ್ವಕವಾಗಿ ಇಚ್ಛಿಸುತ್ತಿರುತ್ತಾನೆ. ಪುರುಷನು ಎಷ್ಟರ ಮಟ್ಟಿಗೆ ಸುಸಂಸ್ಕೃತನೋ, ಮಹತ್ವಾಕಾಂಕ್ಷಿಯೋ; ಮತ್ತು ಯಾವ ಮಾನದಿಂದ ಅವನ ಮೊದಲನೇ ಹೆಂಡತಿಯು ಅಪ್ರಬುದ್ಧಳೂ ಉದಾಸೀನಳೋ ಆ ಮಾನದಿಂದ ಆ ಗಂಡಸು ಕಲಿತ ಸ್ತ್ರೀಯರ ಬಲೆಯಲ್ಲಿ ಹೆಚ್ಚೆಚ್ಚು ಸಿಕ್ಕುಬೀಳುತ್ತಾನೆ ನಿಜವಾಗಿ

ಹೇಳುವುದೆಂದರೆ, ಆತನು ಸ್ವಂತದ ಬಳಿಯಲ್ಲಿ ಅಂಥ ಸುಶಿಕ್ಷಿತ ಕುಮಾರಿಕೆ ಯನ್ನು ತೊಡಕಿಸಿಕೊಂಡು ಮೋಸಗೊಳಿಸುತ್ತಾನೆ. ಇದು ಆ ಪ್ರಶ್ನೆಯ ಸತ್ಯಸ್ಥಿತಿಯು ಮಾನಸಶಾಸ್ತ್ರವಾಯಿತು ಅರ್ಥಾತ್ ಇಂಥ ಪುರುಷನನ್ನು ನೈತಿಕ ದೃಷ್ಟಿಯಿಂದ ಕೀಳ ಹೇಯನೆಂದೇ ತಿಳಿಯಬೇಕಾದೀತು. ಪತ್ನಿ ಯನ್ನು ಸುಪ್ರಬುದ್ಧ ಮತ್ತು ಯೋಗ್ಯಳನ್ನಾಗಿ ಮಾಡುವದು, ದಣಿದಂತಹ ಅವಳ ಮನಸ್ಸಿಗೂ ಶರೀರಕ್ಕೂ ಹುರುಪು ಕೊಡುವದು ಮುಂತಾದ ಹೊಣೆ ಗಾರಿಕೆಯ ಕೆಲಸಗಳನ್ನು ಗಂಡನೇ ಮಾಡಬೇಕು. ಹೀಗಿದ್ದು ಸ್ವಂತದ ಉದಾಸೀನತೆಯ ಲಾಭವನ್ನು ಆತನಿಗೆ ಹಾಗೆ ಪಡೆಯಲಿಕ್ಕೆ ಬರಲಿಕ್ಕಿಲ್ಲ.

ಆದರೆ ಇನ್ನು ಮೇಲೆ ಸುವಾಸಿನಿಯರು ತಮ್ಮ ಸ್ವಂತದ ಹಾಗು ತಮ್ಮ ಗಂಡಂದಿರ ಬಗ್ಗೆ ಎಚ್ಚರಪಡದಿದ್ದರೆ ಸಾಗಲಾರದು. ಗಂಡನ ಇಚ್ಛಾನಿಚ್ಛೆ ಗಳನ್ನು ದುರ್ಲಕ್ಷಿಸುವ ಮಡದಿಯು ಆತನನ್ನು ಬೇರೆಯವಳ ಸ್ವಾಧೀನಕ್ಕೆ ತಾನಾಗಿ ಒಯ್ದು ಕೊಡುತ್ತಾಳೆ. ಸ್ವಂತದ ಸೌಂದರ್ಯದ ಕಡೆಗೆ, ಆಕರ್ಷ ಕತ್ವದ ಕಡೆಗೆ, ಬೌದ್ಧಿಕ ಬೆಳವಣಿಗೆಗೆ ಯಾವ ಸ್ತ್ರೀಯು ಲಕ್ಷ್ಯವೀಯುವ ದಿಲ್ಲವೋ ಅವಳು ತನ್ನ ಗಂಡನನ್ನು ತನ್ನಿಂದ ದೂರ ನೂಕುತ್ತಿರುತ್ತಾಳೆ. ಹಾಗೆ ದೂರ ದೂಡಿದ ಗಂಡನಿಗೆ ಸಹಾನುಭೂತಿಯ ಚಾಟು ದೊರೆತ ಕೂಡಲೆ ಆತನು ಆ ಚಾಟಿನ ನೆರವಿಗೆ ಹೋದರೆ ಆತನಿಗೆ ಹೆಚ್ಚು ದೋಷ ಕೊಡಲಿಕ್ಕಾ ಗ ವದಿಲ್ಲ. ಆದ್ದರಿಂದ ಸುಶಿಕ್ಷಿತ ಸವತಿಯರ ಸಂಕಟವನ್ನು ನಿವಾರಿಸುವ ಸಲುವಾಗಿ ಸಂಸಾರ ಶಾಸ್ತ್ರದ ಕಠಿಣ ವ್ರತವನ್ನು ಪ್ರತಿಯೊಬ್ಬ ಸುವಾಸಿನಿಯೂ ಹಿಡಿಯಬೇಕು.

ಕಲಿತ ಸವತಿಯು ಲಗ್ನ ಮಾಡಿಕೊಂಡು ಮನೆಯಲ್ಲಿ ಬರುತ್ತಾಳೆಂಬ ದಕ್ಕೆ ಮುಖ್ಯ ಕಾರಣವು ನಮ್ಮ ಹಳೇ ಧರ್ಮಶಾಸ್ತ್ರ ಮತ್ತು ಬಹುಪತ್ನೀಕತ್ವದ ರೂಢಿಯೇ ಸರಿ ಅಂದಬಳಿಕ ಹಳೆಯದಕ್ಕೆ ಹೊಂದಿಕೊಂಡಿದ್ದರಿಂದಲೇ ನಮ್ಮ ಸ್ತ್ರೀಯರು ರಸಾತಳಕ್ಕೆ ಹೋಗಿ ಬಿಡುತ್ತಾರೆ ಹಿಂದೂಗಂಡನಿಗೆ ಬೇಕಾ ದಷ್ಟು ಮಂದಿ ಹೆಂಡಂದಿರೊಡನೆ ಲಗ್ನವಾಗುವ ಹಕ್ಕು ಕಾಯಿದೆಯಿಂದ ದೊರೆ ತಿದೆ ಆದರಿಂದ ಪರಸ್ತ್ರೀಯ ಪ್ರೇಮಪಾಶವು ಯಾವನೊಬ್ಬ ಹಿಂದೂ ಗಂಡ ನ ಮೇಲೆ ಬಿದ್ದರೆ ಆತನ ಧೈರ್ಯದಿಂದ ಅವಳನ್ನು ತನ್ನ ಮದುವೆಯ ಮಡದಿಯೆಂದು ಸಹಜವಾಗಿ ಮನೆಗೆ ತರುತ್ತಾನೆ ಇದುವರೆಗಿದ್ದ ಕಳವಿನ ವ್ಯವ ಹಾರವು ನಿಂತು ಈಗ ಅದು ಬಹಿರಂಗವಾಗಿ ನಿರಾತಂಕದಿಂದ ಪ್ರಾರಂಭವಾಗು

ತ್ತದೆ ಆ ಬಗ್ಗೆ ಸಮಾಜವು ಏನನ್ನೂ ಅನ್ನುವಂತಿಲ್ಲ. ಏನು ಹೇಳಬೇಕೆಂಬುದೂ ಅನಿಸುವದಿಲ್ಲ. ಲಗ್ನವಾಗದೆ ಇದ್ದ ಇಟ್ಟುಕೊಂಡ ಹೆಂಗಸು ಇಂದಿಲ್ಲ ನಾಳೆಯಾದರೂ ತೊರೆದು ಹೋದಾಳು; ಗಂಡನು ಮತ್ತೆ ಸಂಸಾರದಲ್ಲಿ ಮಣ್ಣು ಹಾಕಿಯಾನು ಎಂದು ಸುಹಾಸಿನಿಯರಿಗೆ ಯಾವ ಒಂದು ಬಗೆಯ ಆರ್ತ ವಹಿಸಲಿಕ್ಕೆ ಮಾರ್ಗವಿರುತ್ತದೋ ಈ ಬಹುಪತ್ನೀಕತ್ವದ ರೂಢಿಯಿಂದ ಅದೂ ಇಲ್ಲದಂತಾಗುತ್ತದೆ. ಆದ್ದರಿಂದ ಅದಕ್ಕೆ ಉಪಾಯವೆಂದರೆ ಪ್ರತಿಯೊಬ್ಬ ಸ್ತ್ರೀಯ ಲಗ್ನವು ರೆಜಿಸ್ಟರ ಪದ್ಧತಿಯಿಂದ ಸ್ಪೆಶಲ್ ಮ್ಯಾರೇಜ ಆಕ್ಟಿನಂತೆ ಆಗಬೇಕು. ಇಂದಿನ ಸೌಭಾಗ್ಯಕಾಂಕ್ಷಿಣಿಯಾದ ಕುಮಾರಿಕೆಯು, ನಾಳೆಗೆ ಸುವಾಸಿನಿಯಾಗತಕ್ಕವಳು; ಮತ್ತು ಪ್ರಸಂಗವಿಶೇಷದಲ್ಲಿ ಅವಳೂ ಕಲಿತಂಥ ಸವತಿಯ ಅಂಜಿಕೆಯಿಂದ ಅಷ್ಟೇ ದೀನಳಾಗತಕ್ಕವಳಿರುವಳು. ಪುರುಷರು ಅನನ್ಯ ಪ್ರೇಮದ ಆಣೆ ತೊಟ್ಟರೂ 'ಅನ್ಯಥಾ ಶರಣಂ ನಾಸ್ತಿ ತ್ವಮೇವ ಶರಣಂ ಮಮ' ಎಂದು ನಾವು ಪ್ರತಿಯೊಬ್ಬ ದೇವರಿಗೂ ಅನ್ನುವಂತೆ ಪುರುಷರೊಳಗಿನ ಪ್ರಮುಖ ವ್ಯಕ್ತಿಯು ಪ್ರತಿಯೊಬ್ಬ ಹೊಸ ಯುವತಿಗೆ ಅನನ್ಯಪ್ರೇಮದ ಆಶ್ವಾಸನೆಯ ಪೂಜೆಯನ್ನು ಕಟ್ಟುತ್ತಿರುತ್ತಾನೆ. ಅಂತೆಯೇ ಅವರ ಆಣೆ-ಪ್ರಮಾಣಗಳನ್ನು ಹೆಚ್ಚಾಗಿ ನಂಬಕೂಡದು. ರಜಿಸ್ಟರ ಲಗ್ನವಾಯಿತೆಂದರೆ ಆ ಗಂಡಸಿಗೆ ಒಬ್ಬ ಹೆಂಡತಿಯು ಜೀವಂತಳಿರುವವರೆಗೆ ಇನ್ನೊಬ್ಬಳನ್ನು ಮದುವೆಯಾಗಲಿಕ್ಕೆ ಬರುವದಿಲ್ಲ. ಒಂದು ವೇಳೆ ಆತನು ಹಾಗೆ ಲಗ್ನವೇ ಆದರೆ ಆತನಿಗೆ ಶಿಕ್ಷೆಯಾಗಿ, ಆತನ ಆ ಎರಡನೇ ಲಗ್ನವು ಗೈರಕಾಯಿದೆಯದೆಂದು ಸಿದ್ಧರವಾಗುತ್ತದೆ. ಒಮ್ಮೆ ಸ್ಥಳವನ್ನು ರಿಝರ್ವ ಮಾಡಿ ಬಳಿಕ ನಾವು ಅದರ ಮೇಲೆ ಹೋಗಿ ಕೂಡ್ರದಿದ್ದರೂ ಇನ್ನೊಬ್ಬರಾರೂ ಅದರ ಮೇಲೆ ಹೋಗಿ ಕೂಡ್ರಲಿಕ್ಕಿಲ್ಲ. ಅದರಂತೆಯೇ ರೆಜಿಸ್ಟರ ಪದ್ಧತಿಯಿಂದ ಒಬ್ಬ ಹೆಂಡತಿಯ ಸಲುವಾಗಿ ಆ ಗಂಡನು ರಿಜರ್ವ ಎಂದು ತಿಳಿಯಲಾಗುತ್ತಾನೆ. ಆತನ ಪ್ರೇಮದ ಒಡತಿಯು ಅವನ ಮದುವೆಯ ಹೆಂಡತಿಯಾಗಿರದಿದ್ದರೂ ಇನ್ನೊಬ್ಬ ಪ್ರೇಮದ ಒಡತಿಯು ಆತನ ಹೆಂಡತಿಯಂತೂ ಆಗಲಾರಳು. ಇದೇನು ಅಲ್ಪ ಲಾಭವಲ್ಲ. ಸ್ತ್ರೀಯರು ಹಳೇ ಪದ್ಧತಿಯನ್ನೇ ನಂಬಿ ಕುಳಿತಿರುತ್ತಾರೆ; ಆದರೆ ಆ ಹಳೇ ಪರಂಪರೆಯೇ ಕಡೆಗೆ ಅವರ ಗಂಟಲಿಗೆ ಗಾಣವಾಗುತ್ತಿದೆ.

ಇದರಿಂದ ವಿವಾಹಿತ ಹುಡುಗೆಯ ತಂದೆ ತಾಯಿಗಳು ಪಾಠಗಲಿಯಬಹುದಾಗಿದೆ. ಸುಶಿಕ್ಷಿತ ಕನ್ನೆಯರು ಸವತಿಯ ಮೇಲೆ ಯಾವನೊಬ್ಬ

ಇನ್ನೊಬ್ಬನೇ ವರವನ್ನು ಲಗ್ನವಾಗಲಿಕ್ಕೆ ಸಿದ್ಧವಾಗುವದು ಶಿಕ್ಷಣ, ಇಚ್ಛೆ, ಮಹತ್ವಾಕಾಂಕ್ಷೆ ಇವುಗಳ ವಿಪರೀತ ಸಿರಾಶೆಯನ್ನೇ ವ್ಯಕ್ತಪಡಿಸುವದಿಲ್ಲವೆ? ಆದರೆ ಅದಕ್ಕೂ ಅನೇಕ ಕಾರಣಗಳಿವೆ. ಈ ಕಾರಣಗಳನ್ನೆಲ್ಲ ದೂರೀಕರಿಸ ಬೇಕು. ಅದರ ಹೊರತು ಇಂಥ ಅನುಚಿತ ರೂಢಿಗೆ ತಡೆಯುಂಟಾಗದು ನಮ್ಮ ಕಡೆಗೆ ಹುಡುಗಿಯು ಲಗ್ನದ ಪದ್ಧತಿಯ ಬಗ್ಗೆ ಸ್ಪಷ್ಟವಾದ ಕಲ್ಪನೆಯು ಅವರಿಗೆ ಇರುವುದಿಲ್ಲ. ಪ್ರೀತಿವಿವಾಹವಾಗಬೇಕೆಂದೆನ್ನುವ ಕನ್ಯಾಪಿತೃ ಗಳು ಹಲವರಿರುವರು; ಆದರೆ ಆ ಬಗೆಯಿಂದ ಪ್ರಯತ್ನ ಮಾಡಲಿಕ್ಕೆ ಅವರ ಲ್ಲಿಯ ಎಷ್ಟು ಮಂದಿ ಉದ್ಯುಕ್ತರಾಗುತ್ತಾರೆ? ಪ್ರಣಯ ವಿವಾಹ ಕೂಡಿಸಲಿಕ್ಕೆ ಹುಡುಗಿಗಿಂತಲೂ ಹುಡುಗಿಯ ಹಿರಿಯರಿಗೆ ಹೆಚ್ಚು ಶ್ರಮ ಬೀಳುತ್ತವೆ. ತಮ್ಮ ಗುತ್ತಿನ ಪರಿಚಯದ ಸಂಭಾವಿತ ತರುಣರನ್ನು ಶೋಧಿಸಬೇಕು ಅವರಿಗೂ ಹುಡುಗಿಗೂ ಗುರ್ತು ಮಾಡಿಕೊಡಬೇಕು ಉಭಯತರ ಸ್ವಭಾವಗಳು ಒಂದಾಗುವವೋ ಇಲ್ಲವೋ. ಪರಸ್ಪರರಲ್ಲಿ ಆಕರ್ಷಣ ಉಂಟಾಗುವ ಸಮಾನ ಅಥವಾ ವಿರೋಧೀ ಗುಣಗಳು ಹೊಂದುವವೋ ಇಲ್ಲವೋ ಇವುಗಳನ್ನು ಅರಿತು ಕೊಳ್ಳದೆ ಹಾಗು ಅಂಥ ಪ್ರಕಾರದ ಪ್ರಸಂಗಗಳನ್ನುಂಟುಮಾಡದೆ ಅವರು ಪ್ರೀತಿವಿವಾಹವಾಗಬೇಕೆಂದು ಬರಿಯ ಬಾಯಿಂದ ಸಾವಿರಸಾರೆ ಅಂದರೂ ಅಷ್ಟ ರಿಂದೇನು ಕೆಲಸವಾಗಬೇಕು? ತರುಣ ಅವಿವಾಹಿತ ವಿದ್ಯಾರ್ಥಿಗಳಿಗೂ ನಮ್ಮ ಕನ್ಯೆಗಳಿಗೂ ಗಂಟುಬೀಳದಂತೆ ನಾವು ಬಹು ಎಚ್ಚರಪಡುತ್ತೇವೆ; ಮತ್ತು ಅದ ರಿಂದಲೇ ನಾವು ಹುಡುಗಿಯರನ್ನು ಆತಂಕದ ಮಡಿಯ, ಅಲಿಪ್ತವಾದಂಥ ವಾತಾವರಣದಲ್ಲಿ ಬೆಳೆಸುತ್ತೇವೆ. ಗಂಡುಜಾತಿಯ ಗುರ್ತ ಸಹ ಅವರಿಗಾಗ ಗೊಡುವದಿಲ್ಲ. ಒಳ್ಳೆಯವರಾರು, ಕೆಟ್ಟವರಾರು? ಉದಾತ್ತರಾರು, ನೀಚ ರಾರು? ಸುಸ್ವರೂಪರಾರು, ಕುರೂಪಿಗಳಾರು? ಅಶಕ್ತರಾರು, ಸಶಕ್ತರಾರು? ಅದನ್ನೆಲ್ಲ ವಯಸ್ಸಿಗೆ ಬಂದ ಹುಡುಗಿಯು ಯಾವಾಗ ಪರೀಕ್ಷಿಸಬೇಕು? ಅವಳು ಒಬ್ಬನನ್ನೇ ಅಲ್ಲ, ಹಲವು ಮಂದಿ ತರುಣರನ್ನು ಕಂಡಾಗಲಲ್ಲವೆ? ಗಂಡಸರ ಗಾಳಿಹತ್ತದಂತೆ ದೂರ ಚಾಟಿನಲ್ಲಿ ಬೆಳೆಸಿದ್ದ ನಮ್ಮ ಹುಡುಗಿಯರು ಮೊಟ್ಟ ಮೊದಲು ಯಾವ ಗಂಡಸಿನ ನಿಕಟ ಸಂಬಂಧದಲ್ಲಿ ಬರುವರೋ ಅವನಲ್ಲಿಯೇ ಅವರು ಲುಬ್ಧರಾಗಿಬಿಡುತ್ತಾರೆ. ಇಂದಿನ ಪರಿಸ್ಥಿತಿಯಲ್ಲಿ ತರುಣಿಯರು ಮನ ಬಿಚ್ಚಿ ನಡೆಕೊಳ್ಳುವ ಸ್ಥಾನವೆಂದರೆ ಕುಟುಂಬವತ್ಸಲ ಪುರುಷರು. ಸಮಾಜವು ಅವರೊಡನೆ ಮಾತನಾಡಲಿಕ್ಕೂ ಕೂಡ್ರಲಿಕ್ಕೂ ತಡೆಯನ್ನುಂಟು ಮಾಡುವ

ನಿಲ್ಲ. ಮೊದಲನೇ ಹೆಂಡತಿಯ ಗೆಳತಿಯೆಂದೇ ಆ ಕುಟುಂಬದಲ್ಲಿ ಅವಳಿಗೆ ಪ್ರಥಮ ಪ್ರವೇಶ ಲಭಿಸುವದು. ಆ ಮೊದಲನೇ ಹೆಂಡತಿಯ ಸಲಿಗೆಯಿಂದಲೇ ಅವಳು ಆಕೆಯ ಗಂಡನೊಡನೆ ಮಾತಾಡಹತ್ತುತ್ತಾಳೆ; ಮನೆಗೆ ಬರ ಹೋಗಹತ್ತುತ್ತಾಳೆ; ಮತ್ತು ಆ ಪತ್ನಿಯ ಭಿಡೆಯಿಂದಲೇ ಅವಳು ವೇಳೆ ಅವೇಳೆಗಳಲ್ಲಿ ಅವಳ ಮನೆಯಲ್ಲಿ ಇರಲಿಕ್ಕೂ ಶಕ್ತಳಾಗುತ್ತಾಳೆ. ಹುಡ್ರಿ ಪತ್ನಿಗೆ ಅವರಿಬ್ಬರ ಬಗ್ಗೆ ಸಂಶಯವುಂಟಾಗುವ ಮೊದಲೇ ಅವರಲ್ಲಿ ಕೂಡಿ ಬಿಟ್ಟಿರುತ್ತದೆ! ಹುಡುಗೆಯರಿಗೆ ಗಂಡಸರ ಸ್ನೇಹ ಸಂಗತಿಗಳನ್ನು ಮಾಡಬೇಕೆಂದು ಸ್ವಭಾವತಃ ಅನಿಸುತ್ತದೆ. ಅದರಲ್ಲೂ ಇದುವರೆಗೆ ಇಷ್ಟು ಮನಬಿಚ್ಚಿ ಬೇರೆ ಯಾವ ಗಂಡಸಿನ ಸಂಗಡವೂ ಅವಳಿಗೆ ಕೂಡ್ರಲಿಕ್ಕೂ ಮಾತನಾಡಲಿಕ್ಕೂ ಸಂಧಿ ದೊರೆತಿರುವದಿಲ್ಲ. ಅದರಿಂದ ಅವಳು ಮೋಸಗೊಳ್ಳುವುದು ಸಹಜವೇ ಆಗಿದೆ. ವಿವಾಹಿತ ಪುರುಷನು ಸ್ತ್ರೀ ಹೃದಯವನ್ನು ತಪ್ಪದೆ ನೆಲೆಹಿಡಿಯುವ ನಿಪುಣ ನೀರು ಮುಳುಗುವವ, ಪ್ರಣಯ ಶಾಸ್ತ್ರದೊಳಗಿನ ತಜ್ಞ, ವಿಪರೀತ ಸಲಿಗೆ ಬೆಳಿಸಲಿಕ್ಕೆ ಹಿಂದು ಮುಂದೆ ನೋಡದ ಧೈರ್ಯಸ್ಥ ಇತ್ಯಾದಿ ಗುಣಗಳಿಂದ ಸಿದ್ಧನಾಗಿರುತ್ತಾನೆ, ಮತ್ತು ಇಂಥವನಿಗೆ ಕುಮಾರಿಕೆಯರ ಭೆಟ್ಟಿಯಾದ ಬಳಿಕ ಅವರು ಸಹಜವಾಗಿ ಮೋಸಗೊಳ್ಳುತ್ತಾರೆ. ಆತನ ಐಶ್ವರ್ಯದಿಂದ, ಚಾತುರ್ಯದ ಮಾತಿನಿಂದ, ಆಸ್ಥಾಪೂರ್ವಕ ವರ್ತನದಿಂದ ಅವನಲ್ಲಿ ಅನುರಕ್ತರಾದವರನ್ನಂತೂ ಆತನು ಹೇಗೆ, ಯಾವಾಗ ಮತ್ತು ಎಷ್ಟರ ಮಟ್ಟಿಗೆ ಮೋಸಗೊಳಿಸ್ಯಾನೆಂಬದರ ನಿಯಮವೇ ಉಳಿಯುವುದಿಲ್ಲ. ಕಲಿತಂಥ ಸವತಿಯು ಯಾವ ಯಾವ ಮನೆಯಲ್ಲಿ ಸೇರಿಕೊಂಡಿರುವಳೋ ಆಯಾ ಮನೆಗಳಲ್ಲೆಲ್ಲ ಇದೇ ಪ್ರಕಾರವು ಕಂಡು ಬಂದೀತು. ಗಂಡನ ಮನಸ್ಸನ್ನು ಒಂದೇ ಸವನೆ ವೇಧಿಸಿಕೊಳ್ಳುವ ಮಟ್ಟಿಗಿನ ಕಸಬು ಮೊದಲನೇ ಹೆಂಡತಿಯಲ್ಲಿ ಇದ್ದರೆ, ಆ ಸುಶಿಕ್ಷಿತ ಕುಮಾರಿಕೆಯನ್ನು ಅವಳು ತಾನಾಗಿಯೇ ತನ್ನ ಮನೆಗೆ ಬರಗೊಟ್ಟಿದ್ದರೂ ಗಂಡನ ಮೋಹಜಾಲಕ್ಕೆ ಬಲಿಬಿದ್ದು ಆಕೆ ಮೋಸ ಪಟ್ಟಿದ್ದರೆ ಮತ್ತು ಗಂಡನು ಪ್ರಾಮಾಣಿಕ, ಕನಿಕರದವನಿದ್ದನೆಂದೇ ಆತನು ಆ ಮೋಸಗೊಂಡ ಕುಮಾರಿಕೆಯೊಡನೆ ಲಗ್ನವಾಗಲಿಕ್ಕೆ ಸಿದ್ಧನಾಗಿರಬೇಕು. ಅವಿವಾಹಿತ ತರುಣನು ಪ್ರಣಯ ವ್ಯವಹಾರದಲ್ಲಿ ಉಲ್ಲೂವಂತೂ ನಿಜವೇ; ಆದರೆ ಆತನು ಆ ವ್ಯವಹಾರದಲ್ಲಿ ಹೊಸಬನೇ ಆಗಿರುತ್ತಾನೆ. ಸ್ತ್ರೀಯರ ಮನಸ್ಸುಗಳನ್ನು ಮೋಹಗೊಳಿಸುವ ಕಲೆಯು ಆತನಿಗೆ ಗೊತ್ತಿರುವದಿಲ್ಲ. ತನ್ನ

ಮನೋಗತವನ್ನು ಆಡಿ ತೋರಿಸುವ ಧೈರ್ಯವೂ ಆತನಿಗಾಗುವದಿಲ್ಲ. ಈ ರೀತಿಯಾಗಿ ಆತನು ಭಿಡಸ್ತನಾಗಿರುತ್ತಾನೆ. ಆತನ ತೀರ ವೈಷಯಿಕ ಪ್ರೇಮವು ಸುತ್ತಲೂ ಧ್ಯೇಯವಾದದ ವಲಯವಿರುತ್ತಿದ್ದರೆ, ವಿವಾಹಿತ ಪುರುಷನು ಧ್ಯೇಯವಾದದ ಸವಿಯುಂಡು ಸಂಪೂರ್ಣ ವೈಷಯಿಕ ಆಕಾಂಕ್ಷೆಗಳ ಭೋಕ್ತಾರನಾಗಿ ಬಿಟ್ಟಿರುತ್ತಾನೆ. ಅವಿವಾಹಿತ ತರುಣನು ಹೃದಯದೇವಿಯು ಅಧಃಪಾತನಾಗಬಾರದೆಂದು ಚಿಂತಿಸುತ್ತಿರುತ್ತಾನೆ; ಕಿಮೂನಪಕ್ಷ ಅದನ್ನು ತರುಣಿಗೆ ಆಡಿ ತೋರಿಸಿ ಅವಳನ್ನು ಜಾಗ್ರತಳನ್ನಂತೂ ಮಾಡುತ್ತಿರುತ್ತಾನೆ ಸ್ತ್ರೀಯರನ್ನು ಉಪಭೋಗ್ಯವಸ್ತುವೆಂದು ನೋಡುವುದೇ ವಿವಾಹಿತ ಗಂಡಸಿನ ದೃಷ್ಟಿಯಾಗಿರುತ್ತದೆ. ಅವಳ ಅಧಃಪತನದ ಬಗ್ಗೆ ಆತನು ಹೆಚ್ಚಾಗಿ ಪರಿವೆ ಮಾಡುವುದಿಲ್ಲ ಇಷ್ಟೇ ಅಲ್ಲ, ಪರಿಣಾಮದ ಭೀಕರ ಚಿತ್ರವು ಆಕೆಯ ಮನಸ್ಸಿನಲ್ಲಿ ಇಣುಕಬಾರದೆಂದು ಒಳ್ಳೇ ಸರಾಗವಾಗಿ ಆತನು ಅವಳನ್ನು ಆಡಿಸುತ್ತಿರುತ್ತಾನೆ. ವಿವಾಹಿತ ಗಂಡಸು ಕುಮಾರಿಕೆಯರ ಕೋಮಲ ಸೌಂದರ್ಯದ ಮೇಲೆ ನುಗ್ಗಲಿಕ್ಕೆ ಜಪ್ಪಿಸಿ ಕುಳಿತಿರುತ್ತಿದ್ದರೆ, ಮುಗ್ಧ ಸೌಂದರ್ಯದ ಪೂಜಕನಾಗಿರುವ ತರುಣನು ಅದರ ದಿವ್ಯತ್ವವು ತನ್ನಲ್ಲಿ ಅನುಗ್ರಹವಾಗಬೇಕೆಂದು ಮನಸ್ಸಿನೊಳಗೆ ಕೊರಗುತ್ತಿರುತ್ತಾನೆ ಒಟ್ಟಿನಲ್ಲಿ ವಿವಾಹಿತ ಪುರುಷನಿಗಿಂತ ಅವಿವಾಹಿತ ತರುಣರು ನಾಮಿರಪಾಲಿಗೆ ನೆಟ್ಟಗಿರುತ್ತಾರೆ ಅವರೊಡನೆ ಹುಡುಗಿಯರನ್ನು ನಿರಾತಂಕವಾಗಿ ವರ್ತಿಸಗೊಡುವುದು ಸಾವಿರಪಟ್ಟು ಕಡಿಮೆ ತೊಂದರೆಯದು; ಮತ್ತು ಆಗಬಾರದ ತೊಂದರೆಯಾದರೂ ಅದೇನಾದೀತು? ವಿಶೇಷವಾದರೆ ಆತನ ಮೇಲೆ ಲಗ್ನವಾಗುವ ಪ್ರಸಂಗವೊದಗೀತಿಷ್ಟೇ ಅಲ್ಲವೇ ಆದರೆ ಅದರಲ್ಲಿ ಕಠಿಣವೇನಿದೆ? ಇಂಥ ಲಗ್ನಗಳಿಂದ ಸುವಾಸಿನಿಯರ ಮನೆ ಮುರಿಯುವ ಪ್ರಸಂಗ ಬೇರೆ ಒದಗುವದಿಲ್ಲವಷ್ಟೇ?

ಸುಶಿಕ್ಷಿತ ಸವತಿ ಎಂಬ ಪ್ರಶ್ನೆಯು ಸುವಾಸಿನಿಯರ ದೃಷ್ಟಿಯಿಂದ ಎಷ್ಟು ಅಂಜಿಕೆಯನ್ನುಂಟುಮಾಡತಕ್ಕದ್ದಿದೆಯೋ ಸುಶಿಕ್ಷಿತ ಕುಮಾರಿಕೆಯರ ದೃಷ್ಟಿಯಿಂದಾದರೂ ಅದು ಅಷ್ಟೇ ಭಯಪ್ರದವಾಗಿದೆ. ಈ ಘಟನೆಯ ಮೂಲ ಕಾರಣಗಳನ್ನು ಕಂಡು ಹಿಡಿದು ಅವುಗಳನ್ನು ನಿವಾರಿಸುವ ಪ್ರಯತ್ನಗಳನ್ನು ಸಮಾಜವು ಮಾಡಲಿಲ್ಲ; ಮತ್ತು ಪ್ರತಿಯೊಬ್ಬ ಸುಶಿಕ್ಷಿತ ಸವತಿಯಾಗುವ ಪ್ರಸಂಗದಲ್ಲಿ ಸುಮ್ಮನೆ ಬೊಬ್ಬಾಟ ಮಾಡುತ್ತ ಕುಳಿತರೆ ಉಪಯೋಗವೇನಾಗಬೇಕು?

---

## ಗಂಡನನ್ನು ಕೆಡಿಸುವವರಾರು?— ಮನೆಯವಳೊ-ಹೊರಗಿನವಳೊ? :: ೧೩

ಹಾಗೆ ನೋಡಿದರೆ ನನ್ನ ಗೆಳೆಯನ ಹೆಂಡತಿಯು ರೂಪದಲ್ಲಿ ನಕ್ಷತ್ರದಂತಿರುವಳು. ಬುದ್ಧಿಯಿಂದ ಚಾಲಾಕಳು, ಸಂಸಾರದಲ್ಲಿ ದಕ್ಷಳು; ಹುಡುಗರು ಹುಪ್ಪಡಿಗಳ ಜೋಪಾಸನೆ ಮತ್ತು ಬೇನೆಯವರ ಶುಶ್ರೂಷೆ ಮಾಡುವಲ್ಲಿ ನಿಪುಣಳಾದವಳೂ, ಸಾತ್ವಿಕಳೂ, ಪತಿಸೇವಾಪರಾಯಣಳೂ ಆಗಿರುತ್ತಾಳೆ. ಹೀಗಿರುತ್ತಿದ್ದರೂ ಆ ನನ್ನ ಗೆಳೆಯನು ಬೇರೆ ಹೆಂಗಸಿಗೆ ಮರುಳಾಗಿದ್ದಾನೆ. ಆತನ ಆ ಹೆಂಗಸಿನ ಬರಿಯ ರೂಪವನ್ನು ನೋಡಿದರೂ ಆಕೆ ನನ್ನ ಮಿತ್ರನ ಹೆಂಡತಿಯ ಪಾಸಂಗಕ್ಕೆ ಸಹ ಹತ್ತಲಿಕ್ಕಿಲ್ಲ. ಸ್ಪಷ್ಟವಾಗಿಯೇ ಹೇಳಬೇಕೆಂದರೆ, ಆ ಹೆಂಗಸು ನನ್ನ ಅತ್ತಿಗೆಯ-ಮಿತ್ರನ ಹೆಂಡತಿಯ-ತೊತ್ತಾಗಲಿಕ್ಕೆ ಕೂಡ ಅರ್ಹಳಾಗಿಲ್ಲ. ನಮ್ಮ ಅತ್ತಿಗೆಯಂತಹ ಸುಸ್ವರೂಪದ ಮತ್ತು ಆದರ್ಶಳಾದ ಆರ್ಯಪತ್ನಿಯನ್ನು ತ್ಯಜಿಸಿ, ನನ್ನ ಗೆಳೆಯನು ಒಬ್ಬ ಯಃಕಶ್ಚಿತ್ ಹೆಂಗಸಿಗೆ ಮರುಳಾದದ್ದು ನನಗೆ ಅತ್ಯಂತ ಸಂತಾಪವನ್ನುಂಟುಮಾಡಿತು. ನನ್ನ ಮಿತ್ರನಾದರ ಅಂಥ ಉಲ್ಲೂ, ಉಡಾಳ ಇಲ್ಲವೆ ನೀಚವೃತ್ತಿಯವನಿರಲಿಲ್ಲ. ಆತನ ನೈತಿಕ ಕಲ್ಪನೆಗಳೂ ಕೋಮಲ ಭಾವನೆಗಳೂ ನನಗೆ ಚೆನ್ನಾಗಿ ಗೊತ್ತಿದ್ದವು. ಅದರಿಂದಂತೂ ನನಗೆ ಆತನ ಆ ವೃತ್ತಿಯ ಬಗ್ಗೆ ದೊಡ್ಡ ಗೂಢವೇ ಬಿದ್ದಿತು. ಅತ್ತಿಗೆಯವರು ಮಾತಿಗೆ ಮಾತು ತೆಗೆದು ಆತನ ಆ ಬಗೆಯನ್ನೆಲ್ಲ ನನಗೆ ಯಾವಾಗ ತಿಳಿಸಿದರೋ, ಆಗ ನಾನು ಅವರಿಗೆ 'ನೀವು ಇದುವರೆಗೆ ನನಗೆ ಇದನ್ನೇಕೆ ತಿಳಿಸಲಿಲ್ಲ?' ಎಂದು ಕೇಳಿದೆನು. ಅದಕ್ಕೆ ಅವರು: 'ಎಷ್ಟೋ ದಿನಗಳಿಂದ ನಾನಿದನ್ನು ತಿಳಿಸತಕ್ಕವಳಿದ್ದೆನು; ಆದರೆ ತಕ್ಕ ಸಂಧಿಯೇ ದೊರೆತಿರಲಿಲ್ಲ' ಎಂದು ಹೇಳಿದ ಉತ್ತರವನ್ನು ಕೇಳಿ, ಅವರ ಸಹನಶೀಲ ವಿನಯದ ಬಗ್ಗೆ ನನಗೆ ಕನಿಕರವೆನಿಸಿತು. ನಾನು ಅಂದೇ ನನ್ನ ಮಿತ್ರನನ್ನು ಏಕಾಂತದಲ್ಲಿ ಕಂಡು ಅವನಿಗೆ ಚೆನ್ನಾಗಿ ಅಂದು ಫಜೀತಿ ಪಡಿಸಿದೆನು. ಮೈತ್ರಿಯ ಸಂಬಂಧವನ್ನು ಹರಿದು ಬಿಡುವ ಬೆದರಿಕೆ ತೋರಿಸಲು, ಆತನು ಕಕ್ಕಾವಿಕ್ಕಿಯಾಗಿ ತೀರ ಕಂಗೆಟ್ಟವನಂತೆ ತೋರಹತ್ತಿದನು. 'ಈತನಿನ್ನೂ ಮನುಷ್ಯತ್ವವನ್ನು ತೊರೆದಿಲ್ಲ! ಮೈತ್ರಿಯನ್ನು ಹರಿದುಬಿಟ್ಟರೆ ಈತನು ಮನುಷ್ಯತ್ವವನ್ನು ತೊರೆಯು

ಲಿಕ್ಕೆ ಈತನಿಗೆ ತಡಹಿಡಿಯಲಿಕ್ಕಿಲ್ಲ. ಮೈತ್ರಿಯ ಗುಣದಿಂದ ಇಂದಿಲ್ಲ ನಾಳೆ ಅಧಃಪಾತದ ತಳದಿಂದ ಈತನನ್ನು ಮೇಲಕ್ಕೆಳಕೊಳ್ಳಬಂದೀತು. ಎಂದು ನನಗನಿಸಿತು. ಕೂಡಲೆ ನನ್ನ ಅರ್ಧಸಿಟ್ಟು ಶಾಂತವಾಯಿತು. ನಾನು ಸೋತದ್ದನ್ನು ತೋರಿಸುವ ಮೊದಲೇ ಆತನು ಸಹಜವಾಗಿಯೇ ನುಡಿದನು: --

‘ಗೆಳೆಯಾ, ಸತ್ಯಕಥೆಯನ್ನು ತಿಳಿಸಿದರೆ ನಿನಗದು ಸಮ್ಮತವಾಗಲಿಕ್ಕಿಲ್ಲ; ಆದರೆ ನಿಜವಾಗಿ ಹೇಳುವುದೆಂದರೆ, ನನ್ನ ಹೆಂಡತಿಯಲ್ಲಿ ಜೀವಂತತನವೇ ಇಲ್ಲ. ಇದಕ್ಕೂ ಸ್ಪಷ್ಟವಾಗಿ ಹೇಳಲೊ? ಆಕರ್ಷಕ ಸ್ತ್ರೀತ್ವವೇ ಇವಳಲ್ಲಿಲ್ಲ. ಅದರಲ್ಲಿ ನನ್ನ ದೋಷವಂತೂ ಇದ್ದೇ ಇದೆಯೆಂದು ನಾನೇ ಒಪ್ಪಿಕೊಳ್ಳುತ್ತೇನೆ. ಅಂತೆಯೇ ನಾನವಳ ಅವಹೇಲನೆಯನ್ನೆಂದೂ ಮಾಡಿರುವುದಿಲ್ಲ.’

ಆತನ ಈ ಉತ್ತರವು ನನಗೆ ಚಮತ್ಕಾರದ್ದಂತೂ ಅನಿಸಿಯೇ ಅನಿಸಿತು; ಅಲ್ಲದೆ ಆತನು ಅತ್ತಿಗೆಯೊಡನೆಯೂ ಹುಡುಗರು-ಹುಪ್ಪಡಿಗಳೊಡನೆಯೂ ಮನೆಯಲ್ಲಿ ಹೆಚ್ಚಾಗಿ ಪ್ರೇಮಲತನದಿಂದಲೂ ಆನಂದದಿಂದಲೂ ಕೇವಲ ಮುಂಚಿನಂತೆಯೇ ವರ್ತಿಸುತ್ತಿದ್ದನೆಂಬದನ್ನು ಅಲ್ಲಗಳೆಯುವಂತಿರಲಿಲ್ಲ. ಮಿತ್ರನು ಹೊರಡಿಸಿದ ಆ ಉದ್ಗಾರಗಳ ದುರ್ಬೀಣಿಯೊಳಗಿಂದ ನಾನು ಅತ್ತಿಗೆಯ ಕಡೆಗೆ ನಿರುಕಿಸಿ ನೋಡಹತ್ತಿದೆನು. ಮೆಲ್ಲಮೆಲ್ಲನೆ ಏನಾದರೂ ಬೇರೆ ದೃಶ್ಯವು, ಯಾವಳಾದರೂ ಬೇರೊಬ್ಬ ಹೆಂಗಸು, ಎಂಥದಾದರೂ ಭಿನ್ನವೇ ಆದ ಸಂಸಾರ ಇವುಗಳನ್ನು ನಾನು ನೋಡುತ್ತಿರುವ ಹಾಗೆ ಅನಿಸಿತು. ನಮ್ಮ ಅತ್ತಿಗೆಯವರು ಇಷ್ಟು ಸುಂದರ, ಕೆಂಪು ಮತ್ತು ನಯನ ಮನೋಹರರಾಗಿದ್ದರಿಂದ ನಾನು ಇದುವರೆಗೂ ಅವರನ್ನೊಂದು ಸುಂದರ ಪ್ರತಿಮೆಯೆಂದೇ ತಿಳಿಯುತ್ತಿದ್ದೆನು; ಮತ್ತು ಅವರು ಇಂದು ನಿಜವಾಗಿಯೂ ಯಾವದೊಂದು ಅತ್ಯಂತ ಸುಂದರ ಸಂಗಮರವರೀ ಪುತ್ತಳಿಯಂತೆ ಕಂಡರೂ ಕೇವಲ ನಿರ್ಜೀವರಾಗಿ ತೋರತೊಡಗಿದರು. ಅವರ ಪತಿಸೇವೆ, ಅವರ ವ್ಯವಹಾರಕೌಶಲ್ಯ ಇವೆಲ್ಲ ತೀರ ದೋಷರಹಿತವಾದವುಗಳೇನೋ ನಿಜ; ಆದರೆ ಅವುಗಳಲ್ಲಿ ಹುಮ್ಮಸವೇ ಕಾಣಿಸುತ್ತಿರಲಿಲ್ಲ. ಆ ಪುಟ್ಟ ಸಂಸಾರದ ವಾತಾವರಣವು ಶುದ್ಧವೂ ಸಾತ್ವಿಕವೂ ಆಗಿದ್ದರೂ ಅದರಲ್ಲಿ ಅತ್ತಿಗೆಯ ಆಕರ್ಷಕ ನಡವಳಿಕೆಯ ಉಲ್ಲಾಸವಾಗಲಿ ಹುರುಪಾಗಲಿ ಇರದ್ದರಿಂದ ಅದು ಉದಾಸವೂ ಆತಂಕಯುಕ್ತವೂ ತೋರತೊಡಗಿತು. ಅತ್ತಿಗೆಯ ವರ್ತನದಲ್ಲಿ ಅತಿ ಗಾಂಭೀರ್ಯ, ಅತಿ ಸಹನಶೀಲತೆ ಹಾಗು ಅತ್ಯಂತ ವಿನಯ

ಶೀಲತೆಯಿರುವದರಿಂದ ನನ್ನ ಮಿತ್ರನದಷ್ಟೇ ಅಲ್ಲ, ಆತನ ಸಣ್ಣ ಹುಡುಗರದೂ ಆಟಗ ಳತನವು ಅಲ್ಲಿಂದಲ್ಲೇ ಹೆಪ್ಪುಗಟ್ಟಿಬಿಡುತ್ತಿತ್ತು. ಅತ್ತಿಗೆಯ ನಿರ್ದೋಷ ಸಾತ್ವಿಕತನವೂ ಅವರ ಪುಟ್ಟ ಸಂಸಾರದ ಗಂಭೀರ ವಾತಾವರಣವೂ ಕೋಪಿ-ಷ್ಟ ಕಾರ್ತಿಕ ಸ್ವಾಮಿಯ ಸಮಾಧಿ ದರ್ಶನಕ್ಕೆ ಅಂಜುತ್ತಂಜುತ್ತ ಹೋಗು ವವರ ಅಂತಃಕರಣದಂತೆ ತೋರುತ್ತಿದ್ದವು. ಅತ್ತಿಗೆಯಲ್ಲಿ ರೇಗಿಗೇಳುವದು, ವಿನೋದ, ಸಿಟ್ಟು-ಸೆಡವು, ಹುಡುಗಾಟಿಕೆ, ಕೆಣಕಿಸಿ ಅನ್ನುವದು, ಚಂಚ ಲತ್ವ, ಒನಪು-ಒಯ್ಯಾರ ಇವೆಲ್ಲ ಇದ್ದಿದ್ದರೆ ಆ ಎಲ್ಲ ಮಾಟದೊಡನೆ ಹೆಚ್ಚುವ ವಜ್ರದ ಹೊಳಪಿನಂತೆ ಅವರು ಆಕರ್ಷಕರಾಗಿ ತೋರಬಹುದಿತ್ತು; ಮತ್ತು ನನ್ನ ಮಿತ್ರನು ಅವರ ಆ ತೇಜೋವಲಯದ ಸುತ್ತಲೂ ಪತಂಗದಂತೆ ಆಜನ್ಮ ತಿರುಗಬಹುದಿತ್ತು ಎಂದು ಸನ್ನಷ್ಟಕ್ಕೆ ನನಗೇ ಅನಿಸಹತ್ತಿತು. ನನ್ನ ಮಿತ್ರನಿಗೆ ಯಾವ ಜೀವಂತತನವು, ಆಕರ್ಷಕ ಸಜೀವತೆಯು ಬೇಕಿದ್ದಿತೋ, ಅದನ್ನು ನಮ್ಮ ಅತ್ತಿಗೆಗೆ ತೋರಿಸಲಾಗಲಿಲ್ಲ. ಅದರಿಂದ ಆ ಜೀವಂತತನವು ಎಲ್ಲಿ ಕಂಡಿತೋ ಅತ್ತ ಆತನು ಧಾವಿಸುತ್ತ ನಡೆದನು. ಅದರಲ್ಲಿ ನನ್ನ ಗೆಳೆಯನ ಉಸ್ಲೂತನವಿದ್ದರೂ ಅದಕ್ಕೆ ನಮ್ಮ ಅತ್ತಿಗೆಯ ವರ್ತನವೇ ಕಾರಣವು.

ನನ್ನ ಮಿತ್ರನ ಪ್ರವೃತ್ತಿ ಮತ್ತು ಅತ್ತಿಗೆಯ ಈ ವೃತ್ತಿ ಇವು ಅಪ-ವಾದಾತ್ಮಕಗಳಿರದೆ ಸಾರ್ವತ್ರಿಕ ಕಂಡು ಬರುವ ಪರಿಸ್ಥಿತಿಯಾಗಿವೆ. ಹೊರ ಚಾಳಿಯ ಬಹುತರ ಗಂಡಸರ ಹೆಂಗಸರು ಸುಸ್ವರೂಪರಷ್ಟೇ ಏಕೆ, ಸುಸ್ವಭಾವಿ ಗಳೂ ಆಗಿರುತ್ತಾರೆ. ಅವರ ಆ ಗುಣಗಳ ಪ್ರತಿಫಲವು ಅವರ ಗಂಡಂದಿರಿಂದ ಹೀಗೆ ದೊರಕುವದು ದುರ್ದೈವವಂತೂ ಸರಿಯೇ; ಆದರೆ ಅದಕ್ಕೂ ಕೆಲ ವ್ಯಾವಹಾರಿಕ ಕಾರಣಗಳಿದ್ದೇ ಇವೆ ಆ ಕಾರಣಗಳಾವವು? ಮತ್ತು ಅವು ಗಳಿಗೆ ಉಪಾಯಗಳೇನು? ಇದನ್ನು ಪ್ರತಿಯೊಬ್ಬ ಸಂಸಾರೀ ಸ್ತ್ರೀಯು ಅರಿತುಕೊಳ್ಳುವುದು ಅವಶ್ಯವಾಗಿದೆ.

ಗಂಡನು ಎಷ್ಟೇ ಸುಸಂಸ್ಕೃತನಾದರೂ ಆತನ ಅಲ್ಪ ಸ್ವಲ್ಪ ಪ್ರಕೃತಿ ಧರ್ಮಗಳು ಹಟದಿಂದ ಆತನ ರೋಮ-ರೋಮಗಳಲ್ಲಿ ತುಂಬಿಕೊಂಡು ಬಿಟ್ಟಿರುತ್ತವೆ ಗಂಡಸಿಗೆ ಸ್ತ್ರೀಯ ಸೌಂದರ್ಯದ ಮೋಹವು ಅನಿವಾರ ವಾಗಿರುತ್ತದೆ. ಈ ವಿಷಯದಲ್ಲಿ ಮನುಷ್ಯನು ಇತರ ಪ್ರಾಣಿಮಾತ್ರರನ್ನು ಮೀರಿರುತ್ತಾನೆಂದು ಬೇಕಾದರೆ ಅನ್ನಬಹುದು; ಆದರೆ ಕೇವಲ ಸುಸಂಸ್ಕೃತ,

ಸಾದಾ, ಪ್ರೌಢ ಪುರುಷನನ್ನು ನೋಡಿದರೂ ಆತನಿಗೆ ಸ್ತ್ರೀಸೌಂದರ್ಯದೊಳಗಿನ ಶಾರೀರಿಕ ಸೌಂದರ್ಯ ಮತ್ತು ಬೌದ್ಧಿಕ ಸೌಂದರ್ಯ ಇವುಗಳ ಬೆರಿಕೆಯು ಹೆಚ್ಚು ವಿಲೋಭನೀಯವಾಗಿ ಅನಿಸುತ್ತದೆ. ಗಂಡಸಿನಲ್ಲಿ ಹೆಚ್ಚು-ಕಡಿಮೆ ಪ್ರಮಾಣದಲ್ಲಿ ವಿನೋದೀ ವೃತಿಯು ಇದ್ದೇ ಇರುತ್ತದೆ; ಅದರಿಂದ ತನ್ನಂತಹ ಬೇರೆ ವಿನೋದೀ ಗೆಳತಿಯು ದೊರೆತ ಕೂಡಲೆ ಅವನ ಮನಸ್ಸು ಆಕೆಯೊಡನೆ ಸಲ್ಲಗ್ನವಾಗಿ ಹೋಗುತ್ತದೆ. ಆ ವಿನೋದೀ ವೃತ್ತಿಯಿಂದಲೇ ಇನ್ನೊಬ್ಬಳ ಮೇಲೆ ಏರಿ ಹೋಗುವ ಹುಮ್ಮಸವು ಅವನಿಗೆಷ್ಟಿರುತ್ತದೋ ಅಷ್ಟೇ ಆ ಇನ್ನೊಬ್ಬಳಿಂದ ತನ್ನ ಮೇಲೆ ದಾಳಿಯಾಗಬೇಕೆಂದು ಅವನ ಬಲವಾದ ಅಪೇಕ್ಷೆಯಿರುತ್ತವೆ. ಪೈಲವಾನನು ಹೇಗೆ ದುರ್ಬಲರ ಹಾದಿಗೆ ಹೋಗುವದಿಲ್ಲವೋ ಅದರಂತೆಯೇ ಅವನು ಅವರನ್ನು ಮಿತ್ರರೆಂದು ತಿಳಿದು ಅವರೊಡನೆ ಸಂಬಂಧವನ್ನೂ ಬಳೆಸುವದಿಲ್ಲ. ತುಲ್ಯಬಲ-ಅದು ಬುದ್ಧಿಯದೇ ಇರಲಿ, ದೇಹದ್ದೇ ಇರಲಿ, ಶೌರ್ಯದ್ದೇ ಆಗಲಿ ಇಲ್ಲವೆ ಯುಕ್ತಿಯದೇ ಆಗಲಿ-ಎಂಬದು ಮೈತ್ರಿಯ ಅಧಿಷ್ಠಾನವಿರುತ್ತದೆ. ಸಾಮರ್ಥ್ಯದ ಆ ಸಮಾನ ಧರ್ಮವೆಂದರೇ ಸ್ನೇಹದ ಅಭಂಗ ಕೊಂಡಿಯು. ಗಂಡಸು ನಾವೀನ್ಯದ ಸವಿಗಾರ; ಮತ್ತು ಉನ್ಮಾದಕ ವೈಚಿತ್ರ್ಯದ ಭೋಕ್ತಾರನಿರುತ್ತಾನೆ. ಆತನನ್ನು ಬೌದ್ಧಿಕ ಸೌಂದರ್ಯವು ಒಂದಿಷ್ಟು ಸ್ತಿಮಿತನನ್ನಾಗಿ ಮಾಡುತ್ತಿರುವದೇನೋ ನಿಜವು; ಆದರೆ ಆತನ ಆಕಾಂಕ್ಷೆಗಳು ಕೊನೆಗೆ ಶರೀರ ಸೌಂದರ್ಯದ ಮೇಲೆಯೇ ಲುಬ್ಧವಾಗುತ್ತವೆ. ಸ್ತ್ರೀಯ ಬಗ್ಗೆ ಪುರುಷನ ಪ್ರವೃತ್ತಿಯು ಹೀಗಿರಲು, ಯಾವ ಸ್ತ್ರೀಯು ಆತನ ಆ ಪ್ರವೃತ್ತಿಗಳನ್ನು ಯುಕ್ತಿಯಿಂದ ಕಾಪಾಡುವಳೋ ಆತನು ಅವಳ ಸ್ವಾಧೀನದಲ್ಲಿರುತ್ತಾನೆ ಅಂಥವಳು ಲಗ್ನದ ಹೆಂಡತಿಯೇ ಇರಲಿ ಇಲ್ಲವೆ ಲಗ್ನವಿರಹಿತಳಾದ ಗೆಳತಿಯೇ ಇರಲಿ. ಗಂಡಸು ಹೆಚ್ಚು ವಿವೇಕಿಯಿದ್ದರೆ, ಆತನನ್ನು ಇಕ್ಕಟ್ಟಿನಲ್ಲಿ ಒತ್ತಿಕ್ಕಿಡುವಂಥ ಪರಿಸ್ಥಿತಿಯಿದ್ದರೆ, ಆತನು ದಾರಿದ್ರ್ಯದ ಇಲ್ಲವೆ ಧ್ಯೇಯದ ಚಿಂತೆಯಲ್ಲಿ ಗರ್ಕನಾದರೆ ಅಂಥವನು ಎಂಥ ಹೆಂಡತಿಯೊಡನೆಯೂ ಸಂಸಾರ ಯಾತ್ರೆಯನ್ನು ಬೊಬ್ಬಾಟವಿಲ್ಲದಂತೆ ಸಾಗಿಸುತ್ತಿರುತ್ತಾನೆ; ಆದರೆ ಗಂಡಸಿನವೆಂದು ಯಾವ ಗುಣಧರ್ಮಗಳಿರುವವೋ ಅವು ತೃಪ್ತಗಳಾಗದ್ದರಿಂದ, ಆ ಸದ್ವರ್ತನದ ಗಂಡಸೂ ಒಳಗಿಂದೊಳಗೆ ದುಃಖಪಡುತ್ತಿರುತ್ತಾನೆ. ಗಂಡಸರು ತಾಳಗೆಡಬಾರದು, ತಾಳಗೆಟ್ಟವರು ಹಿಂದಿರುಗಬೇಕು ಮತ್ತು ಸಮಂಜಸ

ಆದರೆ ದುಃಖೀ ಪುರುಷರಿಗೆ ಸಂಸಾರದೊಳಗೆ ಉಲ್ಲಸವೆನಿಸಬೇಕು ಎಂದು ವರ್ಣಿಸುವ ಹೊಣೆಯು ಸುಗೃಹಿಣಿಯರ ಮೇಲೆಯೇ ಹೊರುತ್ತದೆ.

ಇನ್ನು ನಮ್ಮ ಸುಗೃಹಿಣಿಯರ ಕಡೆಗೆ ನೋಡಿದರೆ ಅವರು ಗಂಡಂದಿರ ಭಾವನೆಗಳ ಬಗ್ಗೆ ಏನೂ ಪರಿವೆ ಮಾಡದವರು. ಗಂಡನು ತಮ್ಮಲ್ಲಿ ಪ್ರೇಮ ಮಾಡುವದು ಮಕ್ಕಳಾಗುವಷ್ಟೇ ಸೃಷ್ಟಿಕರ್ಮಾಧೀನವಿದೆ, ಪ್ರೇಮದ ಮತ್ತು ಸಂತತಿಯ ಸಮೃದ್ಧಿಯು ಕಾಲಾಧೀನವಾಗಿದೆ ಎಂದು ತಿಳಿಯುವ ಸ್ತ್ರೀಯರೇನೂ ಕಡಿಮೆಯಿರುವದಿಲ್ಲ. ಪಾರಮಾರ್ಥಿಕ, ಧಾರ್ಮಿಕ ವ್ರತ-ವೈಕಲ್ಯಗಳು, ಪುರಾಣ-ಕೀರ್ತನಗಳು ಇವುಗಳ ಹವ್ಯಾಸಕ್ಕೆ ಬಿದ್ದು ಹಿಂದಿನ ಸ್ತ್ರೀಯರು ಅಕಾಲದಲ್ಲೇ ಪ್ರೌಢರಾಗಿ ವೈರಾಗ್ಯವು ಪ್ರಾಪ್ತವಾದಂತೆ ಮಾಡಹತ್ತಿದ್ದರೆ, ಸುಶಿಕ್ಷಿತ ಸ್ತ್ರೀಯರು ತೀರ ಆಲಸ್ಯದಿಂದ ಉದಾಸೀನರಾಗಿ ಬಿಡುತ್ತಾರೆ. ಗಂಡನಿಗೆ ಉತ್ತೇಜನವ, ಉಲ್ಲಾಸದ, ಹುರುಪಿನ ಅವಶ್ಯಕತೆಯಿರುವದೆಂಬ ಬಗ್ಗೆ ಅವರಿಬ್ಬರೂ ಕ್ವಚಿತ್ತಾಗಿಯೇ ಯೋಚಿಸುತ್ತಿರಬಹುದು. ಎಲ್ಲಕ್ಕಿಂತಲೂ ಹೆಚ್ಚು ಅನಾಸ್ಥೆಯನ್ನು ತೋರಿಸುವ ಒಂದೇ ಒಂದಾದ ವ್ಯಕ್ತಿಯೆಂದರೆ ಆ ಗಂಡನು! ಹೆಚ್ಚು ಹಟವಾದಿತನ, ವಿತಂಡ ವಾದ, ನಿಷ್ಠೂರ ಕಾರಭಾರೀತನ ಇವುಗಳನ್ನೆಲ್ಲ ತೆರೆಯಿಸತಕ್ಕ ಸ್ಥಳವೆಂದರೆ ಆ ಗಂಡನು! ಯಾಕಂದರೆ ಅವರ ಅಂಥ ಆ ಜಂಜಡ-ಬಡಿವಾರಗಳನ್ನು ಬೇರೆಯವರೇತಕ್ಕೆ ನಡೆಯಗೊಟ್ಟಾರು? ನಮ್ಮಗಳ ಸ್ತ್ರೀಯರಿಗಿನ್ನೂ ಸಂಸಾರಶಾಸ್ತ್ರವೆಂದರೇನೆಂಬುದು ಗೊತ್ತೇ ಇಲ್ಲವೆಂದೆನಿಸುತ್ತದೆ. ಮಕ್ಕಳು ಮರಿಗಳನ್ನುಂಟುಮಾಡುವುದೇನೂ ಸಂಸಾರದ ಮೇರೆಯಲ್ಲ; ಮತ್ತು ಅದು ಸಂಸಾರಸುಖದ ಗಮಕವಂತೂ ಅಷ್ಟೇ ಅಲ್ಲ. ಆದ್ದರಿಂದ ನಾಲ್ಕು ಮಂದಿ ಮಕ್ಕಳಾದರೆಂದರೆ ಪ್ರಪಂಚದೊಳಗಿನ ಇತಿ ಕರ್ತವ್ಯವಾಯಿತೆಂದು ಯಾರೂ ತಿಳಕೊಳ್ಳಲಾಗದು. ಎಷ್ಟು ಜನ ಹೆಂಗಸರಿಗೆ ತಮ್ಮ ಗಂಡಂದಿರ ಮನವೊಲಿಸಲಿಕ್ಕೆ ಬರುತ್ತದೆ? ಅಂಥವರು ತೀರ ಅಲ್ಪರೇ ಎಂದೆನ್ನಬಹುದೆಂಬ ಉತ್ತರವು ಪ್ರತಿಯೊಬ್ಬ ಗಂಡಸಿನ ಅಂತಃಕರಣದಲ್ಲಿ ತೊಳಲುತ್ತಿರುವದು ಕಂಡು ಬಂದೀತು. ಇದಕ್ಕೆ ಕಾರಣವೆಂದರೆ, ಗಂಡಸರಲ್ಲಿ ಯಾವ ಪ್ರವೃತ್ತಿಗಳಿರುವವೋ ಆ ಪ್ರವೃತ್ತಿಗಳ ಕಡೆಗೆ ಹೆಂಗಸರು ಎಂದೂ ಇಣಿಕಿ ಕೂಡ ಹಾಕುವದಿಲ್ಲ.

ಪುರುಷನು ಸೌಂದರ್ಯಕ್ಕೆ ಮನಸೋಲತಕ್ಕವನಿರುತ್ತಾನೆ; ಆದರೆ ಸುವ್ಯವಸ್ಥಿತರಾಗಿದ್ದು ಅವರ ಹೆಂಡಂದಿರು ಗಂಡಂದಿರ ಆ ಭಾವನೆಗಳನ್ನು

ಪೋಷಿಸುತ್ತಿರುವರೇನು? ಮನೆಯಲ್ಲಿ ವ್ಯವಹರಿಸುವಾಗಲೂ ಹೊರ ಹೊರಡಲು ಸಿದ್ಧವಾಗಿರುವಂತೆ ಶಿಸ್ತಿನ ಉಡುಪನ್ನು ಅದೆಷ್ಟು ಮಂದಿ ಧರಿಸುತ್ತಾರೆ? ಮನೆಯಲ್ಲಿ ಭಾರೀ ಬೆಲೆಯ ವಸ್ತ್ರಗಳನ್ನುಡುತ್ತಿರಬೇಕೆಂದು ಇದರ ಅರ್ಥವಲ್ಲ. ಸಾದಾ ವಸ್ತ್ರಗಳನ್ನೇ ಶಿಸ್ತಿನಿಂದ ಮೈಗೆ ಹೊಂದಿಕೊಳ್ಳುವಂತೆ ಉಟ್ಟುಕೊಂಡರೂ ಶರೀರದ ಆಕರ್ಷಕತನವು ಎದ್ದು ಕಾಣಿಸುತ್ತದೆ. ಲಗ್ನವಾದ ಬಳಿಕ ಕೆಲ ದಿನಗಳ ವರೆಗೆ ಕಾಣಿಸುವ ಆಕರ್ಷಕತೆಯನ್ನು ನಿತ್ಯದ ಶಿಸ್ತಿನ ವರ್ತನದಿಂದ ಕಾಯ್ದುಕೊಂಡು, ಆ ಮನೋಹರತೆಯಿಂದ ಆಜನ್ಮಪರ್ಯಂತ ಗಂಡನನ್ನು ತನ್ನ ಕೈಗೊಂಬೆಯನ್ನಾಗಮಾಡಬಂದೀತು ಅಚ್ಛೆದಿಂದ ತ್ರಿಯಸ್ಥನ ಒಳಿಯಲ್ಲಿ ವರ್ತಿಸುವದು ಸಾವಿರಪಟ್ಟು ಗರ್ಹಣೀಯವೇ; ಆದರೆ ಗಂಡನೊಡನೆ ಅಚ್ಛದಿಂದ ವರ್ತಿಸುವದು, ಖೊಟ್ಟಿವಿನಯದೋರುವದು ಇವುಗಳು ಕ್ಷಮ್ಯಗಳಷ್ಟೇ ಅಲ್ಲ, ಅತ್ಯಂತ ಆವಶ್ಯಕಗಳೆನಿಸುತ್ತವೆ. ಮಡದಿಯೆಂದರೆ ವಿನಯದಿಂದ ಪ್ರತಿಯೊಂದು ಆಜ್ಞೆಯನ್ನು ಪಾಲಿಸುವ ಆಫೀಸಿನೊಳಗಿನ ಚಪರಾಶಿಯಲ್ಲ; ಅಥವಾ ರೇಗಿಕೊಳ್ಳುವ ಮೇಲಧಿಕಾರಿಯೂ ಅಲ್ಲವೆಂದು ಪ್ರತಿಯೊಬ್ಬ ಪುರುಷನ ಪ್ರವೃತ್ತಿಯಿರುತ್ತದೆ. ಆತನು ಪತ್ನಿಯ ಕಡೆಗೆ ಮಿತ್ರನಂತೆ-ಸಲಿಗೆಯ ನಾತೆಯಿಂದ, ವಿಶ್ರಮಸ್ಥಾನವೆಂದು-ವಿನೋದದ ವೃತ್ತಿಯಿಂದ ನೋಡುತ್ತಾನೆ ಆತನಿಗೆ ತನ್ನ ಮಡದಿಯು ಸುಂದರಿಯಾಗಿ ತೋರಬೇಕು, ಆಕರ್ಷಕಳಾಗಿ ಕಾಣಿಸಬೇಕು, ಅಚ್ಛೆದವಳಿರಬೇಕು ಇತ್ಯಾದಿ. ಸಂಕ್ಷಿಪ್ತವಾಗಿ ಹೇಳುವುದೆಂದರೆ ಮೋಹಕಳಾಗಿರಬೇಕು ಎಂದೆನಿಸುತ್ತದೆ ಅದರಂತೆಯೇ ಅವಳು ಗೆಳೆಯನಂತೆ ವಿನೋದಿವೃತ್ತಿಯುವಳಿರಬೇಕೆಂದೆನಿಸುವದು ಅವಳು ಚೇಷ್ಟೆಮಾಡಬೇಕು, ಚೆಷ್ಟೆಮಾಡಿ ತನ್ನನ್ನು ರೇಗಿಸಬೇಕು; ತನ್ನ ಚೇಷ್ಟೆಯ ವರ್ತನದಿಂದ ಅವಳು ಕೋಪಗೊಂಡಂತೆ ನಟಿಸಬೇಕು; ಮತ್ತು ಕಡೆಗೆ ಅಪಜಯವನ್ನು ಒಪ್ಪಿಕೊಂಡು, ತನ್ನನ್ನು ಜಯಿಸಬೇಕು, ಹೀಗೆಂದು ಅವಳ ಬಗ್ಗೆ ಆತನ ಅಪೇಕ್ಷೆಯಿರುತ್ತದೆ. ಈ ಬಗೆಯಾಗಿ ವರ್ತಿಸುವ ಹೆಂಗಸರೆಷ್ಟು ಜನರಿರುತ್ತಾರೆ? ಪ್ರತಿಯೊಬ್ಬರೂ ಸುಂದರಿಯಾಗಲಿಕ್ಕೆ ಶಕ್ಯವಿರದಿದ್ದರೂ ಸುಂದರಿ ಎಂದು ಕಾಣಿಸಿಕೊಳ್ಳುವದು ಶಕ್ಯವಿರುತ್ತವೆ ಅವಳಲ್ಲಿಯ ನ್ಯೂನಗಂಡಗಳೆಲ್ಲ ಆಕೆಯ ಗಂಡನ ಮನಸಿನೊಳಗಿಂದ ಎಂದೋ ಮರೆಯಾಗಿ ಬಿಟ್ಟಿರುತ್ತವೆ ಬೇರೆಯವರ ಕಣ್ಣಿಗೆ ಕಾಣಿಸದಂತಹ ಅವಳ ಸೌಂದರ್ಯದ ಗೌಪ್ಯವನ್ನು ತೀರ ಕುರೂಪೀ ಸ್ತ್ರೀಯ ಗಂಡನೂ

ತನ್ನ ಅಂತಃಕರಣದಲ್ಲಿ ಸಂತತ ಕಾದಿಟ್ಟಿರುತ್ತಾನೆ. ತನ್ನತನದ ಭಾವನೆ ಮತ್ತು ಆ ಭಾವನೆಗಳ ಸಮರಸತೆ ಈ ಅದೃಷ್ಟವಾದ ಪಾವಡರದಿಂದ ಬಣ್ಣ ಬರೆದಂತಹ ಪತಿ-ಪತ್ನಿಯರು ಪರಸ್ಪರರಿಗೆ ಸುಂದರರಾಗಿ ತೋರುತ್ತಾರೆ; ಬೇಕೆನಿಸುತ್ತಾರೆ; ಆದರೆ ಆ ಸೌಂದರ್ಯವು ಹೆಚ್ಚು ಹೊಳಪಿನದಿರಬೇಕು; ಪುರುಷನ ಆಕರ್ಷಣಕ್ಕೆ ತಕ್ಕ ಸ್ಥಾನವಾಗಿರಬೇಕು; ಅವರೊಳಗಿನ ಮನುಗನ್ನು ಕಂಡು ಅವನಿಗೂ ಕೃತಕೃತ್ಯವೆನಿಸಬೇಕು. ಇಂಥ ಹಲವು ಸಂಗತಿಗಳನ್ನು ಸ್ತ್ರೀಯರು ಮನದಂದರೆ ಅದರಂತೆ ಮಾಡಬಲ್ಲರು; ಆದರೆ ಇದುವರೆಗಂತೂ ಸ್ತ್ರೀಯರು ಈ ಸಂಬಂಧದಲ್ಲಿ ಆಸ್ಥೆಯಿಲ್ಲದವರಾಗಿರುತ್ತಾರೆ.

ಈ ಸೌಂದರ್ಯಸಾಧನದ ಆವೇಶದಲ್ಲಿ ಸ್ತ್ರೀಯರು ವಿನಯವನ್ನು ಮಾತ್ರ ತ್ಯಜಿಸಬೇಕೆಂತಿಲ್ಲ. ತದ್ವಿರುದ್ಧವಾಗಿ ವಿನಯವು ಎಷ್ಟೆಷ್ಟು ಹೆಚ್ಚುವದೋ ಪುರುಷನ ಕುತೂಹಲವು ಆ ಮಾನದಿಂದ ವೃದ್ಧಿಸುತ್ತಲೇ ಹೋಗುತ್ತದೆಂದು ನಿಯಮವಿದೆ. ಸ್ತ್ರೀಯೆಂಬುದು ಸೃಷ್ಟಿಯೊಳಗಿನದೊಂದು ಗೂಢವಿದೆ. ಅದನ್ನರಿತುಕೊಳ್ಳಬೇಕೆಂದು ಗಂಡಸಿನ ಮಹತ್ವಾಕಾಂಕ್ಷೆಯಿರುತ್ತದೆ. ಆ ಮಹತ್ವಾಕಾಂಕ್ಷೆಯನ್ನು ವಿನಯದ ತೆರೆಯಿಂದ ಅತೃಪ್ತವಿರಿಸಿ, ಎಷ್ಟು ಹೆಚ್ಚಿಸ ಬಂದೀತೋ ಅಷ್ಟು ಗಂಡಸಿನಲ್ಲಿಯ ಸ್ತ್ರೀವಿಷಯಕ ಆಸಕ್ತಿಯು ಹೆಚ್ಚುತ್ತ ಹೋಗುತ್ತದೆ. ಕುತೂಹಲವು ಪೂರ್ಣಗೊಂಡರೆ ಅವನಿಗೆ ಆಕೆಯ ಬಗ್ಗೆ ಆಗಲೆ ತಿರಸ್ಕಾರವುಂಟಾಗುತ್ತದೆ. ಆದ್ದರಿಂದ ವಿನಯದ ಬೆಲೆಯು ಎಷ್ಟು ಅಮೂಲ್ಯವಿದೆಯೆಂಬದನ್ನು ಚತುರ ಚದುರೆಯರು ತಿಳಿದುಕೊಂಡಾರು. ಆ ವಿನಯವು ತೀರ ಸಣ್ಣ-ಪುಟ್ಟ ಸಂಗತಿಗಳಲ್ಲಿಯೂ ತೋರಬೇಕಾಗುತ್ತದೆ. ಹಿಂದಿನ ಸ್ತ್ರೀಯರ ಕೆಲ-ಕೆಲವು ವಿನಯದ ನಿಯಮಗಳು ಈ ವೃತ್ತಿಗೆ ಅತ್ಯಂತ ಪೋಷಕಗಳಾಗಿರುತ್ತವೆ. ಹೆಂಡತಿಯು ಗಂಡನೆದುರಿಗೆ ಮೋರೆ ತೊಳೆಯುವದು, ಮೈತೊಳೆಯುವದು, ಹೆಳಲು ಹಾಕಿಕೊಳ್ಳುವದು, ಅಡ್ಡಹಚ್ಚಿಕೊಂಡು ಅಡ್ಡಾಡುವದು, ಕುಪ್ಪುಸ ತೊಟ್ಟುಕೊಳ್ಳದೆ ಎಡತಾಕುವದು ಇವುಗಳನ್ನೆಲ್ಲ ಅವರು ವರ್ಜ್ಯವೆಂದು ತಿಳಿಯುತ್ತಿದ್ದರು. ಈ ನಿಯಮಗಳು ಅತ್ಯವಶ್ಯ ಪಾಲಿಸತಕ್ಕವುಗಳಾಗಿವೆ ಗಂಡಸಿನ ಸೌಂದರ್ಯೋಪಾಸಕ ದೃಷ್ಟಿಗೆ ಸೀರೆ-ಕುಪ್ಪುಸಗಳ ಮರೆಯಲ್ಲಿ ಬಚ್ಚಿಟ್ಟ ವಿದ್ರೂಪವು ಒಂದಿಷ್ಟು ಕಾಣಿಸಿಕೊಂಡರೂ ಅವನಿಗೆ ಅವಳ ಬಗ್ಗೆ ತಿರಸ್ಕಾರವುಂಟಾದೀತು. ಆದರ್ಶ ಸೌಂದರ್ಯದ ವಿದ್ರೂಪತೆಯು ಆತನಿಗೆ ಕಂಡೀತು; ಹಾಗು ಆತನು ಉದಾಸಗೊಂಡಾನು.

ಶರೀರ ಸೌಂದರ್ಯದಂತೆ ಪ್ರತಿಯೊಬ್ಬ ಸ್ತ್ರೀಯು ಬೌದ್ಧಿಕ ಸೌಂದರ್ಯ ಸಾಧನವನ್ನು ಅವಶ್ಯವಾಗಿ ಮಾಡಬೇಕು ವಿನೋದ, ಹಾಸ್ಯ ಈ ಕೇವಲ ಆಹ್ಲಾದವೀಯುವ ಸಾಧನಗಳನ್ನು ತಕ್ಕೊಂಡರೂ ಸಾತ್ವಿಕ ಮತ್ತು ಉದಾರ ವಿಚಾರಗಳಿಂದಲೇ ಬುದ್ಧಿಗೆ ನಿಜವಾದ ಸೌಂದರ್ಯವುಂಟಾಗುತ್ತದೆ. ಹೆಂಡತಿಯ ವಿಚಾರಗಳು ಉಚ್ಚವಾಗಿದ್ದರೆ ಗಂಡಸಿಗದೊಂದು ದೊಡ್ಡ ಆಧಾರವೇ ಅನಿಸುತ್ತದೆ ಅವನು ಆಕೆಯ ಪೂಜಕನೇ ಆಗುತ್ತಾನೆ ಯಾವ ವಿಚಾರಗಳ ದೊಡ್ಡಿಸ್ತಿಕೆಯು ಅವನಿಗೆ ವಿದ್ಯೆಯಿಂದಲೂ ಸಾಧ್ಯವಾಗಿರುವದಿಲ್ಲವೋ ಅದು ತನ್ನ ಪತ್ನಿಯಲ್ಲಿ ಹುಟ್ಟುಗುಣವಾಗಿರುವದನ್ನು ಕಂಡು ಗಂಡಸು ಸ್ತ್ರೀಹೃದಯದ ಪಾವಿತ್ರ್ಯದ ಬಗ್ಗೆ ಪ್ರಶಂಸೆ ಮಾಡುತ್ತಾನೆ. ಸಂಕಟದ ಇಲ್ಲವೆ ಅಡಚಣೆಯ ಪ್ರಸಂಗದಲ್ಲಿ ಆದಕ್ಕೆ ದಾಸಾನುದಾಸನಾಗುತ್ತಾನೆ. ತದ್ವಿರುದ್ಧವಾಗಿ ಕ್ಷುದ್ರ ವಿಚಾರದ ಸ್ತ್ರೀಯ ಬಳಿಯಲ್ಲಿ ಗಂಡನು ತನ್ನ ಮನೋಗತವನ್ನು ಒಡನುಡಿಯಲಿಕ್ಕೆ ಕೂಡ ಸಿದ್ಧನಿರುವದಿಲ್ಲ. ಆತನ ನಂಬಿಗೆಯ ನಿವಾಸಸ್ಥಾನವಾಗುವ ಯೋಗ್ಯತೆಯು ಯಾವದಾದರೂ ಇದ್ದರೆ, ಸುಬುದ್ಧ ಮತ್ತು ವಿಚಾರೀ ಪತ್ನಿಯದೇ ಅದು. ಅಂದಮೇಲೆ ಅಂಥ ಬೌದ್ಧಿಕ ಸೌಂದರ್ಯವನ್ನು ಸ್ತ್ರೀಯರು ಸಂಪಾದಿಸತಕ್ಕದ್ದು. ಸಂಸಾರ ಎಂಬುದೊಂದು ಶಾಸ್ತ್ರವಿದೆ. ಅದನ್ನು ಸರಿಯಾಗಿ ಸಾಗಿಸಲಿಕ್ಕೆ ಕೆಲವು ನಿಯಮಗಳನ್ನು ಪಾಲಿಸಬೇಕಾಗುತ್ತವೆ; ಹಲವು ಕಷ್ಟಗಳನ್ನು ವಹಿಸಬೇಕಾಗುತ್ತದೆ.

ಯಾವನಿಗೆ ಮನೆಯಲ್ಲಿ ಹೊಟ್ಟೆ ತುಂಬ ಸುಗ್ರಾಸವು ಸಿಕ್ಕುವದಿಲ್ಲವೋ ಅವನು ಹೋಟಲ್ಲಿಗೆ ಹೋಗುತ್ತಾನೆ; ಮತ್ತು ಹೊಟಲ್ಲಿನಲ್ಲಿ ಹೊಟ್ಟೆ ತುಂಬ ದೊರಕುವಷ್ಟು ಸಾಧನವಿರುವದಿಲ್ಲೆಂದು ಸುಗ್ರಾಸ ಭೋಜನದ ಲಾಲಸೆಯಿಂದ ಆತನು ಆಜನ್ಮ ಹೊಟಲ್ಲಿಗೇ ಹೋಗುತ್ತಿರುತ್ತಾನೆ. ಯಾವನ ಹೆಂಡತಿಯು ಆತನ ಭಾವನೆಗಳ ಜೋಪಾಸನವನ್ನು ಮಾಡುವದಿಲ್ಲವೋ, ಅಂಥ ಗಂಡನು ಮನೆಯಿಂದ ಹೊರಬಿದ್ದು ಸುಖದ ಸಾಧನಗಳನ್ನು ಹುಡುಕಹತ್ತುತ್ತಾನೆ. ಹೊಟಲ್ಲಿನೊಳಗಿನ ಜೀನಸುಗಳಲ್ಲಿ ಸ್ವಚ್ಛತೆ, ಸಾತ್ವಿಕತೆಗಳೆಲ್ಲಿರಬೇಕು? ಆದರೆ ಘಮಘಮಿಸುವ ವಾಸನೆ ಮಾತ್ರ ಸಾಕಷ್ಟಿರತ್ತದೆ. ಆದ್ದರಿಂದ ಪುರುಷನು ಮನೆಬಿಟ್ಟು ಹೊರಬಿದ್ದನೆಂದರೆ ಅವನಿಗೆ ಬೇರೆ ದೃಷ್ಟಿಯು ಉಳಿಯುವದಿಲ್ಲ. ನಾವೀನ್ಯದ ಶೋಧನೊಳಗಿಂದ ವೈಚಿತ್ರ್ಯದ ಬಯಕೆಯು ಕೂಡಲೆ ಉಂಟಾಗುತ್ತವೆ; ಮತ್ತು ಯಾವನಿಗೆ ವೈಚಿತ್ರ್ಯದ ವ್ಯಸನವು ಒಮ್ಮೆ

ಹತ್ತಿತೋ, ಆದರಿಂದ ಆತನು ಬಿಡುಗಡೆಯಾಗುವುದು ಕಠಿಣವೇ ಸರಿ. ಆದರಿಂದ ಈ ಪ್ರಶ್ನೆಯು ಉಪೇಕ್ಷಣೀಯವಲ್ಲ.

ಆದರೆ ತಾಳಗೆಟ್ಟ ಗಂಡನು ಮತ್ತೆ ಎಂದೂ ದಾರಿಗೆ ಬರಲಿಕ್ಕಿಲ್ಲೆಂದು ತಿಳಿಯಲಾಗದು. ಅವನನ್ನು ದಾರಿಗೆ ತರಲಿಕ್ಕೆ ತಡ ಹಿಡಿಯುತ್ತದೆ; ಮತ್ತು ಆ ಉಪಾಯಗಳೂ ತುಸ ಭಿನ್ನವಾಗಿವೆ. ಕದ್ದು ತಿನ್ನುವ ಸೊಸೆಗೆ ಹೊಟ್ಟೆ ತುಂಬ ಊಟ ಬಡಿಸಿದರೆ ಕದ್ದು ತಿನ್ನುವ ಅವಳ ಚಾಳಿಯು ಹೋಗುತ್ತದೆ. ಅದರಂತೆಯೇ ತಾಳಗೆಟ್ಟ ಗಂಡನಿಗೆ ಬೇಕಿದ್ದ ರಿಯಾಯತಿಯೂ ಸೌಕರ್ಯವೂ ಮನೆಯಲ್ಲಿ ದೊರಕಹತ್ತಿದರೆ ಆತನ ಆ ವ್ಯಸನವು ಖಂಡಿತವಾಗಿಯೂ ಲುಪ್ತವಾಗುವದು. ಆತನು ಯಾವ ಕಾರಣದಿಂದ ತಾಳಗೆಟ್ಟಿರುವನೋ ಆ ಕಾರಣಗಳನ್ನು ಆತನ ಚತುರ ಹೆಂಡತಿಯು ಹುಡುಕಿ ತೆಗೆಯಬೇಕು; ಮತ್ತು ಅವುಗಳನ್ನು ಪೂರೈಸಿ ಕೊಡಬೇಕು. ಒಬ್ಬನಿಗೆ ವಿನೋದೀ ಸ್ವಭಾವದ ಹೆಂಡತಿಯು ರುಚಿಸುತ್ತಿದ್ದರೆ, ಒಬ್ಬನಿಗೆ ಮಿತಭಾಷಿಣಿಯು ರುಚಿಸುತ್ತಿರಬಹುದು; ಆದರೆ ಗಂಡನ ಆ ಇಚ್ಛಾನಿಚ್ಛೆಗಳನ್ನು ಪೂರೈಸಿಕೊಟ್ಟರೆ ಆತನು ಮತ್ತೆ ಮನೆಯಲ್ಲಿರಹತ್ತುತ್ತಾನೆ. ಇಂಥವನಾದರೂ ಅಂಥ ಗಂಡನ ಹೆಂಡಂದಿರು ಕೆಲ ಉಪಾಯಗಳನ್ನು ಮಾಡಿ ನೋಡುತ್ತಿರುತ್ತಾರೆ; ಆದರೆ ಅವರ ಆ ಉಪಾಯಯೋಜನೆಯು ಸಂಪೂರ್ಣ ವಿಪರೀತವಾಗಿದೆಯೆಂದು ದುಃಖದಿಂದ ತಿಳಿಸಬೇಕಾಗುತ್ತದೆ. ತನ್ನ ಗಂಡನಿಗೆ ಆತನ ಗೆಳತಿಯು ಮೇಲಿಂದ ಕೆಣಕಿಸಿ ಮಾತನಾಡಹತ್ತಿದರೆ ಆತನು ಹೆಚ್ಚಾಗಿ ರೇಗುತ್ತಾನೆ. ಗಂಡನು ತನ್ನ ಅಪರಾಧವನ್ನು ತನ್ನ ಬಂಧು-ಬಾಂಧವರಿಂದ, ಮಕ್ಕಳು ಮರಿಗಳಿಂದ, ನೆರೆಹೊರೆಯವರಿಂದ ಬಚ್ಚಿಡುವ ಪರಾಕಾಷ್ಠೆಯನ್ನು ಮಾಡುತ್ತಿರುತ್ತಾನೆ; ಆದರೆ ರೇಗಿನಿಂದ ಮೈಮೇಲೆ ಎಚ್ಚರವಿಲ್ಲದ ಆತನ ಹೆಂಡತಿಯೇ ಅವರೆಲ್ಲರಿಗೆ ಆತನ ಆ ಪಾಪವನ್ನು ಹೇಳುತ್ತ ನಡೆದರೆ, ಎಲ್ಲರೆದುರು ಆತನ ನೀರಿಳಿಸಹತ್ತಿದರೆ ಗಂಡನೂ ರೇಗಿಬಿಡುತ್ತಾನೆ; ನಿರ್ಲಜ್ಜನಾಗುತ್ತಾನೆ. ಬಹಿರಂಗದಲ್ಲಿ ಅವನು ಹೆಂಡತಿಯ ತಲೆಯನ್ನೊಡೆಯದಿದ್ದರೂ ಅವಳ ಬೊಗಳುವಿಕೆಯಿಂದ ಆತನ ಮನಸ್ಸಿನಲ್ಲಿನದೊಂದು ಉಬ್ಬೆಯು ಹೆಚ್ಚುಹತ್ತುತ್ತದೆ. ಇಂಥ ಭಾವನಾಶೂನ್ಯ, ತನ್ನನ್ನು ಮರ್ಯಾದೆಗೇಡು ಮಾಡುತ್ತಿರುವ ಹೆಂಡತಿಯನ್ನು ನಂಬಕೂಡದೆಂದು ಆವನು ತನ್ನ ಮನಸ್ಸಿನಲ್ಲಿ ದೃಢಪಡಿಸಿಕೊಳ್ಳುತ್ತಾನೆ; ಮತ್ತು ಅಂದಿನಿಂದ ಆ ಪತಿ ಪತ್ನಿಯರೊಳಗಿನ ವಿತುಷ್ಟತೆಯು ಪ್ರಮಾಣವು ಒಂದೇಸವನೆ

ಬೆಳೆಯುಹತ್ತುತ್ತದೆ ಆದ್ದರಿಂದ ತಾಳಗೆಟ್ಟಗಂಡಸರನ್ನು ದಾರಿಗೆ ತರುವದಿದ್ದರೆ ಅವರಿಗೆ ಅವರ ಅಪರಾಧದ ಗುರ್ತು ಕೂಡ ಕೊಡಬಾರದು. ಅವರನ್ನು ಮೊದಲಿನಷ್ಟೇ ಆದರಿಸುತ್ತಿರಬೇಕು. ಅಂಥ ಗಂಡಸಿನ ಹೆಂಡತಿಯು ಅವನ ವಿಶ್ವಾಸದ ಆಗರವಾಗಿರಲಿಕ್ಕೆ ತಪ್ಪಬಾರದು. ಆತನ ಅಪರಾಧದ ಬಗ್ಗೆ ತಾನಾಗಿ ಮಾತಾಡಲೇ ಕೂಡದು ಆತನು ತಾನಾಗಿ ಆ ಮಾತು ತೆಗೆದರೂ ಕೂಡ ತದ್ವಿರುದ್ಧವಾಗಿ ಸಹಾನುಭೂತಿಯನ್ನೇ ತೋರಬೇಕು. ಅಪರಾಧಿಯಾದವನು ಪಶ್ಚಾತ್ತಾಪದಿಂದ ಒಂದೇಸವನೆ ತಳಮಳಿಸುತ್ತಿರುತ್ತಾನೆ ಸಹಾನುಭೂತಿಯು ಗಾಳಿಯು ಆ ಮೈಯ್ಯುರಿಯನ್ನು ನೊಂದಿಸಲಿಕ್ಕೆಂದೂ ಉದ್ಧಾರಕ್ಕೆಂದೂ ಆತನಿಗೆ ಬೇಕೆ ಬೇಕಾಗಿರುತ್ತದೆ ಆ ಸಹಾನುಭೂತಿಯಿಂದಲೇ ಆತನು ತಾನು ತಪ್ಪಿದ್ದ ದಾರಿಯನ್ನು ಬಿಟ್ಟುಬಿಡುತ್ತಾನೆ. ಮಡದಿಯ ಮನಸ್ಸಿನ ದೊಡ್ಡಿಸ್ತನವನ್ನು ನೋಡಿ ಎಂಥ ಭಯಂಕರ ಪಾಪಿಗೂ ತನ್ನ ಅಪರಾಧವನ್ನು ಒಪ್ಪಿಕೊಂಡು ಕ್ಷಮೆ ಯಾಚಿಸುವ ಇಚ್ಛೆಯುಂಟಾಗುತ್ತದೆ; ಆದರೆ ಅವೆಲ್ಲ ಯಾವಾಗ? ಹೇಗೆ ವರ್ತಿಸುವದರಿಂದ ಆತನ ಗಂಡಸುತನಕ್ಕೆ ಭರ್ತೃತನಕ್ಕೆ ಕುಂದುಂಟಾಗದಾಗ! ಆದ್ದರಿಂದ ಅಂಥ ಗಂಡಂದಿರ ಹೆಂಡಂದಿರು ಗಾಬರಿಗೊಳ್ಳದೆ ಅವರನ್ನು ದಾರಿಗೆ ತರುವ ಪ್ರಯತ್ನವನ್ನು ಎಡಬಿಡದೆ ಮಾಡುತ್ತಿರಬೇಕು; ಆದರೆ ಪ್ರಯತ್ನಕ್ಕೆ ಸರಿಯಾದ ಉಚಿತ ಹಾಗು ಖಾತ್ರಿಯ ಉಪಾಯಗಳೇ ಇರಬೇಕು.

ಗಂಡಸಿನ ಭಾವನೆಗಳ ಪರಿಚಯವಿರದವಳು ಹಾಗು ಅವುಗಳ ಜೋಪಾಸನೆಯನ್ನು ಮಾಡದವಳೇ ಖಂಡಿತವಾಗಿ ಆತನನ್ನು ಕೆಡಿಸುವವಳು. ಆತನನ್ನು ಮನೆಯವಳು ದೂಡಿಕೊಟ್ಟ ಬಳಿಕ ಅವನು ಹೊರಗಿನವಳ ಕಡೆಗೆ ಹೋದರೆ ಅದರ ದೋಷವು ಮನೆಯವಳದೇ! ಆ ಬಗ್ಗೆ ಹೊರಗಿನವಳನ್ನು ಆಡಿಕೊಳ್ಳುವದರಲ್ಲೇನು ಅರ್ಥವಿದೆ?




ಮುದ್ರಕ:—ಭಿ. ಪ. ಕಾಳೆ, ಶ್ರೀ ಶೇಷಾಚಲ ಪ್ರೆಸ್ಸ, ಆನಂದವನ-ಅಗಡಿ

ಕೆಲ ಹೊಸ ಪುಸ್ತಕಗಳು

## ವೀರರಾಜ ವಿಜಯ

ಬೆಲೆ ೧೨ ಆಣೆ

ಲೇಖಕ: ಶ್ರೀ. ಡಿ. ಎನ್ ಕೃಷ್ಣಯ್ಯ,

ಇದೊಂದು ಕೊಡಗು ಅರಸನ ಬಗ್ಗೆ ಬರೆದ ಐತಿಹಾಸಿಕ ಕಾದಂಬರಿ. ಅಲ್ಲಿಯ ಅರಸನಾದ ವೀರರಾಜನು ಪೆರಿಯಾಪಟ್ಟಣದ ಕೋಟೆಯಲ್ಲಿ ಸೆರೆಯಲ್ಲಿದ್ದದ್ದೂ, ಮುಂದೆ ಅಲ್ಲೇ ಎಷ್ಟೋ ದಿವಸ ಅವನೂ ಅವನ ಪರಿವಾರವೂ ಟೀಪುವಿನ ಹಾಗು ಅವನ ಕೈಕೆಳಗಿನ ಸರದಾರರಿಂದ ಕಷ್ಟಗಳನ್ನನುಭವಿಸಿ, ಅಲ್ಲಿಂದ ಅವನು ಪಾರಾಗಿ ಪುನಃ ಕೊಡಗಿನ ಅರಸನಾದದ್ದೂ ಹಾಗು ಇನ್ನೂ ಎಷ್ಟೋ ಹೃದಯಂಗಮ ಸಂಗತಿಗಳು ಇದರಲ್ಲಿವೆ.

## ಪಾಣಿಗ್ರಹಣ

ಲೇ: ರಂಗನಾಥತನಯ. ಪುಟ ೩೬, ಬೆಲೆ ೩ ಆಣೆ

ಇದೊಂದು ಅತ್ಯುಚ್ಚ ಧಾರ್ಮಿಕ ತತ್ವಗಳನ್ನು ಸುಲಭ ರೀತಿಯಲ್ಲಿ ಬೋಧಿಸುವ ಐತಿಹಾಸಿಕ ಕತೆ.

## ನನ್ನಗತಿ

ಲೇಖಕರು ಭಿ ಪ. ಕಾಳೆ ಪುಟ ೪೪ ಬೆಲೆ ೪ ಆಣೆ

(ಇದೊಂದು ಪತ್ತೇದಾರಿ ಕತೆ)

## ಮರಾಟರೂ-ಇಂಗ್ಲಿಷರೂ

ಇದೊಂದು ತುಲನಾತ್ಮಕ ದೃಷ್ಟಿಯಿಂದ ಬರೆದ ಸಾಧಾರ ಐತಿಹಾಸಿಕ ವಾಚನೀಯ ಪುಸ್ತಕ. ಭಾಗ ೧. ೨ ಮತ್ತು ೩. ಬೆಲೆ ೨ ರೂ. ಪುಟ ೩೫೦

## ದಳವಾಯಿ ಸಾತನಾಮಿ

ಅಕಬರನ ಕಾಲದ ಐತಿಹಾಸಿಕ ಕಥೆ ಪುಟ ೫೦ ಬೆಲೆ ೪ ಆಣೆ

## ಆಚಾರ್ರು ಮಗಳು

ಇದೊಂದು ಆಧುನಿಕ-ಸುಶಿಕ್ಷಿತ ತರುಣ-ತರು[illegible] ಸಂಬಂಧದ ಸಾಮಾಜಿಕ ನಾಟಕ ಪುಟ ೫೬ ಬೆಲೆ ೪ ಆಣೆ.

ಶ್ರೀ ಶೇಷಾಚಲ ಪ್ರೆಸ್, ಆನಂದವನ [ಹಾವೇರಿ]